ಕಾರಂತರ 'ಧರ್ಮರಾಯನ ಸಂಸಾರ' ಪುಸ್ತಕ ವಿಭಾಗ



ಮನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಮಾರ್ಚ್ ೧೯೯೬



ಪಕ್ಷಿ ಸಂಗಾತಿಯ
ಜನ್ಮ ಶತಾಬ್ದಿ

ಬೆಲೆ: ರೂ. ೬-೦



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಮಧುಶೇಖರನ್
ಚಿತ್ರಕೃಪೆ:
'ನ್ಯಾಶನಲ್ ಜಿಯಾಗ್ರಫಿಕ್'

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ವ್ಯಂಗ್ಯಚಿತ್ರ ಕೃಪೆ:
ರಾಮಕೃಷ್ಣ ಮಿಶನ್ನಿನ
'ಪ್ರಬುದ್ಧ ಭಾರತ' ಪತ್ರಿಕೆ



ಮೇಲಿನದು ಕೇವಲ ವ್ಯಂಗ್ಯಚಿತ್ರವಲ್ಲ. ಸದ್ಯದ ವಿದ್ಯಾರ್ಥಿಗಳ ಪಾಡನ್ನು ತೋರಿಸುವ ಕಟುಸತ್ಯ ಆ ಗೆರೆಗಳಲ್ಲಿ ಅಡಗಿದೆ. ಟೆಲಿವಿಜನ್ನೆಂಬ ಕಿಂದರಿ ಜೋಗಿ ನಮ್ಮ ಎಳೆಯರನ್ನು ಎತ್ತ ಸೆಳೆದೊಯ್ಯುತ್ತಾನೆಂಬುದು ಊಹಿಸಲಾಗದಂಥ ವಿಚಾರ.

ಈ ಕಿಂದರಿ ಜೋಗಿಯನ್ನು ಹದ್ದು ಬಸ್ತಿನಲ್ಲಿಟ್ಟುಕೊಳ್ಳುವುದೇ ಪಾಲಕರು ಎಳೆಯರಿಗೂ ಆ ಮೂಲಕ ನಾಳಿನ ದೇಶಕ್ಕೂ ಮಾಡಬಹುದಾದ ಮಹದುಪಕಾರ.

• ವ್ಯವಸ್ಥಾಪಕ ಸಂಪಾದಕ




## ಏಡ್ಸ್: ಹೊಸ ಸುದ್ದಿ

'ಕಸ್ತೂರಿ' ಫೆಬ್ರುವರಿ, ೯೬)ಯಲ್ಲಿ ಬಂದ ಏಡ್ಸ್ ರೋಗಕ್ಕೆ ಸಂಬಂಧಿಸಿದ ಲೇಖನದಲ್ಲಿ ಅದು ಭಾರತದಲ್ಲಿ ಹರಡಲು ವೇಶ್ಯೆಯ ಸಂಗವೇ ಕಾರಣವೆಂದು ಪ್ರತಿಪಾದಿಸುವ ಪ್ರಯತ್ನವಿದೆ. ಒಬ್ಬ ವ್ಯಕ್ತಿ ವೇಶ್ಯೆಯನ್ನು ಕೂಡಿರಬಹುದು; ಅವನಿಗೆ ಏಡ್ಸ್ ಕಾಯಿಲೆ ಬಂದಿರಲೂ ಬಹುದು. ಆದರೆ ಅದರಿಂದ ಅವನ ಕಾಯಿಲೆಗೆ ವೇಶ್ಯೆಯೇ ಕಾರಣವೆನ್ನುವುದು ಸಿದ್ಧವಾಗುವುದಿಲ್ಲ. ವೈದ್ಯಕೀಯ ಕ್ಷೇತ್ರದಲ್ಲಿ ಇಂತಹ ಸಮೀಕ್ಷೆಗಳು ನಡೆಯುತ್ತಲೇ ಇರುತ್ತವೆ. ಕೇವಲ ಇವುಗಳ ಫಲಿತಾಂಶಗಳಿಂದ ನಿರ್ಧಾರಕ್ಕೆ ಬರುವುದು ಯುಕ್ತವಲ್ಲ. ಇನ್ನಷ್ಟು ಪೂರಕ ಪುರಾವೆಗಳು ಬೇಕೇ ಬೇಕಾಗುತ್ತವೆ.

ಏಡ್ಸ್ ಕಾಯಿಲೆಗೆ ಸಂಬಂಧಿಸಿದಂತೆ ನಾನು ಹೀಗೆ ಬರೆಯಲು ಒಂದು ಸ್ಪಷ್ಟ ಕಾರಣವಿದೆ.

ಇತ್ತೀಚೆಗೆ ಥಾಯ್‌ಲ್ಯಾಂಡಿನ ಚ್ಯಾಂಗ್‌ಮಾಯ್ ಎಂಬಲ್ಲಿ ಜರುಗಿದ ಏಶಿಯಾ ಪೆಸಿಫಿಕ್ ಏಡ್ಸ್ ಸಮ್ಮೇಲನದಲ್ಲಿ ಅಮೆರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದ ಮೈರಾನ್ ಎಸ್ಸೆಕ್ಸ್ ಮಾತನಾಡುತ್ತಾ ಭಾರತದಲ್ಲಿ ಏಡ್ಸ್ ಕಾಯಿಲೆಯ ಬಹು ದೊಡ್ಡ ಭಾಗವು ಚರ್ಮದ ಮೂಲಕ ಹರಡುವ ಉಪವರ್ಗದ ವೈರಾಣುಗಳದು ಎಂದಿದ್ದಾರೆ.

ಕೇವಲ ರಕ್ತ ಮತ್ತು ಲೈಂಗಿಕ ಸಂಪರ್ಕಗಳ ಮೂಲಕ ಏಡ್ಸ್ ಹರಡುತ್ತದೆ ಎಂದು ಇಷ್ಟುಕಾಲ ನಮ್ಮಲ್ಲಿ ಹೇಳುತ್ತಾ ಬಂದದ್ದು ಎಷ್ಟು ದೊಡ್ಡ ಪ್ರಮಾದವೆಂದು ಇದರಿಂದ ಸ್ಪಷ್ಟವಾಗುತ್ತದೆ.

ಮಾನವನಲ್ಲಿರುವ ರೋಗ ಪ್ರತಿಬಂಧಕ ವ್ಯವಸ್ಥೆಯನ್ನು ನಾಶಗೊಳಿಸುವ ಎಚ್‌ಐವಿಗಳಲ್ಲಿ ಹಲವಾರು ಉಪವರ್ಗ (Serotype)ಗಳಿದ್ದು ಭಾರತದಲ್ಲಿ ಏಡ್ಸ್ ಕಾಯಿಲೆಯನ್ನು ಹರಡುವ ವೈರಾಣುಗಳಲ್ಲಿ ಅತ್ಯಂತ ಪ್ರಮುಖವಾದುದು 'ಸಿ' ಉಪವರ್ಗ (Serotype-c) ದ್ದೆಂದೂ, ಇದು ರಕ್ತದ ಮೂಲಕ ದೇಹವನ್ನು ಸೇರುವ ಬದಲು ಚರ್ಮದ ಒಂದು ವಿಶಿಷ್ಟ ವರ್ಗದ ಕೋಶಗಳ ಮೂಲಕ ದೇಹವನ್ನು ಸೇರುತ್ತದೆಯೆಂದೂ ಮತ್ತು ಈ ವರ್ಗದ ಕೋಶಗಳು ದೇಹದ ಎಲ್ಲಾ ಭಾಗಗಳ ಚರ್ಮದಲ್ಲಿಯೂ ಇರುತ್ತವೆಯೆಂದೂ ಈ ವೈಜ್ಞಾನಿಕರು ಹೇಳಿದ್ದಾರೆ. ಇದು ವಸ್ತುಸ್ಥಿತಿ ಎಂದಾದರೆ ಭಾರತದಲ್ಲಿ ಏಡ್ಸ್ ಕಾಯಿಲೆಯನ್ನು ಪ್ರತಿಬಂಧಿಸಲು ಹೇಗೆ ಸಾಧ್ಯವೆನ್ನುವುದು ಉತ್ತರಿಸಲಾಗದ ಪ್ರಶ್ನೆಯಾಗಿಯೇ ಉಳಿಯಬಹುದು.

ಮಂಗಳೂರು ಬ.ಎನ್. ಜೋಶಿ

## ಮಹಾನುಭಾವನ ನೆನಪು

ಫೆಬ್ರುವರಿ ೧೯೯೬ರ ಸಂಚಿಕೆಯಲ್ಲಿ ಎಸ್.ಆರ್. ನೀರಗಟ್ಟಿಯವರು ಡಾ. ಪಾಲ್ ಬ್ರುಂಟನ್ ಅವರನ್ನು ಓದುಗರಿಗೆ ಪರಿಚಯ ಮಾಡಿಕೊಟ್ಟದ್ದು ಪ್ರಶಂಸನಾರ್ಹ. ಡಾ. ಪಾಲ್‌ಬ್ರುಂಟನ್ ಬರೆದ 'The wisdom of the overself' ಎಂಬ ಪುಸ್ತಕವನ್ನು ಓದಿ ನಾನು ಪುಲಕಿತನಾಗಿದ್ದೆ. ಆ ಮಹಾನುಭಾವನ ಭಾವಚಿತ್ರವನ್ನು ನೋಡಬೇಕೆಂದು ತುಂಬಾ ಆಸೆಯಿತ್ತು. ಫೆಬ್ರುವರಿ ೧೯೯೬ರ ಕಸ್ತೂರಿ ಸಂಚಿಕೆಯು ನನ್ನ ಮಹದಾಶೆಯನ್ನು ಪೂರೈಸಿತು.

ಬೆಳಗಾವಿ ರಾಘವೇಂದ್ರಾಚಾರ್ಯ ಯಲಬುರ್ಗಿ

## ಮರೆಗುಳಿತನಕ್ಕೆ ಮದ್ದು

ಫೆಬ್ರುವರಿ ೯೬ರ ಸಂಚಿಕೆಯಲ್ಲಿ ಪ್ರಕಟವಾದ 'ಮರೆಗುಳಿತನ ಹೇಗೆ ಬರುತ್ತದೆ?' ಎಂಬ ಲೇಖನ ಬಹು ಸುಂದರವಾಗಿ ಮೂಡಿ ಬಂದಿದೆ. ಯಾವುದೇ ವ್ಯಕ್ತಿಗಾದರೂ ಮರೆಗುಳಿತನವು ಇರುವುದು ಸಾಮಾನ್ಯ. ಅದರಂತೆ ನನಗೂ ಇತ್ತು.

ಮುಳವಾಡ ಕಾವ್ಯ ಪ್ರಿಯ

ನಿಜವಾಗಿ ಹೇಳಬೇಕೆಂದರೆ ಅಗತ್ಯದ್ದು ಮರೆತುಹೋಗುವುದಿಲ್ಲ. ನಿಮ್ಮ ಹೆಸರನ್ನು ನೀವು ಮರೆಯಬಲ್ಲಿರಾ? ನೀವು ಯಾವುದಾದರೂ ವಿಷಯವನ್ನು ಮರೆತಿರಿ ಅಥವಾ ಮರೆಯುತ್ತಿದ್ದೀರೆಂದರೆ ಮನದಾಳದಲ್ಲಿ ನೀವು ಆ ವಿಷಯವನ್ನು ದ್ವೇಷಿಸುತ್ತೀರಿ ಎಂದು ಅರ್ಥ.

ಕುಕನೂರು ಎಮ್. ಎಸ್. ಹಿರೇಮನಿ

## ಮುದ ನೀಡಿದ ಮಿನಿಗತೆಗಳು

ಫೆಬ್ರುವರಿ ಕಸ್ತೂರಿಯಲ್ಲಿ ಮೂಡಿ ಬಂದ ೧೫ ಏಡಂಬನಾತ್ಮಕ ಕಥೆಗಳು ಭಾರತೀಯ ರಾಜಕೀಯ ರಂಗದಲ್ಲಿ ನಡೆಯುವ ಘಟನೆಗಳನ್ನು ಸೂಕ್ತ ಸನ್ನಿವೇಶಗಳೊಂದಿಗೆ ಅರ್ಥವತ್ತಾಗಿ ಚಿತ್ರಿಸಿವೆ.

ಧಾರವಾಡ ದೇವು. ಎಸ್. ಶಹಾಪೂರ

ಈ ಸಲ ನೀವು ಸ್ಪೇಷಲ್ಲಾಗಿ ನೀಡಿರುವ ಹದಿನೈದು ಏಡಂಬನಾತ್ಮಕ ಕಥೆಗಳು ತುಂಬಾ ರೋಚಕವಾಗಿವೆ. ವ್ಯಕ್ತಿ ಸ್ಥಳ ಹಾಗೂ ಕಾಲವನ್ನು ಗಣನೆಗೆ ತೆಗೆದುಕೊಳ್ಳದೇನೆ ಈ ಕಥೆಗಳನ್ನು ಓದಿದರೆ ಖಂಡಿತವಾಗಿಯೂ ಅವು ನಮಗೆ ತೀರ ಹತ್ತಿರವೆನಿಸುತ್ತವೆ.

'ಶ್ವೇತ ಕ್ರಾಂತಿ' 'ನ್ಯಾಯ' 'ಪಶ್ಚಾತ್ತಾಪ' 'ಏರ್ಪಾಡು' ಕಥೆಗಳಂತೂ ನಮ್ಮ ಸದ್ಯದ ವ್ಯವಸ್ಥೆಗೆ ಸಹಜವಾಗಿಯೇ ಕನ್ನಡಿ ಹಿಡಿಯುತ್ತವೆ.

ಹಾರೂಗೇರಿ ಕಲ್ಲೇಶ್ ಕುಂಬಾರ್

ಫೆಬ್ರವರಿ ಕಸ್ತೂರಿಯಲ್ಲಿಯ ೧೫ ಏಡಂಬನಾತ್ಮಕ ಮಿನಿಕಥೆಗಳು ಈ ಹಿಂದಿನ ಕಥಾ ಮೋದಕ, ಕನ್ನಡ ಮಿನಿ ಕಥೆಗಳಿಗಿಂತ ಭಿನ್ನವಾಗಿದ್ದವು. 'ಕಸ್ತೂರಿ'ಯ ಓದುಗರ ಮನದಲ್ಲಿ ಇವು ಬಹಳಕಾಲ ಉಳಿಯುವಂತಹವು. ಇದರಲ್ಲಿಯ 'ಹತ್ತು ಪೈಸೆ' ಗಂಭೀರ ಚಿಂತನೆಗೆ ಹಚ್ಚಿದರೆ 'ಸೀಮೆ ಎಣ್ಣೆ' 'ಪ್ರತೀಕ್ಷೆ' 'ಲಾ ಆ್ಯಂಡ್ ಆರ್ಡರ್' ಮತ್ತು 'ಯುಕ್ತಿ' ಕಥೆಗಳು ಹೊಟ್ಟೆ ಹುಣ್ಣಾಗುವಂತೆ ನಗಿಸಿದವು.

ಹೊನ್ನಳ್ಳಿ ನ್ಯಾಮತ ಎಂ. ಹುಣಚಾಳ

## ಚಿಂತನಾರ್ಹ ಚಿಂತನ

ಫೆಬ್ರುವರಿ ೧೯೯೬ರ ಕಸ್ತೂರಿ ಆಕರ್ಷಕ ಮುಖಪುಟದೊಡನೆ ಮೂಡಿಬಂದಿದೆ.

ಈ ಬಾರಿಯ ನಿಮ್ಮ 'ಚಿಂತನ' ನಿಜಕ್ಕೂ ಚಿಂತನಾರ್ಹ. ಡಿಸೆಂಬರ್ ೨೩ರಂದು ದಬ್ವಾಲಿಯಲ್ಲಿ ನಡೆದ ಅಗ್ನಿ ದುರಂತದಲ್ಲಿ ನೂರಾರು ಶಾಲಾ ಮಕ್ಕಳು ಸುಟ್ಟು ಭಸ್ಮವಾದ ಸಂಗತಿ ಎದೆಯನ್ನು ತಲ್ಲಣಗೊಳಿಸುವಂತಹುದು. ಯಾವುದೇ ಸಭೆ ಸಮಾರಂಭಗಳನ್ನು ಏರ್ಪಡಿಸುವ ಮೊದಲು ಯಾವುದೇ ಅನಾಹುತ ಆಕಸ್ಮಿಕಗಳು ಸಂಭವಿಸದಂತೆ ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳುವುದು ತುಂಬಾ ಅವಶ್ಯ ಎಂಬುದನ್ನು ಆ ಘಟನೆ ಎತ್ತಿತೋರಿಸಿದೆ.

ಕುಕನೂರು ಎಚ್.ಆರ್. ವಸ್ತ್ರದ

## ಯಾವ ಕಾಲಕ್ಕೆ?

ತೊಂಭತ್ನಾಲ್ಕರಲ್ಲಿ ಅಡಿಯಿಟ್ಟಿರುವ ಎಸ್ಸೆನ್‌ರವರ ನುಡಿಗಳು 'ಕಸ್ತೂರಿ' ಫೆಬ್ರುವರಿ ೯೬ ಸಂಚಿಕೆಯ ಮೌಲ್ಯವನ್ನು ಇಮ್ಮಡಿಗೊಳಿಸಿದೆ. ನಿಜಲಿಂಗಪ್ಪನವರ ಹಿತ ನುಡಿಗಳು, ಅನುಭವಗಳು 'ದಪ್ಪ ಚರ್ಮದ' ಇಂದಿನ ರಾಜಕಾರಣಿಗಳಿಗೆ ನಾಟುವದು ಯಾವ ಕಾಲಕ್ಕೋ?

ಕಸ್ತೂರಿಯಲ್ಲಿ ವ್ಯಂಗ್ಯ ಚಿತ್ರಗಳಿಗೇಕೆ ಸ್ಥಳ ಅಭಾವ? (ಫೆಬ್ರುವರಿ ಸಂಚಿಕೆಯಲ್ಲಿ ಬರೀ ಒಂದು!) ಪ್ರತೀ ತಿಂಗಳೂ ಸಂಚಿಕೆಗೆ ಎಂಟು ಹತ್ತು ಚಿತ್ರಗಳಾದರೂ ಇದ್ದರೆ ಉತ್ತಮವೆಂದು ನನ್ನ ಅನಿಸಿಕೆ.

ಶಿರಸಿ ರತ್ನಾವತಿ ಜೆ.ಎಚ್.

ಕಳೆದ ಡಿಸೆಂಬರ್ ೧೦ಕ್ಕೆ ತೊಂಬತ್ನಾಲ್ಕು ವರ್ಷಕ್ಕೆ ಕಾಲಿಟ್ಟ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಮನನೊಂದು, ಬೇಸತ್ತು ಈಗಿನ ರಾಜಕೀಯ ದುಃಸ್ಥಿತಿಯನ್ನು ಜನಮನಕ್ಕೆ ಮುಟ್ಟಿಸಿದ್ದಾರೆ. ಇವರ ಸಲಹೆ-ಸೂಚನೆ ರಾಷ್ಟ್ರದ ಹಿತ ದೃಷ್ಟಿಯಿಂದ ಸೂಕ್ತ ಹಾಗೂ ಸಾಧು. ಗಾಂಧೀಜಿಯವರ ಅರ್ಥ ಚಿಂತನೆಯನ್ನು ಮೈಗೂಡಿಸಿಕೊಂಡ ನಿಜಲಿಂಗಪ್ಪನವರು ನಮ್ಮ ದೇಶ ಆರ್ಥಿಕವಾಗಿ ಹಿಂದುಳಿಯಲು ಕಾರಣಗಳನ್ನು ತಿಳಿಸಿರುತ್ತಾರೆ. ಸಾಂಕ್ರಾಮಿಕ ರೋಗವಾಗಿ ಇಡೀ ದೇಶವನ್ನೇ ಆವರಿಸಿರುವ ಭ್ರಷ್ಟಾಚಾರ ತೊಲಗದೆ ದೇಶಕ್ಕೆ ಹಿತವಿಲ್ಲ ಎಂಬುದು ನಿರ್ವಿವಾದ. ನಿಜಲಿಂಗಪ್ಪನವರ ಮಾರ್ಗ ಸೂಚಿಗಳನ್ನು ಸವಾಲಾಗಿ ಸ್ವೀಕರಿಸಿದರೆ ದೇಶದ ಸರ್ವತೋಮುಖ ಉನ್ನತಿ ಸಾಧ್ಯ.

ಹೊನ್ನಾಳಿ ಸಿ. ಇ. ಬಸವಣ್ಯಪ್ಪ

## ಹೈಜಂಪ್?

ಜನೆವರಿ ಸಂಚಿಕೆಯ ೭೫ನೆಯ ಪುಟದಲ್ಲಿ ಪ್ರಕಟವಾದ ವ್ಯಂಗ್ಯ ಚಿತ್ರದಲ್ಲಿ ಹೈ ಜಂಪ್ ಚಾಂಪಿಯನ್ ಎಂದಿದೆ. ಅದು ಲಾಂಗ್ ಜಂಪ್ ಚ್ಯಾಂಪಿಯನ್ ಎಂದಿದ್ದರೆ ಸೂಕ್ತವಾಗುತ್ತಿತ್ತೇನೋ?

ಧಾರವಾಡ ಲೀಲಾಧರ ಭಂಡಾರಿ

## ಮಾತನಾಡುವ ಪುಸ್ತಕಗಳು

'ವಾಸುಕಿ'ಯವರ 'ಮಾತನಾಡುವ ಪುಸ್ತಕಗಳು' ಲೇಖನ ಆಶ್ಚರ್ಯವನ್ನುಂಟುಮಾಡಿತು. ಆದರೆ ಅದು ಭಾರತಕ್ಕೆ ಬಂದರೆ ಖಂಡಿತವಾಗಿಯೂ ಯಶಸ್ವಿಯಾಗಲಿಕ್ಕಿಲ್ಲ. ಕಿವಿಯಿಂದ ಕೇಳುತ್ತಾ ಕೈಯಿಂದ ಕೆಲಸ ಮಾಡಬ

(ಆರನೇ ಪುಟಕ್ಕೆ)

# ಅಂತರಂಗ



## ಮದನ ಕಾಮನ ಕಥೆಗಳು

೭

ಪ್ರಥಮ ರಾತ್ರಿಯ ಬದಲು
ಕಥಾ-ಕಾಲಕ್ಷೇಪ

...ಶೀಲ



## ಸ್ಥಿರ ಶೀರ್ಷಿಕೆಗಳು



## ಚಿಳಕಿಂಡಿ

ತಪ್ಪು, ಪ್ರಮಾದವಾಗಬಾರದೆ? ಹಾಗಾದರೆ ಅದನ್ನು ತಿದ್ದಿಕೊಳ್ಳಿ

—ಮಹಾತ್ಮಾ ಗಾಂಧಿ

ದೇವರು ಕೂಡಿಸಿದ್ದನ್ನು ಮನುಷ್ಯನು ಅಗಲಿಸಬಾರದು.

—ಬೈಬಲ್

ಅವಸರದಲ್ಲಿ ಪಡೆದದ್ದು ಅವಸರದಲ್ಲಿಯೆ ಕಳೆದುಹೋಗುತ್ತದೆ.

—ಯಹೂದಿ ಗಾದೆ

ಹೊರಗೆ ಸಂತ, ಮನೆಯಲ್ಲಿ ದೆವ್ವ.

—ಜಾನ್ ಬನಿಯನ್

ಅನೇಕ ಜೀವನಗಳ ಸಾರಸರ್ವಸ್ವವೇ ಇತಿಹಾಸ.

—ಥಾಮಸ್ ಕಾರ್ಲೈಲ್

ಸತ್ಯವೆನ್ನುವುದು ಒಂದು ವಿಶಾಲ ವೃಕ್ಷದಂತೆ. ಪೋಷಿಸಿದಷ್ಟೂ ಫಲ ಹೆಚ್ಚು.

—ಜವಾಹರಲಾಲ ನೆಹರೂ

ಕೂಡಿ ಕೆಡಬಾರದು. ಕೆಟ್ಟು ಕೂಡಬಾರದು.

—ತ.ರಾ.ಸು.

ಪ್ರತಿಯೊಬ್ಬನಿಗೂ ಒಂದು ಮನೆ, ಒಬ್ಬಳು ಹೆಂಡತಿ ಇರಲೇಬೇಕು—ಸ್ವಂತದ್ದಾದಷ್ಟು ಒಳಿತು.

—ಬೀಚಿ

ಪುಸ್ತಕ ವಿಭಾಗ
ಡಾ. ಶಿವರಾಮ ಕಾರಂತರ
ಕಾದಂಬರಿ
ಧರ್ಮರಾಯನ ಸಂಸಾರ
ಸಂಗ್ರಹ: ಶ್ರೀ ಹಾ.
...೧೨೩

ಆರೋಗ್ಯದಂಗಳ
ಯಾವ ರೋಗಕ್ಕೆ
ಯಾವ ಆಹಾರ?
ಡಾ. ಕೆ. ಜಿ ಅರಳೀಕಾಯಿ
...೧೪೫

(ಮೂರನೇ ಪುಟದಿಂದ)

ಹುದಾದರೂ, ಪುಸ್ತಕದಲ್ಲಿ ಓದಿದಷ್ಟು ಕಿವಿಯಿಂದ ಕೇಳ ಲಾಗುತ್ತದೆಯೇ? ಎಷ್ಟೆಂದರೂ ಅದು ಸೀಮಿತ ೬೦ ನಿಮಿಷದ್ದೋ, ೯೦ ನಿಮಿಷದ್ದೋ ಕ್ಯಾಸೆಟ್. ಆದರೆ ಅದರಲ್ಲಿ ಎಷ್ಟು ವಿಷಯಗಳು ಇದ್ದೀತು?

**ಸುರತ್ಕಲ್ ಪಿ. ರಾಜೇಶ್ ಐತಾಳ**

### ಶಂಬಾ ಸ್ಮರಣೆ

ಜನವರಿ ತಿಂಗಳ ಕಸ್ತೂರಿ ಸೊಗಸಾಗಿ ಬಂದಿದೆ. ಇದರಲ್ಲೂ ಡಾ. ಜಿ.ಎಂ. ಹೆಗಡೆ ಅವರು 'ಶಂಬಾ' ಬಗ್ಗೆ ಉತ್ತಮ ಲೇಖನ ನೀಡಿದ್ದಾರೆ. ಅದನ್ನು ಓದಿದಾಗ 'ಶಂಬಾ' ಹಿಂದೆ ನನಗೆ ಸ್ಫೂರ್ತಿ ನೀಡಿದ ಒಂದು ಸಂದರ್ಭ ನೆನಪಿಗೆ ಬರುತ್ತಿದೆ. ನಾನು ಜಾನಪದ ವಸ್ತು ಸಂಗ್ರಹಾಲಯದ ಕ್ಷೇತ್ರಕಾರ್ಯದ ಸಲುವಾಗಿ ಉತ್ತರ ಕರ್ನಾಟಕ ಭಾಗಕ್ಕೆ ಹೋಗುವ ಮುಂಚೆ ಧಾರವಾಡದ ಸಾಧನಕೇರಿಗೆ ಬಂದೆ, ಬೇಂದ್ರೆ ಅವರನ್ನು ಸಂದರ್ಶಿಸಿ, ಅಲ್ಲಿಯೇ ವಾಸವಾಗಿದ್ದ ಕಟ್ಟೀಮನಿಯವರನ್ನು ಕಂಡು, 'ಶಂಬಾ' ಅವರ ದರ್ಶನವನ್ನೂ ಪಡೆದೆ.

ಆಗ 'ಶಂಬಾ' ''ನಿಮ್ಮ ಕುರುಬರ ಬಗ್ಗೆ ಅಧ್ಯಯನ ಮಾಡಲು ನೀವೇ ಸಮರ್ಥರು. ಜನ ಸಂಖ್ಯೆ, ಜನರ ಲಕ್ಷಣ, ಹಬ್ಬಗಳು, ಜನರ ಬೆಡಗು, ಲಗ್ನ ಸಂಪ್ರದಾಯ ಗಳು, ಕುರಿ ಬಲಿ, ಹಾಡುಗಳು ಮುಂತಾದ ಸಂಪ್ರದಾಯ ಗಳನ್ನು ಸಂಗ್ರಹಿಸಿ" ಎಂದು ಸೂಚಿಸಿದರು. ಅಲ್ಲದೆ 'ಶಂಬಾ' ಅವರು ತಾವು ರಚಿಸಿದ ''ಹಾಲುಮತ ದರ್ಶನ" ಕೃತಿಯನ್ನು ನನಗೆ ತೋರಿಸಿ ಸ್ಥಳನಾಮಗಳ ಬಗ್ಗೆಯೂ ಕೆಲಸ ಮಾಡಲು ನನಗೆ ಸೂಚಿಸಿದ್ದರು. ಮಹಾರಾಷ್ಟ್ರ ಸರಕಾರ ಈ ಬಗ್ಗೆ ಮಾಡಿದ ಕೆಲಸವನ್ನು ನಮ್ಮ ಸರಕಾರ ಮಾಡಲಿಲ್ಲ ಎಂದವರು ನೊಂದು ನುಡಿದಿದ್ದರು.

**ಧರ್ಮಸ್ಥಳ ಪಿ.ಆರ್. ತಿಪ್ಪೇಸ್ವಾಮಿ**

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೪೦ ಮಾರ್ಚ್ ೧೯೯೭ ಸಂಚಿಕೆ: ೭

## ಮಾತೃಪ್ರೇಮ

ಅಮೇರಿಕಾದ ಅಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್ ಅವರ ಬಳಿ ಒಮ್ಮೆ ಕರ್ನಲ್ ಒಬ್ಬ ತರುಣನನ್ನು ಕರೆದುಕೊಂಡು ಬಂದ. ಮೇಲಧಿಕಾರಿಯ ಅಪ್ಪಣೆಯಿಲ್ಲದೆ ಸೈನ್ಯವನ್ನು ಬಿಟ್ಟು ತೆರಳಿದ ಆರೋಪದ ಮೇಲೆ ಚೌಕಶಿಯಾಗಿತ್ತು. ಆತನಿಗೆ ಯಾವ ಶಿಕ್ಷೆ ವಿಧಿಸಬೇಕು ಎಂಬುದನ್ನು ನಿಗದಿಪಡಿಸಲು ಅಧ್ಯಕ್ಷರೆಡೆಗೆ ಕರೆತರಲಾಗಿತ್ತು. ಕರ್ನಲ್ ಹೇಳಿದ್ದನ್ನು ಕೇಳಿಸಿಕೊಂಡ ನಂತರ ಲಿಂಕನ್ನರು, "ಈ ಬಗ್ಗೆ ನೀನು ಏನು ಹೇಳುತ್ತೀ?' ಎಂದು ಆ ತರುಣನನ್ನು ಕೇಳಿದರು.

ತರುಣ ಹೇಳತೊಡಗಿದ– "ಸಾರ್, ನನ್ನ ತಾಯಿ ಕಾಯಿಲೆ ಬಿದ್ದಿದ್ದಾಳೆ ಎಂಬುದಾಗಿ ಪತ್ರ ಬಂದೊಡನೆ ಆಕೆಯನ್ನು ನೋಡಲು ಹೋಗಬೇಕೆಂದು ನಾನು ರಜೆ ಕೇಳಿದೆ. ಕ್ಯಾಪ್ಟನ್ ರಜೆ ಕೊಡಲಿಲ್ಲ. ಆ ಕಾರಣದಿಂದಾಗಿ ಕರ್ನಲ್‌ರ ಬಳಿಗೆ ಹೋದೆ. ಅವರೂ ರಜೆ ಕೊಡಲು ನಿರಾಕರಿಸಿದರು. ಅಷ್ಟರಲ್ಲಿ ನನ್ನ ತಾಯಿ ಇನ್ನು ಬಹಳ ಕಾಲ ಉಳಿಯುವುದಿಲ್ಲ ಎಂಬುದಾಗಿ ಇನ್ನೊಂದು ಪತ್ರ ನನಗೆ ಬಂತು. ಪುನಃ ರಜೆಗಾಗಿ ಕ್ಯಾಪ್ಟನ್ ಮತ್ತು ಕರ್ನಲ್‌ರನ್ನು ಭೇಟಿಯಾದೆ. ಆಗಲೂ ರಜೆ ಮಂಜೂರಾಗಲಿಲ್ಲ. ಸಾಯುವ ಮೊದಲು ಆಕೆಯನ್ನೊಮ್ಮೆ ನೋಡಬೇಕೆನ್ನುವ ತೀವ್ರ ಇಚ್ಛೆ ನನಗಾದುದರಿಂದ ನಾನು ಹಾಗೆಯೇ ಹೋದೆ."

"ಸಾಯುವ ಮೊದಲು ನಿನ್ನ ತಾಯಿಯನ್ನು ಕಂಡೆಯಾ?" ಲಿಂಕನ್ ಕೇಳಿದರು.

"ಹೌದು ಸಾರ್, ನಾನು ಹೋಗಿ ತಲುಪಿದ ಸ್ವಲ್ಪ ಸಮಯದಲ್ಲೇ ಆಕೆ ಪ್ರಾಣ ಬಿಟ್ಟಳು."

ಲಿಂಕನ್ನರು "ಸರಿ" ಎಂದವರೇ ಒಂದು ಕಾಗದವನ್ನೆತ್ತಿಕೊಂಡು ಅದರಲ್ಲಿ ಏನನ್ನೋ ಬರೆದು ಆ ತರುಣನ ಕೈಗಿತ್ತರು. "ನಿನ್ನನ್ನು ಕ್ಷಮಿಸಲಾಗಿದೆ. ಮುಂದೆ ನೀನು ಒಳ್ಳೆಯ ರೀತಿಯಲ್ಲಿ ವರ್ತಿಸುವೆ ಎಂಬ ಖಾತ್ರಿ ನನಗಿದೆ," –ಎಂಬುದಾಗಿ ಆ ಕಾಗದದಲ್ಲಿ ಬರೆಯಲಾಗಿತ್ತು.

ಇದನ್ನು ತಿಳಿದ ಕರ್ನಲ್ ಸಾಹೇಬರಿಗೆ ಸಿಟ್ಟು ಬಂತು. ತನ್ನೊಳಗೇ ಏನನ್ನೋ ಪುಟುಪುಟಿಸಿದವರೇ ಅವರು ಲಿಂಕನ್‌ರ ಕಡೆ ತಿರುಗಿ ಹೇಳಿದರು– "ತಾವು ಈತನನ್ನು ಕ್ಷಮಿಸಿದ್ದೀರಿ. ಆದರೆ ನೀವು ಹಾಗೆ ಮಾಡಬಾರದಾಗಿತ್ತು ಎಂದು ನನಗನಿಸುತ್ತದೆ. ಇನ್ನು ಮುಂದೆಯೂ ಈತ ಆಜ್ಞೆಯನ್ನು ಉಲ್ಲಂಘಿಸುವುದಿಲ್ಲ ಎಂದು ಹೇಗೆ ಹೇಳುತ್ತೀರಿ?"

ಲಿಂಕನ್ ಹೇಳಿದರು– "ಛೆ... ಛೆ... ಸಾಯಲು ಸಮೀಪಿಸಿದ ತನ್ನ ತಾಯಿಯ ದರ್ಶನಕ್ಕಾಗಿ ತನ್ನ ಸರ್ವಸ್ವವನ್ನೂ ತೊರೆಯಲು ಸಿದ್ಧನಾದ ಈತ ಮುಂದೆಂದೂ ಕರ್ತವ್ಯ ವಿಮುಖನಾಗುವದು ಸಾಧ್ಯವೇ ಇಲ್ಲ."

ಲಿಂಕನ್ನರ ಭವಿಷ್ಯ ಮುಂದೆ ನಿಜವಾಯಿತು.

• ಪ್ರಿಯತಮ

"ಆಕಸ್ಮಿಕ...."

ಇದು ಹಲವಾರು ಖ್ಯಾತನಾಮರಿಗೆ ಜನ್ಮ ನೀಡಿದ ಶಬ್ದ. ನಿಮಗೆ ಗಾಂಧಿ ಶುದ್ಧ ಶಾಕಾಹಾರಿಯಾದ ಕಥೆ ಗೊತ್ತಿದೆಯಲ್ಲವೆ? ಅಲ್ಲಿ ಕೆಲಸಮಾಡಿದ್ದೂ ಈ ಆಕಸ್ಮಿಕವೆ. ಹೀಗೆಯೇ ಆಕಸ್ಮಿಕವೊಂದರಿಂದ ಪಕ್ಷಿಪ್ರೇಮಿಯಾಗಿ, ಪಕ್ಷಿ ಪ್ರೇಮವನ್ನೇ ತಮ್ಮ ಜೀವನದ ಧ್ಯೇಯವಾಗಿಸಿಕೊಂಡು ಆ ಧ್ಯೇಯದಿಂದ ಪಕ್ಷಿತಜ್ಞ ಎಂಬ ಖ್ಯಾತಿ ಗಳಿಸಿದ ವ್ಯಕ್ತಿ ಸಲೀಮ್ ಅಲಿ....

ಪಕ್ಷಿಪ್ರೇಮಿಯಾಗುವ ಮುನ್ನ ಸಲೀಮ್ ಅಲಿ ಕೇವಲ ಪಕ್ಷಿಗಳಲ್ಲಿ ಆಸಕ್ತರಾಗಿದ್ದರು. ಅದೊಂದು ದಿನ ಅವರಲ್ಲಿ ಗೂಡುಕಟ್ಟಿದ್ದ ಬಾಲ್ಯಸಹಜ ಹುಡುಗಾಟ ಗುಬ್ಬಚ್ಚಿಯೊಂದನ್ನು ಹೊಡೆದು ಕೆಡವುವಂತೆ ಮಾಡಿತ್ತು. ತಾವು ಹೊಡೆದು ಕೆಡವಿದ ಗುಬ್ಬಚ್ಚಿಯ ಎದೆಯ ಮೇಲಿದ್ದ ಹಳದಿ ಪಟ್ಟಿ ಸಲೀಮರನ್ನು ಬಹುವಾಗಿ ಆಕರ್ಷಿಸಿತು. ಆದರೇನು ಮಾಡುವುದು ತಾವು ಹೊಡೆದದ್ದರಿಂದಾಗಿ ಆದ ಗಾಯ ಆ ಪುಟ್ಟ ಪಕ್ಷಿಯನ್ನು ವಿಲವಿಲನೆ ಒದ್ದಾಡಿಸುತ್ತಿತ್ತು.

ಅದನ್ನು ಕಂಡ ಸಲೀಮ್‌ಗೆ ಭಯ ಕಾಡತೊಡಗಿತು. ನೋವು ಹಿಂಡತೊಡಗಿತು.

ಅವ್ಯಕ್ತ ದುಗುಡ, ವೇದನೆಗಳನ್ನು ಮನದಲ್ಲಿ ತುಂಬಿಕೊಂಡೇ ಸಲೀಮ್ ಗುಬ್ಬಚ್ಚಿಯನ್ನು ಕೈಯಲ್ಲಿ ಹಿಡಿದುಕೊಂಡು ಆಸ್ಪತ್ರೆಯ ಕಡೆಗೆ ಓಡಿದರು. ಆಸ್ಪತ್ರೆಯನ್ನು ಹೊಕ್ಕರೂ ಅದು ಬದುಕುತ್ತದೋ ಇಲ್ಲವೋ ಎಂಬ ಅಳುಕು ಮನದಲ್ಲಿ. ಈ ಘಟನೆ ಹತ್ತರೊಳಗಿನ ಬಾಲಕನ ಮುಗ್ಧ ಮನದ ಮೇಲೆ ಅಗಾಧ ಪರಿಣಾಮವನ್ನು ಉಂಟುಮಾಡಿತು. ಬದುಕಿಗೊಂದು ತಿರುವನ್ನು ತಂದುಕೊಟ್ಟಿತು. ಪಕ್ಷಿಗಳ ಬಗೆಗಿನ ಅವರ ಆಸಕ್ತಿ ಪ್ರೇಮಕ್ಕೆ ತಿರುಗಿ ಪಕ್ಷಿಸಂಗಾತಿಯನ್ನಾಗಿಸಿತು. ಪಕ್ಷಿಗಳಿಗಾಗೇ ಬದುಕನ್ನು ಮುಡಿಪಾಗಿಟ್ಟು ಪಕ್ಷಿಗಳ ಕುರಿತು ಹತ್ತು ಹಲವು ಪುಸ್ತಕಗಳನ್ನು ರಚಿಸಲು ಪ್ರೇರೇಪಿಸಿತು.



ಅವರನ್ನು ಪಕ್ಷಿ ಪ್ರಪಂಚದ ವಕ್ತಾರರನ್ನಾಗಿಸಿತು.

ಪಕ್ಷಿತಜ್ಞ ಸಲೀಮ್ ಅಲಿ ಇಂದು ಬದುಕಿದ್ದಿದ್ದರೆ ಶತಾಯುಷಿಯಾಗಿರುತ್ತಿದ್ದರು. ಆದರೆ ಪಕ್ಷಿಪ್ರಪಂಚಕ್ಕೆ ಹೆಚ್ಚಿನ ಸೇವೆ ಸಲ್ಲಿಸುವ ಹಂಬಲವನ್ನು ಅವರಿನ್ನೂ ಹೊಂದಿದ್ದಾಗಲೇ ಅವರೆದೆಯ ಗೂಡಿನ ಹಕ್ಕಿ ಬಾನಂಗಳಕ್ಕೆ ಹಾರಿತು.

ಸಲೀಮ್ ಅಲಿ ತಮ್ಮ ಜೀವಿತಾವಧಿಯಲ್ಲಿ ಪಕ್ಷಿಗಳಿಗಾಗಿ ತೋರಿದ ಅಸೀಮ ಪ್ರೀತಿ-ಪ್ರೇಮ, ಸಲ್ಲಿಸಿದ ಸೇವೆಯ ನೆನಪು ಈಗಲೂ ಪಕ್ಷಿಗಳ ಮನದಲ್ಲಿ ಹಚ್ಚ ಹಸಿರಾಗಿದೆ. ಆ ನೆನಪುಗಳನ್ನಿಟ್ಟುಕೊಂಡೇ ಸಲೀಮರ ಜನ್ಮಶತಾಬ್ದಿಯನ್ನು ದೇಶಾದ್ಯಂತ ಆಚರಿಸಲಾಗುತ್ತಿದೆ. ಆ ನಿಟ್ಟಿನಲ್ಲಿ ವಿಧಾಯಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ.

ಹನ್ನೆರಡನೆಯ ವಯಸ್ಸಿನ ಹೊತ್ತಿಗೇ ಬಾಂಬೆ ನಿಸರ್ಗೇತಿಹಾಸ ಸಂಘ (BNHS) ಸಂಘದೊಂದಿಗೆ ಅವರಿಗೆ ಸಂಪರ್ಕ ಬೆಳೆಯಿತು. ಅಂದು

• ಎಚ್. ಆರ್. ಸುರೇಶ್

ಆರಂಭವಾದ ಸಂಬಂಧ ಅಖಂಡ ೭೮ ವರ್ಷ ಕಾಲ ಮುಂದುವರಿಯಿತು. ಸಲೀಮ್ ಕಣ್ಮುಚ್ಚಿದಾಗ (ಆಗವರಿಗೆ ೯೧ ವರ್ಷ ಜನನ: ೧೨ ನವೆಂಬರ್ ೧೮೯೬) ನಿಧನ: ೨೦ ಜೂನ್ ೧೯೮೭) ಬಹುಶಃ ಬಾಂಬೆ ನಿಸರ್ಗೇತಿಹಾಸ ಸಂಘದಲ್ಲಿನ ಬೊಂತೆರೂಪದ ಪಕ್ಷಿಗಳೂ, ಚಿತ್ರರೂಪದ ಹಕ್ಕಿಗಳೂ ಜೀವಂತ ಬಾನಾಡಿಗಳೊಂದಿಗೆ ಕಣ್ಣೀರು ಸುರಿಸಿರಬೇಕು.

ಬರ್ಲಿನ್ ವಿಶ್ವವಿದ್ಯಾಲಯದ ಪ್ರೊ. ಇರ್ವಿನ್ ಸ್ಟೆಸ್‌ಮನ್‌ರ ಶಿಷ್ಯತ್ವ ಪ್ರಾಪ್ತಿಯ ನಂತರ ಸಲೀಮ್ ಕಠಿಣ ಪರಿಶ್ರಮದಿಂದ ವೃತ್ತಿಪರ ಪಕ್ಷಿತಜ್ಞರಾಗಿ ರೂಪುಗೊಂಡರು. ಆ ನಂತರವೇ ಇವರ ಪರಿಣತಿಯನ್ನು ಸ್ಥಳೀಯ ಸರಕಾರ ಸ್ವದೇಶೀ-ವಿದೇಶಿ ವಿಶ್ವವಿದ್ಯಾಲಯಗಳು ಮತ್ತು ಸಂಘಸಂಸ್ಥೆಗಳು ಮಾನ್ಯ ಮಾಡಿದ್ದು.

ಬಿ.ಎನ್.ಎಚ್.ಎಸ್.ನ ಉಪಾಧ್ಯಕ್ಷ ದಿಲ್ ನವಾಝ್ ವಾರಿಯಾವ ಸಲೀಮರ ಪಕ್ಷಿಪ್ರೇಮವನ್ನು ಕಂಡು ಅವರನ್ನು "ಪಕ್ಷಿಗಳ ರಕ್ಷಕದಳ" ಎಂದೇ ಕರೆದರು. ಇವರಿಗೆ ಸಲೀಮರೊಂದಿಗೆ ನಿಕಟವಾದ ಸಂಬಂಧವಿತ್ತು. ಆ ಸಂಬಂಧವನ್ನು ನೆನೆಯುವ ವಾರಿಯಾವ "ಸಲೀಮ್ ಅಪರೂಪದ ವ್ಯಕ್ತಿಯಾಗಿದ್ದರು. ಅವರಲ್ಲಿದ್ದ ಪಕ್ಷಿಪ್ರೇಮ ಕಂಡವರಿಗೆ ಅಚ್ಚರಿ ಮೂಡುತ್ತಿತ್ತು. ಜೀವನದ ಭೌತಿಕ ವಿಷಯಗಳಲ್ಲಿ ಅವರಿಗೆ ಆಸಕ್ತಿಯೇ ಇರಲಿಲ್ಲ. ಯಾವುದೊಂದು ವಿಷಯದ ಕುರಿತು ಇದು ಖಾಸಗಿ, ಇದು ಸಾರ್ವಜನಿಕ ಎಂಬ ತಾರತಮ್ಯ ಅವರಲ್ಲಿರಲೇ ಇಲ್ಲ. ತಮ್ಮ ಪೋಷಾಕುಗಳ ಬಗೆಗಂತೂ ಅವರಿಗೆ ತುಂಬ ನಿರ್ಲಕ್ಷ್ಯ. ಅವರು ತೊಡುತ್ತಿದ್ದುದೂ ಬಹುತೇಕ ಹಳತಾದ ಮತ್ತು ಒಂದಕ್ಕೊಂದು ಹೊಂದಿಕೊಳ್ಳಲಾಗದ ವಸ್ತ್ರಗಳನ್ನೇ. ಹೀಗಿದ್ದೂ ಅವರೊಬ್ಬ ಪರಿಶ್ರಮ ಭರಿತ ವಿಷಯ ಪ್ರವೀಣರಾಗಿದ್ದರು. ನಮ್ರತೆ, ಸದ್ಗುಣಗಳ ಖಣಿಯಾಗಿದ್ದ ಸಲೀಮ್‌ರಲ್ಲಿ ಹಾಸ್ಯ ಪ್ರವೃತ್ತಿ ಅಂತಃಸ್ಥವಾಗಿ ಹರಿಯುತ್ತಿತ್ತು," ಎಂದು ವಿಶ್ಲೇಷಿಸುತ್ತಾರೆ.

ಡಾ. ಸಲೀಮ್ ಅಲಿ ಪಕ್ಷಿ ಸಮೀಕ್ಷಾ ಕಾರ್ಯವನ್ನು ಆರಂಭಿಸಿದ್ದು ೧೯೩೧ರಲ್ಲಿ. ಇವರ ಸತತ ಪರಿಶ್ರಮದಿಂದಾಗಿ ಭಾರತೀಯರು ಪಕ್ಷಿಗಳ ಬಗೆಗಿನ ತಮ್ಮ ಜ್ಞಾನದ ಹರಹನ್ನು ಮತ್ತಷ್ಟು ವೃದ್ಧಿಸಿಕೊಳ್ಳಲು ಅನುಕೂಲವಾಯಿತು. "ಭಾರತೀಯ ಪಕ್ಷಿ"ಗಳು ಎಂಬ ಅವರ ಗ್ರಂಥ ಜನಪ್ರಿಯವಾಗಿದೆ. ಬಿ.ಎನ್.ಎಚ್.ಎಸ್. ಇದನ್ನು ೧೯೪೧ರಲ್ಲಿ ಮೊತ್ತ ಮೊದಲ ಬಾರಿಗೆ ಪ್ರಕಟಿಸಿತು. ಅಲ್ಲಿಂದೀಚೆಗೆ ಈ ಗ್ರಂಥ ಹನ್ನೊಂದು ಬಾರಿ ಮರುಮುದ್ರಣಕಂಡಿದೆ. ಈ ಗ್ರಂಥದ ಸಹಾಯದಿಂದ ಪಕ್ಷಿ ವೀಕ್ಷಣೆಯ ಹವ್ಯಾಸವನ್ನು ಬೆಳೆಸಿಕೊಂಡವರು ಇಂದು ದೇಶದಾದ್ಯಂತ ಸಿಕ್ಕುತ್ತಾರೆ.

ಇದಾದ ನಂತರ ಸಲೀಮ್ ಬರೆದ "ಕಛ್ ಪ್ರದೇಶದ ಪಕ್ಷಿಗಳು," "ಸಿಕ್ಕಿಂ ರಾಜ್ಯದ ಪಕ್ಷಿಗಳು" "ಪೂರ್ವ ಹಿಮಾಲಯದ ಪಕ್ಷಿಗಳು" ಎಂಬ ಪುಸ್ತಕಗಳು ಜನಪ್ರಿಯ ಸಂಪುಟಗಳೆನ್ನಿಸಿಕೊಂಡಿವೆ. ಈ ಸಂಪುಟಗಳಲ್ಲಿ ಸಲೀಮ್ ತಮ್ಮ ಸಮೀಕ್ಷಾ ಸಂದರ್ಭದಲ್ಲಿ ದೊರೆತ ಎಲ್ಲ ವೈಜ್ಞಾನಿಕ ಅಂಶಗಳನ್ನೂ ದಾಖಲಿಸಿದ್ದಾರೆ. ಭಾರತೀಯ ಉಪಖಂಡ (ಭಾರತ-ಪಾಕಿಸ್ತಾನ)ದ ಪಕ್ಷಿಗಳ ಸಮಗ್ರ ಮಾಹಿತಿಯುಳ್ಳ ೧೦ ಸಂಪುಟಗಳನ್ನು ದಿಲ್ಲನ್ ರಿಪ್ಲೇ ಅವರ ಸಹಕಾರದೊಂದಿಗೆ ಸಲೀಮ್ ಸಂಪಾದಿಸಿದ್ದಾರೆ.

ಸಲೀಮ್‌ರೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ಇನ್ನೊರ್ವ ಪ್ರಮುಖರೆಂದರೆ ಬಿ.ಎನ್.ಎಚ್.ಎಸ್. ಅಧ್ಯಕ್ಷ ಬಿ.ಜಿ. ದೇಶಮುಖ್. ಸಲೀಮ್ ಕುರಿತಂತೆ ಇವರು ಹೇಳುವ ಎಲ್ಲ ವಿಚಾರ ಆ ವ್ಯಕ್ತಿ ಹೊಂದಿದ್ದ ಪಕ್ಷಿಪ್ರೇಮವನ್ನು ಪ್ರತಿಬಿಂಬಿಸುವಂಥ ಮಾತಾಗಿವೆ.

"ಸಲೀಮ್ ಅಲಿ ನೈಜ ಪಕ್ಷಿರಕ್ಷಕರಾಗಿದ್ದರು. ಪಕ್ಷಿಗಳೆಂದರೆ ಸಲೀಮರಿಗೆ ಅಪಾರ ವಾತ್ಸಲ್ಯ ಕೋಮಲವಾದ ಒಲವು. ಯಾವುದೇ ಪಕ್ಷಿಯನ್ನವರು ಸಾವಿರದ ಒಂದನೇ ಬಾರಿ ನೋಡುತ್ತಿದ್ದರೂ ಅದೇ ಮೊದಲ ಬಾರಿಗೆ ನೋಡುವವನಂಥ ಕಾತರ, ಉತ್ಸಾಹ, ಕೌತುಕ, ರೋಮಾಂಚನಗಳನ್ನು ತಮ್ಮಲ್ಲಿ ತುಂಬಿಕೊಂಡಿರುತ್ತಿದ್ದರು. ಆ ಪಕ್ಷಿಯ ವರ್ತನೆ, ವಿವರಗಳನ್ನು ಸಂಗ್ರಹಿಸಲು, ಸಂಗ್ರಹಿಸಿದ ವಿವರಗಳನ್ನು ತಿಳಿಸಲು ಹಂಬಲಿಸುತ್ತಿದ್ದರು. ಆ ಹಿನ್ನೆಲೆಯಲ್ಲಿ ಸಲೀಮ್ ಪಕ್ಷಿಗಳ ಬಗೆಗಿನ

ಮಾಹಿತಿ ಖಜಾನೆಯಂತಿದ್ದರು. ಬಿ.ಎನ್.ಎಚ್.ಎಸ್.ನೊಂದಿಗೆ ಸಲೀಮ್ ಹೊಂದಿದ್ದ ನಿಕಟ ಸಂಬಂಧ ಮತ್ತು ಅದು ಅನುಸರಿಸುತ್ತಿದ್ದ ಬೋಧನಾ ವಿಧಾನಗಳ ಪರಿಣಾಮವಾಗಿ ಮುಂಬಯಿ ವಿಶ್ವವಿದ್ಯಾಲಯದಿಂದ ಪಕ್ಷಿ ಸಂಶೋಧನಾ ಘಟಕ ಮಂಜೂರಾಯಿತು. ಪಕ್ಷಿಗಳ ರಕ್ಷಣೆಗೆ ಸಲೀಮ್ ಸಲ್ಲಿಸಿದ ಸೇವೆ ಎಂದಿಗೂ ಮರೆಯುವಂತಿಲ್ಲ. ಅವರ ನಿರಂತರ ಸಲಹೆ ಮತ್ತು ಅವಿರತ ಪರಿಶ್ರಮದಿಂದಾಗಿ ಭರತ ಪುರದ ಕೇವಲದೇವ್ ಘಾನಾ ಪಕ್ಷಿಧಾಮ, ಶಾಂತಕಣಿವೆಯ ಅರಣ್ಯ, ಮತ್ತು ಮುಂಬಯಿಯ ಸಮೀಪದ ಕರ್ನಾಲಾ ಪಕ್ಷಿಧಾಮಗಳು, ಈಗಲೂ ಜೀವಂತವಾಗಿ ಉಳಿಯುವಂತಾಗಿವೆ.''

ಪಕ್ಷಿಗಳಿಗಾಗಿ ಶ್ರಮವಹಿಸಿ ದುಡಿದ ಸಲೀಮ್ ಅಲಿ ಪಕ್ಷಿ ಸಂಬಂಧಿ ಪುಸ್ತಕಗಳನ್ನು ಹೊರತರುವಲ್ಲಿ ಸಾಕಷ್ಟು ಪರಿಶ್ರಮವನ್ನು ಪಟ್ಟರು. ದಿನದ ೧೪-೧೫ ಗಂಟೆಗಳನ್ನು ಪಕ್ಷಿಗಳ ಕೈಪಿಡಿ ರಚನೆಗಾಗಿ ವ್ಯಯಿಸುತ್ತಿದ್ದ ಅವರು ೧೯೫೩ಕ್ಕೂ ಮುಂಚಿನಿಂದಲೇ ಗ್ರಂಥ ರಚನೆಯ ಮಾಹಿತಿ ಸಂಗ್ರಹ ಕಾರ್ಯ ಆರಂಭಿಸಿದ್ದರು. ಇದರಲ್ಲಿ ಗ್ರಂಥ ಭಂಡಾರದಿಂದ ಮಾಹಿತಿ ಸಂಗ್ರಹಿಸುವುದು ಮತ್ತು ಪ್ರಾಣಿ ಸಂಗ್ರಹಾಲಯಗಳಲ್ಲಿ ಸಂಶೋಧನೆ ನಡೆಸುವುದೂ ಸೇರಿಕೊಂಡಿದ್ದವು. ಇಷ್ಟೆಲ್ಲ ಅದನಂತರ ಬರವಣಿಗೆಯನ್ನು ಪೂರೈಸಲು ೧೦ ವರ್ಷಗಳನ್ನು ತೆಗೆದುಕೊಂಡರೆಂದರೆ ಆ ಗ್ರಂಥಗಳಲ್ಲಿ ಇದ್ದಿರಬಹುದಾದಂಥ ಮಾಹಿತಿ ಎಷ್ಟು ನೀವೇ ಊಹಿಸಿ.

ಸಲೀಮ್ ಪಕ್ಷಿ ವೀಕ್ಷಣೆಗೆ ಹೊರಟರೆಂದರೆ ಅವರ ಅಂಗಿಯ ಕಿಸೆಯಲ್ಲಿ ಚಿಕ್ಕದೊಂದು ನೋಟ್ ಬುಕ್, ಸೀಸದ ಕಡ್ಡಿ, ಮತ್ತು ಪಕ್ಷಿಗಳ ಮಾಹಿತಿ ಪಟ್ಟಿ ಇರಲೇಬೇಕು. ಪಕ್ಷಿಗಳ ಅಸಹಜ ವರ್ತನೆ, ಆಸಕ್ತಿಕರ ಮಾಹಿತಿಗಳನ್ನು ದಾಖಲಿಸಿಕೊಳ್ಳಲು ಟೇಪ್‌ರೇಕಾರ್ಡರ್ ವೀಕ್ಷಕ ವಿವರಣೆಗೆ ಸಾಥ್ ನೀಡುತ್ತಿತ್ತು. ಇಷ್ಟು ವ್ಯವಸ್ಥೆಯನ್ನು ಪಕ್ಷಿ ವೀಕ್ಷಣೆಗೆ ಹೊರಡುವಾಗಲೆಲ್ಲ ಇಟ್ಟುಕೊಂಡೇ ಸಲೀಮ್ ಭಾರತ ದೇಶವನ್ನೆಲ್ಲ ಸುತ್ತಿದರು. ಪಕ್ಷಿಗಳ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಿದರು.

ಪಕ್ಷಿಗಳ ಕುರಿತ ಮಾಹಿತಿ ತಲೆತುಂಬ ತುಂಬಿದ್ದರೂ, ಯಾವುದೇ ಪಕ್ಷಿಯ ಬಗೆಗೆ ನಿಖರವಾಗಿ, ಅಧಿಕಾರಯುತ ಧ್ವನಿಯಲ್ಲಿ ಮಾಹಿತಿ ನೀಡಬಲ್ಲವರಾಗಿದ್ದರೂ ಸಲೀಮ್ ಎಂದೂ ಎಂದಿಗೂ ಅಹಮಿಕೆಗೆ ಒಳಗಾಗಲಿಲ್ಲ. ವಿನಯಶೀಲತೆ, ವಿನೀತ ಭಾವವನ್ನು ತೊರೆಯಲಿಲ್ಲ. ಇದಕ್ಕೆ ನೂರಾರು ಉದಾರಹರಣೆಗಳನ್ನು ನೀಡಬಹುದು. ಅವರೊಮ್ಮೆ ಪಕ್ಷಿವೀಕ್ಷಣೆಯಲ್ಲಿ ತೊಡಗಿದ್ದರು. ಯಾವುದೋ ಒಂದು ಪಕ್ಷಿಯನ್ನು ತಪ್ಪಾಗಿ ಗುರುತಿಸಿದರು. ಸಲೀಮ್ ತಪ್ಪು ಮಾಡುತ್ತಿದ್ದಾರೆ ಎಂದು ತಿಳಿಯುತ್ತಿದ್ದಂತೆಯೇ ಅವರೊಂದಿಗಿದ್ದ ಅರಣ್ಯ ಇಲಾಖೆಯ ಮಾರ್ಗದರ್ಶಿ ಸಲೀಮರ ತಪ್ಪನ್ನು ಅವರಿಗೆ ತಿಳಿಸಿದ. ಸರಿಪಡಿಸಿದ. ಆಗ ಸಲೀಮ್ ಅರಣ್ಯ ಸಹಾಯಕ ನೀಡಿದ ಮಾಹಿತಿಯನ್ನು ಹೃತ್ಪೂರ್ವಕವಾಗಿ ಒಪ್ಪಿಕೊಂಡರು. ಅಷ್ಟೇ ಅಲ್ಲ, ತಮ್ಮ ತಪ್ಪನ್ನು ಸರಿಪಡಿಸಿದ್ದಕ್ಕೆ ಮಾರ್ಗದರ್ಶಿಯನ್ನು ಅಭಿನಂದಿಸಿದರು.

ಪಕ್ಷಿಪ್ರಪಂಚ ಕುರಿತ ಸಾಧನೆಗಳ ಸರಮಾಲೆಯನ್ನೇ ಹೊಂದಿದವರಾಗಿದ್ದರೂ ಡಿ. ಸಲೀಮ್ ಅಲಿ ಎಂದೂ ಪ್ರತಿಫಲಕ್ಕೆ, ಪ್ರಶಸ್ತಿಗಳಿಗೆ ಹಂಬಲಿಸಿದವರಲ್ಲ. ಆದರೂ ಕಳೆದ ಮೂರು ದಶಕಗಳಲ್ಲಿ ೩೦ಕ್ಕೂ ಹೆಚ್ಚು ಪ್ರಶಸ್ತಿಗಳು ಅವರಿಗೆ ಸಂದವು. ವನ್ಯಮೃಗ ಸಂರಕ್ಷಣೆಗಾಗಿ ೧೯೭೬ರಲ್ಲಿ ಜೆ.ಪಾಲ್ ಗೆಟಿ ಅಂತಾರಾಷ್ಟ್ರೀಯ ಪ್ರಶಸ್ತಿಯೂ ಅವುಗಳಲ್ಲೊಂದು. ಪಕ್ಷಿ ಪ್ರಪಂಚದ ಮೋಡಿಗೆ ಸಲೀಮ್ ಅದೆಷ್ಟು ಒಳಗಾಗಿದ್ದರೆಂದರೆ ಯಾವುದೇ ಉದ್ಯೋಗ ಹಿಡಿಯುವ ಗೋಜಿಗೆ ಹೋಗದೆ ಜೀವನ ಪರ್ಯಂತರ ಪಕ್ಷಿಗಳಿಗಾಗಿಯೇ ದುಡಿದರು. ಹೊಟ್ಟೆ ಹೊರೆಯಲು ಮತ್ತು ತಮ್ಮ ಹವ್ಯಾಸದ ಖರ್ಚು ನಿಭಾಯಿಸಲು ಎಷ್ಟು ಅವಶ್ಯವೆನ್ನಿಸುತ್ತಿತ್ತೋ ಅಷ್ಟನ್ನು ಮಾತ್ರ ಸಂಪಾದಿಸುತ್ತಿದ್ದರು. ಭಾರತದ ಉದ್ದಗಲದ ನದಿ ನೀರ್ಗೋಳಿಗಳ ಬಗೆಗೆ ಅಧ್ಯಯನ ಮಾಡಬೇಕೆಂಬುದು ಅವರ ಜೀವನದ ಮಹತ್ತರ ಆಕಾಂಕ್ಷೆಯಾಗಿತ್ತು.

ಅವರ ಶತಾಬ್ದಿ ವರ್ಷದಲ್ಲಿ ಮೂರನೇ ರಾಷ್ಟ್ರವ್ಯಾಪಿ ಪಕ್ಷಿಗಣನೆ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಮುಂಬಯಿಯಲ್ಲಿರುವ ಪಕ್ಷಿಗಳೂ ಸೇರಿ



ಪಕ್ಷಿವೀಕ್ಷಣೆಯ ತಪಸ್ಸಿನಲ್ಲಿ.....

ದಂತೆ ದೇಶದೆಲ್ಲೆಡೆಯ ಪಕ್ಷಿಗಳನ್ನು ಅಭ್ಯಸಿಸುವ ಯೋಜನೆಯನ್ನೂ ಹಮ್ಮಿಕ್ರೊಳ್ಳಲಾಗಿದೆ. ಇವುಗಳಲ್ಲಿರುವ ತುಲನಾತ್ಮಕ ಅಂಶಗಳನ್ನು ದಾಖಲಿಸಿಕೊಳ್ಳುವುದು, ಪಕ್ಷಿಗಳ ವೈವಿಧ್ಯ ಮತ್ತು ವಾಸಸ್ಥಾನಗಳ ಕುರಿತ ಮಾಹಿತಿ ಸಂಗ್ರಹಿಸುವುದು ಈ ಯೋಜನೆಯಲ್ಲಿದೆ.

ವಿಶ್ವದಾದ್ಯಂತ ಸಂರಕ್ಷಿತ ಪಕ್ಷಿಗಳ ಸಂಕುಲ ನಾಶದಂಚಿಗೆ ತಲುಪಿರುವುದು ದುರಂತದ ಸಂಗತಿಯಾಗಿದ್ದು ಗೂಬೆ ಮತ್ತು ಕೆಂಪು ಎದೆಯ ರಾಬಿನ್ ಪಕ್ಷಿಗಳು ಇವುಗಳಲ್ಲಿ ಸೇರಿವೆ. ಇಟಲಿ ಮತ್ತಿತರ ದೇಶಗಳಲ್ಲಿ ವಲಸೆ ಬರುವ ಪಕ್ಷಿಗಳನ್ನು ಬೃಹತ್ ಪ್ರಮಾಣದಲ್ಲಿ ಕೊಲ್ಲಲಾಗುತ್ತಿದೆ ಎಂಬುದು ದುಃಖಕರ ವಿಚಾರವಾಗಿದೆ.

ಪಕ್ಷಿಗಳಿಗೆ ಮಾನವನು ನೀಡುತ್ತಿರುವ ಈ ತೆರನಾದ ಉಪಚಾರ ಡಾ. ಅಲಿಯವರ ಆತ್ಮಕ್ಕೆ ಸಂತಸ ತರಲಾರದು. ಅವರು ಗೈದದ್ದರ ನೂರರಲ್ಲಿ ಐದು ಭಾಗದಷ್ಟನ್ನಾದರೂ ನಾವು ಪಕ್ಷಿಗಳಿಗಾಗಿ ಸಮರ್ಪಿಸಿಕೊಂಡರೆ ಸಲೀಮ್‌ರಿಗೆ ಗೌರವ ಅರ್ಪಿಸಿದಂತಾಗುತ್ತದೆ.

(ಸಾಧಾರ)

## ಊಟದ ಸಮಯ

ಎಚ್.ಜಿ. ವೆಲ್ಸ್‌ರನ್ನು ಒಬ್ಬಾತ ಪ್ರಶ್ನಿಸಿದ. "ಯೋಗ್ಯವಾದ ಊಟದ ಸಮಯ ಯಾವುದು?"

"ಶ್ರೀಮಂತರಿಗೆ ಹಸಿವೆ ಆದಾಗಲೇ ಊಟದ ಸಮಯ. ಬಡವರಿಗೆ ಅನ್ನ ಸಿಕ್ಕಾಗಲೇ ಊಟದ ಸಮಯ," ವೆಲ್ಸ್‌ರಿಂದ ಉತ್ತರ ಬಂತು!

• ಪ್ರಕಾಶ ಎಸ್. ಮನ್ನಂಗಿ

STATEMENT ABOUT OWNERSHIP AND OTHER PARTICULARS ABOUT MONTHLY KASTURI TO BE PUBLISHED IN THE FIRST ISSUE EVERY YEAR AFTER THE LAST DAY OF FEBRUARY.

## FORM IV
## (SEE RULE 8)

| | | |
|---|---|---|
| 1. Place of Publication | : | Hubli |
| 2. Periodicity of its Publication | : | Monthly |
| 3. Printer's Name | : | S.K. Katote |
| Whether Citizen of India | : | Yes |
| Address | : | Samyukta Karnataka, Koppikar Road, Hubli-20 |
| 5. Editor's Name | : | N.V. Joshi |
| Whether Citizen of India | : | Yes |
| Address | : | Samyukta Karnataka, Koppikar Road, Hubli-20. |
| 6. Name and address of individuals who own the Newspapers and partners or Share-holders holding more than one percent of the total capital | : | Loka Shikshana Trust Koppikar Road, Hubli.<br>Board of Trustees:<br>Sri B.D. Jatti, Chairman<br>Sri A.R. Badarinarayan Trustee<br>Sri S.P. Bhat, Trustee<br>Sri G.M. Patil, Trustee<br>Sri Nittur Srinivas Rao Trustee |

I, S.K. Katote hereby declare that the particulars given above are true to the best of my knowledge and belief.

HUBLI — (S.K. KATOTE)

DATE: 1-3-1996 — SIGNATURE OF PUBLISHER

# ನೆನಪು ನೆರಳಿನಲ್ಲಿ

**ಸು**ಮಾರು ಹದಿನೈದು ವರ್ಷಗಳ ಹಿಂದಿನ ನೆನಪು. ಸ್ಥಳ-ಬೆಂಗಳೂರು ನಗರದ ಗಾಂಧೀ ಉದ್ಯಾನವನ. ಗಾಂಧೀ ಜಯಂತಿ ಕಾರ್ಯಕ್ರಮ. ಅಂದು ಸಂಜೆ ಧ್ವನಿವರ್ಧಕದಲ್ಲಿ ತೇಲಿಬರುತ್ತಿದ್ದ ಸುಮಧುರ ಭಜನೆ, ಅಲ್ಲೇ ನಡೆದುಹೋಗುತ್ತಿದ್ದ ನಾನು ಮತ್ತು ನನ್ನ ಸ್ನೇಹಿತನನ್ನು ಸೆಳೆದ ಕಾರಣ, ಹುಲ್ಲಿನ ಮೇಲೆ ಕೂತು ಮಾತನಾಡತೊಡಗಿದೆವು. ನಮ್ಮ ಮುಂದೆಯೇ ಖಾದಿ ಪಂಚೆ, ಜುಬ್ಬ, ಬಿಳೀ ಟೋಪಿ ಧರಿಸಿದ ವ್ಯಕ್ತಿಯೊಬ್ಬರು ಬಂದು ಕೂತು, ಜೇಬಿನಿಂದ ಕರವಸ್ತ್ರ ತೆಗೆದು ಹುಲ್ಲಿನ ಮೇಲೆ ಹಾಸಿದರು. ಕೈಯೆತ್ತಿ ಯಾರನ್ನೋ ಕರೆಯುವ ಹಾಗೆ ಸನ್ನೆ ಮಾಡಿದರು. ಒಬ್ಬ ಕಡಲೇಕಾಯಿ ಮಾರುವ ಹುಡುಗ ಬಂದು ಕರವಸ್ತ್ರದಲ್ಲಿ ಒಂದು ರೂಪಾಯಿಗೆ ಸುರಿದು ಹೋದ. ಒಂದೊಂದೇ ತಿಂದು ಮುಗಿಸಿದರು.

ಸುಮಾರು ಅರ್ಧ ಘಂಟೆಯ ನಂತರ, ರಾಜ್ಯಪಾಲರೂ ಮಂತ್ರಿಗಳೂ ಆಗಮಿಸಿದ ಬಳಿಕ ಕಾರ್ಯಕ್ರಮ ಪ್ರಾರಂಭ. ರಾಜ್ಯಪಾಲರ ಪಕ್ಕದಲ್ಲೇ ಕುಳಿತಿದ್ದ ವ್ಯಕ್ತಿಯನ್ನು ನೋಡಿ ನಮಗೆ ಆಶ್ಚರ್ಯ. ನಮ್ಮ ಎದುರು ಕಡಲೇಕಾಯಿ ತಿನ್ನುತ್ತಿದ್ದವರೇ ಅಲ್ಲಿ! ಆಮೇಲೆ ಗೊತ್ತಾಯಿತು, ಆ ವ್ಯಕ್ತಿ ಮತ್ತಾರೂ ಅಲ್ಲ, ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿ, ಕಟ್ಟಾ ಗಾಂಧೀವಾದಿ ಡಾ. ಎಚ್. ಎನ್. ನರಸಿಂಹಯ್ಯ ಅಂತ.

• ನಾ. ವೆ. ಮುರ್ಥಿ

**ಸು**ಮಾರು ಮೂವತ್ತು ನಲವತ್ತು ವರ್ಷಗಳ ಹಿಂದೆ ನಡೆದ ಘಟನೆ. ಆಗ ನಾನು ಎಂಟನೇ ತರಗತಿಯಲ್ಲಿ ಓದುತ್ತಿದ್ದೆ. ಮಳೆಗಾಲದ ಒಂದು ದಿನ. 'ಉಡುಪಿಯ ಹತ್ತಿರದಲ್ಲಿರುವ ಬುಡ್ನಾರು ಎಂಬ ಹಳ್ಳಿಯಲ್ಲಿ ನನ್ನ ದೊಡ್ಡಮ್ಮನ ಮನೆಯಿತ್ತು. ಅಲ್ಲಿಂದ ನಾನು, ಆರು ವರ್ಷದ ನನ್ನ ತಂಗಿ, ನನ್ನ ಅಣ್ಣ ಮತ್ತು ಅತ್ತಿಗೆ ಒಟ್ಟಾಗಿ ಕಬ್ಬಿನಾಲೆಯ ಹತ್ತಿರವಿರುವ ಒಂದು ಹಳ್ಳಿಗೆ ಹೊರಟೆವು. ಹೊರಡುವಾಗ ಮಳೆಯ ವಾತಾವರಣ ಇದ್ದಿರಲಿಲ್ಲ. ಸಂಬಂಧಿಕರ ಮನೆಗೆ ಹೋಗಬೇಕೆಂದರೆ ಸ್ವಲ್ಪ ದೂರ ಬಸ್ಸಿನಲ್ಲಿ ಹೋದರೂ ಬಸ್ಸಿಳಿದ ಮೇಲೆ ಮೂರು ನಾಲ್ಕು ಮೈಲುಗಳಷ್ಟು ನಡೆಯಲೇಬೇಕಾಗಿತ್ತು. ದಾರಿಯಲ್ಲಿ ಒಂದು ಹೊಳೆ. ಅದನ್ನು ದಾಟಿಯೇ ಮುಂದೆ ಹೋಗಬೇಕು. ಹೀಗೆ ಹಳ್ಳಿ ದಾರಿಯಲ್ಲಿ ನಡೆದು ಹೋಗುತ್ತಿರುವಾಗ ಆಕಾಶದಲ್ಲಿ ದಟ್ಟವಾದ ಕಪ್ಪುಮೋಡ ಕವಿಯಿತು. ಮಳೆ ಬರುವುದರೊಳಗೆ ಹೊಳೆ ದಾಟಬೇಕೆಂದು ಬೇಗ ಬೇಗ ಹೆಜ್ಜೆ ಹಾಕಿದೆವು. ಹೊಳೆಯಲ್ಲಿ ಸ್ವಲ್ಪ ನೀರು ಹರಿಯುತ್ತಿತ್ತು. ಹೀಗೆ ಹೊಳೆಯನ್ನು ದಾಟಲು ಪ್ರಾರಂಭಿಸಿದಾಗ ಧಾರಾಕಾರವಾಗಿ ಮಳೆ ಸುರಿಯಲಾರಂಭಿಸಿತು. ಒಮ್ಮೆಲೇ ಹೊಳೆ ಉಕ್ಕೇರತೊಡಗಿತು. ನನ್ನ ಅಣ್ಣ ಒಂದು ಕೈಯಲ್ಲಿ ನನ್ನನ್ನೂ ಇನ್ನೊಂದು ಕೈಯಲ್ಲಿ ನನ್ನ ಪುಟ್ಟ ತಂಗಿಯನ್ನೂ ಹಿಡಿದು ಬೇಗ ಬೇಗ ಹೊಳೆ ದಾಟಿಸುತ್ತಿದ್ದ. ಅತ್ತಿಗೆ ಹಿಂದಿನಿಂದ ಬರುತ್ತಿದ್ದರು. ನಾವು ಸ್ವಲ್ಪ ದೂರ ಮುಂದೆ ಹೋಗಿ, ಅತ್ತಿಗೆ ಬರುತ್ತಿದ್ದಾರೆಯೆ? ಎಂದು ಹಿಂದೆ ನೋಡಿದಾಗ ಅವರು ಕಾಲು ಜಾರಿ ನೀರಿನಲ್ಲಿ ಬಿದ್ದು ಪ್ರವಾಹದೊಂದಿಗೆ ತೇಲುತ್ತಾ ಮುಳುಗುತ್ತಾ ಇರುವುದನ್ನು ಕಂಡೆವು. "ಅಣ್ಣಾ, ಅತ್ತಿಗೆ, ಅತ್ತಿಗೆ" ಎಂದು ಬೊಬ್ಬೆ ಹೊಡೆದೆ ನಾನು. ಅಣ್ಣ ಹಿಂತಿರುಗಿ ನೋಡಿ, ಒಂದು ಕ್ಷಣ ಯೋಚಿಸಿ, ನಮ್ಮಿಬ್ಬರ ಕೈಯನ್ನು ಎಳೆದುಕೊಂಡು ದಡಕ್ಕೆ ಬಂದ. ಈಗಾಗಲೇ ಹೊಳೆ ರಭಸದಿಂದ ಹರಿಯುತ್ತಿತ್ತು. ಅಣ್ಣನಿಗೆ ಈಜು ಬರುತ್ತಿರಲಿಲ್ಲ. ಅತ್ತಿಗೆ ಪ್ರವಾಹದ ಜೊತೆಯಲ್ಲಿ ಮುಂದೆ ಮುಂದೆ ಹೋಗುತ್ತಿದ್ದರು. ಸಹಾ

ಯಕ್ಕಾಗಿ ಕೈ ಚಾಚುತ್ತಿದ್ದರು. "ಅತ್ತಿಗೆ, ಅತ್ತಿಗೆ" ಎಂದು ನಾವಿಬ್ಬರೂ ಬೊಬ್ಬಿಡುತ್ತಾ ಇದ್ದೆವು. "ನೀರಲ್ಲಿ ಕೊಚ್ಚಿ ಹೋಗುತ್ತಿದ್ದಾರೆ; ರಕ್ಷಿಸಿರಿ, ರಕ್ಷಿಸಿರಿ" ಎಂದು ನಾವು ಮೂರು ಮಂದಿಯೂ ಗಟ್ಟಿಯಾಗಿ ಕೂಗಿದೆವು. ನಮ್ಮ ಕೂಗನ್ನು ಕೇಳಲು ಇದ್ದರೆ ತಾನೆ ಅಲ್ಲಿಗೆ ಬರುವುದು? ಅದಲ್ಲದೆ ಮಳೆಯ ಆರ್ಭಟದ ಮುಂದೆ ನಮ್ಮ ಕೂಗು ಅವರಿಗೆ ಕೇಳಿಸುವುದಾದರೂ ಹೇಗೆ? ನಾವು ನೋಡುತ್ತಾ ಇದ್ದಂತೆ ಅತ್ತಿಗೆ ನೀರಿನಲ್ಲಿ ಕೊಚ್ಚಿಯೇ ಹೋದರು. ಅಣ್ಣ ನಮ್ಮಿಬ್ಬರನ್ನೂ ತಬ್ಬಿಕೊಂಡು ಗೊಳೋ ಎಂದು ಅತ್ತರು. ಅಣ್ಣ ನಮ್ಮಿಬ್ಬರ ಜೀವವನ್ನು ಉಳಿಸಲು ಹೋಗಿ ತನ್ನ ಹೆಂಡತಿಯನ್ನೇ ಕಳೆದುಕೊಂಡರು ಎಂಬುದು ನನಗೆ ಅರಿವಾಗಿ ಆತನನ್ನು ತಬ್ಬಿಕೊಂಡು ನಾನೂ ಗೊಳೋ ಎಂದು ಅತ್ತೆ.

ಸಿನೆಮಾದಲ್ಲಾದರೆ ನಾಯಕನು ಎಂತಹ ಪ್ರವಾಹದಲ್ಲಿಯೂ ಕೊಚ್ಚಿ ಹೋಗುತ್ತಿದ್ದ ನಾಯಕಿಯನ್ನು ನೀರಿಗೆ ಧುಮುಕಿ ರಕ್ಷಿಸುವ ದೃಶ್ಯವನ್ನು ನಾವು ನೋಡುತ್ತೇವೆ. ಆದರೆ ನಿಜ ಜೀವನದಲ್ಲಿ?

• ಸಾವಿತ್ರಿ ಎಸ್. ರಾವ್

ಆಗ ನನಗೆ ಇನ್ನೂ ತಿಳುವಳಿಕೆ ಬಾರದ ವಯಸ್ಸು. ನಮ್ಮ ಮನೆಯ ಎದುರಿಗೆ ದಿಮ್ಮಿಕ್ಕೊಪ್ಪಲಿನಿಂದ ಬಂದು ನೆಲಸಿರುವ ಒಂದು ಕುಟುಂಬವಿದೆ. ಆ ಮನೆಯಲ್ಲಿ ಆಗ ಸರಿ ಸುಮಾರು ನನ್ನ ಸಮ ವಯಸ್ಸಿನ ಕೃಷ್ಣ ಎಂಬ ಎರಡೂ ಕಾಲಿಲ್ಲದ ಹುಟ್ಟು ಹೆಳವನಿದ್ದ. ಅವನು ಹೆಳವನಾಗಿದ್ದರೂ ಅವನ ಧ್ವನಿ ಮಧುರವಾಗಿತ್ತು. ನಾನು ಅವನ ಹಾಡಿಗೆ ಮಾರುಹೋಗಿದ್ದೆ.

ಅದೊಂದು ದಿನ ನಾನು ನಮ್ಮ ಆಂಟಿಯ ಚಪ್ಪಲಿ ಧರಿಸಿ ಕೃಷ್ಣನ ಹಾಡು ಕೇಳಲು ಹೋಗಿದ್ದೆ. ಯಾವ ಕಾರಣಕ್ಕೊ ನೆನಪಿಗೆ ಬರುತ್ತಿಲ್ಲ, ನಾನು ಅವನ ಮೇಲೆ ಸಿಟ್ಟಿಗೆದ್ದು ಚಪ್ಪಲಿಯಿಂದ ಆ ಕಾಲಿಲ್ಲದ ಕೃಷ್ಣನಿಗೆ ಹೊಡೆದೆ. ಆತನ ತುಟಿಯಿಂದ ರಕ್ತ ಚಿಮ್ಮಿತು. ರಕ್ತ ನೋಡಿ ನಾನು ಹೆದರಿ ಚಪ್ಪಲಿಯನ್ನು ಅಲ್ಲೇ ಎಸೆದು ಓಡಿದೆ.

ಯಾವ ಸಮಯದಿಂದ ಎಲ್ಲಿಯವರೆಗೆ ಎಂಬ ನೆನಪು ಈಗ ಬಾರದಿದ್ದರೂ ಸುಮಾರು ೯ ಗಂಟೆ ಸಮಯಕ್ಕೆ ನನ್ನ ತಾಯಿ ಎದೆ ಬಡಿದುಕೊಂಡು ಅಳುತ್ತಿರುವ ಶಬ್ದ ನಾನು ಅವಿತು ಕುಳಿತಿದ್ದ ಜಾಗದಲ್ಲಿ ಕೇಳಿಸಲಾರಂಭಿಸಿತು. ಬಹುಶಃ ನಾನು ಅವಿತು ಕುಳಿತಿರುವ ಜಾಗದಲ್ಲೇ ನಿದ್ರೆ ಹೋಗಿದ್ದು ಆಗತಾನೇ ಎಚ್ಚರವಾಗಿದ್ದಿರಬೇಕು. ನಾನು ಏನು ಅಪರಾಧ ಮಾಡಿ ಇಲ್ಲಿ ಅವಿತಿದ್ದೇನೆ ಎಂಬುದನ್ನೇ ಮರೆತು ಮನೆಯ ಮುಂಬಾಗಿಲಿಗೆ ಬಂದು ಅಳುತ್ತಾ ನಿಂತುಕೊಂಡೆ. ಆಗ ಮನೆ ತುಂಬಾ ಜನ ಸೇರಿದ್ದರು. ಯಾರೋ 'ಅನಂತ' ಎಂದ ಕೂಡಲೇ ನಮ್ಮ ತಾಯಿ ಓಡಿ ಬಂದವಳೆ ನನ್ನನ್ನು ಬಾಚಿ ಅವುಚಿಕೊಂಡು, "ಎಲ್ಲಿಗ್ಹೋಗಿದ್ದೋ ನನ್ನ ಕಂದ?" ಮುಂತಾಗಿ ಬಡಬಡಿಸುತ್ತ ಮುಖದ ತುಂಬಾ ಮುತ್ತಿನ ಮಳೆ ಸುರಿಸಿದಳು. ಆಗ ನನಗೆ ಸಖೇದಾಶ್ಚರ್ಯ! ನಾನು ಮಾಡಿದ ತಪ್ಪಿಗೆ ಏಟಿನ ಶಿಕ್ಷೆ ನಿರೀಕ್ಷಿಸಿದ್ದ ನನಗೆ ಈಗ ದೊರೆಯುತ್ತಿರುವುದು ಮುತ್ತಿನ ರಕ್ಷೆ!

ನಮ್ಮ ಚಿಕ್ಕಪ್ಪ, "ಲೋ ಅನಂತ್ ನೀನು ಎಲ್ಲಿ ಅವಿತುಕೊಂಡಿದ್ದೆ ತೋರಿಸು- ನಿನಗೆ ನಾಲ್ಕಾಣೆ ಕೊಡ್ತೀನಿ," ಎಂದು ಪುಸಲಾಯಿಸಿ ಚಾಕ್ಲೆಟ್ ಆಸೆ ತೋರಿಸಿ ನಾನು ಅವಿತುಕುಳಿತಿದ್ದ ಜಾಗ ತಿಳಿದು, "ಭೇಷ್, ಒಳ್ಳೆ ಜಾಗಾನೇ ಹುಡುಕಿದ್ದೀ," ಎಂದು ವ್ಯಂಗ್ಯವಾಡಿದ್ದರು. ಅಂದು ಮಧ್ಯಾಹ್ನದಿಂದ ನನಗಾಗಿ ಇಡೀ ಗೊರೂರನ್ನೇ ಜಾಲಾಡಿದ್ದೇ ಅಲ್ಲದೆ ರಾತ್ರಿ ಚಿತ್ರಮಂದಿರದಲ್ಲಿ ಅರ್ಧಕ್ಕೆ ಲೈಟ್ ಹಾಕಿಸಿ ಹತ್ತು ನಿಮಿಷ ಹುಡುಕಿಸಿದರಂತೆ! ಜೊತೆಗೆ ನನ್ನನ್ನು ಹುಡುಕಿಕೊಂಡು ಬರಲು ಹಾಸನ- ಅರಕಲಗೂಡಿಗೆ ದೂತರನ್ನೂ ಕಳಿಸಿದ್ದರಂತೆ.

ಅಂದು ನನ್ನ ತಾಯಿ ಎರಡು ಚಮಚೆ ತುಪ್ಪ ಜಾಸ್ತಿ ಹಾಕಿ ತುತ್ತು ಮಾಡಿ ತಾವೇ ಬಾಯೊಳಗಿಟ್ಟು ಊಟ ಮಾಡಿಸಿ, ನಂತರ ತೊಡೆಯ ಮೇಲೆ ಮಲಗಿಸಿಕೊಂಡು ತಲೆ ಸವರುತ್ತ ಮಲಗಿದ್ದು ಈಗಲೂ ನೆನಪಿನಲ್ಲಿದೆ.

• ಗೊರೂರು ಅನಂತರಾಜು



# ನಿನೀ ವೈಷ್ಣವ!

• ಎಂ. ಆರ್. ನರಸಿಂಹನ್

ಚೈತ್ರಮಾಸದ ಶುಕ್ಲಪಕ್ಷದ ರಾತ್ರಿ.

ಮೇಲುಕೋಟೆಯ ದೇವಸ್ಥಾನದಲ್ಲಿ ಈ ಕಾಲದಲ್ಲೇ ಪ್ರಾಯಶಃ ರಾಮಾನುಜಾಚಾರ್ಯರ ವರ್ಷ ತಿರುನಕ್ಷತ್ರದ ಹತ್ತು ದಿವಸದ ಉತ್ಸವ ಸಂಭ್ರಮವಾಗಿ ಜರುಗುವುದು. ಕರ್ನಾಟಕದ, ತಮಿಳುನಾಡಿನ ವಿವಿಧ ಭಾಗಗಳಿಂದ ಶ್ರೀವೈಷ್ಣವ ಭಕ್ತಾದಿಗಳು ಪಾಲ್ಗೊಳ್ಳುತ್ತಾರೆ. ಅಂದಿನ ಕಾಲಕ್ಕೆ ಎಂದರೆ ಈಗ ೭೦ ವರ್ಷಗಳ ಹಿಂದೆ ಮೇಲುಕೋಟೆ ಸಮೃದ್ಧ ಶ್ರೀವೈಷ್ಣವ ವಸತಿಯಾಗಿದ್ದು ಜನರು ಇನ್ನೂ ಆಸ್ತಿಕ ವಾತಾವರಣದಲ್ಲಿಯೇ ಕಾಲ ತಳ್ಳುತ್ತಿದ್ದ ದಿನಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಜನ ಭಾಗವಹಿಸುತ್ತಿದ್ದರು.

ರಾಮಾನುಜಾಚಾರ್ಯರ ತಿರುನಕ್ಷತ್ರವೆಂದರೆ ದೇವಸ್ಥಾನ ಮಾತ್ರವಲ್ಲದೆ ಇಡೀ ಊರಿಗೇ ಪ್ರತ್ಯೇಕವಾದ ಕಳೆ ಬಂದು ಬಿಡುತ್ತಿತ್ತು. ಪ್ರತಿದಿನ ಬೆಳಿಗ್ಗೆ ಆಚಾರ್ಯರ ವಿಗ್ರಹಕ್ಕೆ ಒಂದೊಂದು ವಾಹನ ಉತ್ಸವ. ಮಧ್ಯಾಹ್ನ ಅಭಿಷೇಕ. ಸಂಜೆಗೆ ಅಲಂಕಾರ. ಆಸ್ಥಾನ ಶ್ರೀವೈಷ್ಣವರಿಂದ ಪ್ರಬಂಧಗೋಷ್ಠಿ.

ಪ್ರತಿದಿನ ಯಾರಾದರೂ ಭಕ್ತಾದಿಗಳಿಂದ ವಿಶೇಷ ಭಕ್ಷ್ಯ ಕೈಂಕರ್ಯ. ಭಕ್ತಾದಿಗಳಿಗೆ ಪ್ರಸಾದ ವಿನಿಯೋಗ. ರಾತ್ರಿ ಪಲ್ಲಕ್ಕಿ ಉತ್ಸವ. ನಂತರ ಆಚಾರ್ಯರಿಗೆ ತಿರುವಾರಾಧನ ಪ್ರಬಂಧಸೇವೆ ಇತ್ಯಾದಿ ಕಾರ್ಯಕ್ರಮಗಳು ರಾತ್ರಿ ಹನ್ನೆರಡು ಘಂಟೆಯನ್ನೂ ಮೀರಿ ಬಿಡುತ್ತಿತ್ತು. ಊರಿಗೆ ದೇವಸ್ಥಾನವೇ ಪ್ರಧಾನ ಕೇಂದ್ರವಾದ್ದರಿಂದ ಜನರನ್ನು ಅದುಬಲವಾಗಿ ಆಕರ್ಷಿಸುತ್ತಿದ್ದಿತು. ಈಗಲೂ ಅದು ಸಂಸ್ಕೃತಿಯ ಕೇಂದ್ರ ಬಿಂದುವಾಗಿ ಮೆರೆಯುತ್ತಿದೆ ಎಂದರೆ ತಪ್ಪಾಗಲಾರದು.

ಆದರೆ ಈ ಸಂದರ್ಭದಲ್ಲೇ ಮುಕ್ಕಾಲು ಮೂರು ದಿನಗಳು ಗುಡುಗು, ಸಿಡಿಲು, ಮಳೆ, ಗಾಳಿಗಳ ಆರ್ಭಟವಿರಬೇಕೇ? ರಾತ್ರಿಯ ವೇಳೆಯಂತೂ ಜೋರು ಮಳೆ, ಭೋರಿಡುವ ಗಾಳಿ, ಹೀಗಿದ್ದರೂ ಜನ ದೇವಸ್ಥಾನದ ಪೂಜೆಗಳಿಗೆ ತಪ್ಪಿಸಿಕೊಳ್ಳುತ್ತಿದಿಲ್ಲ. ಜೊತೆಗೆ ದಕ್ಷಿಣ ದೇಶದಿಂದ ನಾದ ಸ್ವರದವರನ್ನು ಕರೆಸುತ್ತಿದ್ದುದರಿಂದ ಅದೊಂದು ವಿಶೇಷ ಆಕರ್ಷಣೆ ಆಗಿತ್ತು.

ಯಥಾ ಪ್ರಕಾರ ಒಂದು ರಾತ್ರಿ ಜನ ದೇವಸ್ಥಾನದಲ್ಲಿ ಪೂಜೆಗೆ ನೆರೆದಿದೆ. ಹೊರಗಡೆ ಗಾಳಿಯ ಆರ್ಭಟ, ಮಳೆಯ ಹೊಡೆತ, ಗುಡುಗು ಸಿಡಿಲುಗಳ ಮೆರೆತ, ಗದಗುಟ್ಟುವ ಚಳಿಯ ತಿವಿತ. ದೀಪಗಳ ಮಂದ ಪ್ರಕಾಶ ದೇವಸ್ಥಾನವನ್ನು ಆಕ್ರಮಿಸಿದೆ. ವೈದಿಕರು ಸೇವೆ ಮುಗಿಸಿ ಕುಳಿತಿದ್ದಾರೆ. ಅಡುಗೆ ಮನೆಯಲ್ಲಿ ತಳಿಗೆ ಸಿದ್ಧವಾಗಿಲ್ಲ. ಹೀಗಾಗಿ ದೇವರಿಗೆ ನಿವೇದನವಾಗಲು ಇನ್ನೂ ವೇಳೆ ಆಗಿಲ್ಲ. ಅಡುಗೆಮನೆಗೆ ಮಣೆಗಾರರೂ ಪಾರುಪತ್ತೇದಾರರೂ ಆಗಾಗ ಠಳಾಯಿಸಿ "ಆಯಿತೆ, ಬೇಗ. ಹೊತ್ತಾಯಿತು" ಇತ್ಯಾದಿ ಎಚ್ಚರಿಕೆ ನೀಡಿ ತಮ್ಮ ಅಧಿಕಾರದ ಅಸ್ತಿತ್ವ ಪ್ರದರ್ಶಿಸುತ್ತಿದ್ದಾರೆ. ಅಡುಗೆಮನೆಯಲ್ಲಿನ ನರಸಿಂಹಾಚಾರ್ಯರೂ ಪಾಪ ಆದಷ್ಟು ಬೇಗ ತಳಿಗೆ ಸಿದ್ಧಪಡಿಸಲು ಪ್ರಯತ್ನಿಸುತ್ತಿದ್ದಾರೆ.

ನರಸಿಂಹಾಚಾರ್ಯರೇ ಈ ಕಥೆಗೆ ಕೇಂದ್ರ ಬಿಂದುವಾದ್ದರಿಂದ ಅವರ ಬಗೆಗೆ ನಾಲ್ಕಾರು ಮಾತುಗಳನ್ನು ಹೇಳಬೇಕಾಗಿರುವುದು ಯುಕ್ತ. ಅವರು ಮಧ್ಯವಯಸ್ಕರು. ಪರಮಸಾತ್ವಿಕರು. ಕೋಪವೆನ್ನುವುದು ದೂರವೇ. ಗರಡಿಸಾಮಿನಿಂದ ಗಟ್ಟಿಯಾದ ಉಕ್ಕಿನ ಮೈಕಟ್ಟು: ಸ್ತೋತ್ರವೇದಾದಿ ವಿದ್ಯಾ ಪರಿಣತರು. ಮುಖದಲ್ಲಿ ಎದ್ದು ಕಾಣುವ ಊರ್ಧ್ವ ಪುಂಡ್ರ. ಎಲ್ಲರಿಗೂ ಬೇಕಾದ ಜೀವ. ನಗನಗುತ್ತಾ ಮಾತನಾಡುವ ಸ್ವಭಾವ. ಬಡತನವಾದರೂ ಉಟ್ಟ ಪಂಚೆ ಹಂಸಪುಚ್ಛದಂತೆ ಸ್ವಚ್ಛ. ಮೇಲುಕೋಟೆಯ ಕೊಳಗಳಲ್ಲಿ ಸೋಪಿನ ಸಹಾಯವಿಲ್ಲದ ಬಿಳಿದಾಗಿ ಬಟ್ಟೆ ಒಗೆಯತಕ್ಕ ಕಲೆಯಲ್ಲಿ ಪರಿಣತರಾಗಿದ್ದ ಕೆಲವೇ ಮಂದಿಯಲ್ಲಿ ಆಚಾರ್ಯರೂ ಒಬ್ಬರು ಎಂದರೆ ಅತಿಶಯೋಕ್ತಿಯೇನಲ್ಲ. ಪಾಕಶಾಸ್ತ್ರ ಪ್ರವೀಣರು. ಶುಚಿರುಚಿಯಾಗಿ ಅಚ್ಚುಕಟ್ಟಾಗಿ ಅಡುಗೆ ಮಾಡಿ ದೈವಕ್ಕೆ ನಿವೇದನ ಕೈಂಕರ್ಯ. ಪರಮಾತ್ಮ ನಿಜಕ್ಕೂ ನಿವೇದನಗೊಳ್ಳುತ್ತಿದ್ದನೆಂಬ ಅಂಶ ನಿರ್ವಿವಾದ. ಬಡತನವಾದರೂ ಸಮೃದ್ಧವಾದ ಕಾಲವಾದ್ದರಿಂದ ಎಲ್ಲರಂತೆ ಅವರೂ ನಗುನಗುತ್ತಾ ಬಾಳುತ್ತಿದ್ದರು. ಈಗಿನಂತೆ ಕಷ್ಟ ಕಾರ್ಪಣ್ಯಗಳಿರಲಿಲ್ಲ. ರಾಜಮಹಾರಾಜರ ಅಧಿಕಾರದ ಕಾಲ. ಇನ್ನೂ ಈಗಿನಂತೆ ರಾಜಕೀಯ ಕಲುಷಿತ ಜನಜೀವನ ಆಗ ಇರಲಿಲ್ಲ.

ನರಸಿಂಹಾಚಾರ್ಯರು ತಳಿಗೆಯನ್ನು ಮುಗಿಸಿ ಈಚೆಗೆ ಬಂದು ಕುಳಿತರು. ಅಲ್ಲಿ ಜನ ಕುಳಿತಕೊಂಡೋ ನಿಂತೋ ಚರ್ಚೆ ನಡೆಸುತ್ತಾ ಗುಂಪುಗುಂಪಾಗಿದ್ದರು. ದೇವರ ಆಸ್ಥಾನವು ತೆರೆಯಿಂದ ಆಚ್ಛಾದಿತವಾಗಿದೆ. ಮನೆಗೆಲಸ ಮುಗಿಸಿಕೊಂಡು ವಿರಾಮವಾಗಿ ಬಂದಿರುವ ಮಹಿಳೆಯರ, ಮಕ್ಕಳ ತಂಡ ಆಕಡೆಗೆ ನೆರೆದಿದೆ. ಗೋಷ್ಠಿಯ ಶ್ರೀವೈಷ್ಣವರು ಇತ್ತ ಅಚ್ಚುಕಟ್ಟಾಗಿ ಕುಳಿತಿದ್ದಾರೆ.

ಇದ್ದಕ್ಕಿದ್ದಂತೆಯೇ ಆಜಾನುಬಾಹು ಒಬ್ಬ ಎಲ್ಲಿನಿಂದಲೋ ದೇವಸ್ಥಾನವನ್ನು ಪ್ರವೇಶಿಸಿ ಅಡುಗೆ ಮನೆಯ ಕಡೆ ಕಾಲು ಹಾಕಿದ. ಎತ್ತರಕ್ಕೆ ತಕ್ಕ ದಪ್ಪ. ಕಪ್ಪುಬಣ್ಣ. ಹಣೆಯಲ್ಲಿ ನಾಮ ಎದ್ದು ಕಾಣುತ್ತದೆ. ಅವನನ್ನು ಈ ಹಿಂದೆ ಯಾರೂ ಕಂಡುದೇ ಇಲ್ಲ. ಅವರು ಈ ಸೀಮೆಗೆ ಸೇರಿದವರಲ್ಲ. ತಮಿಳುನಾಡಿನ ಕಡೆಯವನು. ನಡಿಗೆ ದಿಟ್ಟ, ಮಾತು ನೇರ ಮತ್ತು ದಿಟ್ಟ ಕಣ್ಣಿನಲ್ಲೇ ಒಂದು ಕಾಂತಿ. ಎಲ್ಲರೂ ಅವನತ್ತ ದೃಷ್ಟಿ ಹರಿಸಿದರೂ ಅವನು ಮಾತ್ರ ಇವರಕಡೆಗೆ ತಿರುಗಿಯೂ ನೋಡದೆ ನೇರವಾಗಿ ನರಸಿಂಹಾಚಾರ್ಯರು ಕುಳಿತಿದ್ದ ಎಡೆಗೆ ನಡೆದ.

ಆಚಾರ್ಯರು ಪ್ರಶ್ನಾರ್ಥಕವಾಗಿ ಆಗಂತುಕನನ್ನೇ ದಿಟ್ಟಿಸಿದರು.

ಅವರಲ್ಲಿ ಒಂದು ವಿಧವಾದ ದಿಗಿಲು ಮೂಡಿತು. ಆ ವ್ಯಕ್ತಿ ನಡೆದರೇನೇ ನೆಲನಡುಗುತ್ತಿದೆ; ಕಂಡರೇ ಭಯವಾಗುತ್ತಿದೆ; ಯಾವನೋ ಉಪಾಸಕನಂತೆ ತೋರುತ್ತಾನೆ. ಅಂತಹ ವರ್ಚಸ್ಸು. 'ತನ್ನ ಕಡೆಗೇ ಏತಕ್ಕಾಗಿ ಬರುತ್ತಿದ್ದಾನೆ? ತನ್ನನ್ನು ಏನಾದರೂ ಮಾಡಿ ಬಿಡುತ್ತಾನೆಯೋ?' ಎಂದು ಎದೆ ಢವಢವನೆ ಹಾರಲಾರಂಭಿಸಿತು. ಧೈರ್ಯ ತಂದುಕೊಂಡರು. "ಏನು?" ಎಂದು ದಿಟ್ಟವಾಗಿಯೇ ಕೇಳಿದರು. ಸಂಭಾಷಣೆ ಈ ರೀತಿ ಮುಂದುವರೆಯಿತು.

"ನನಗೆ ವಿಪರೀತ ಹಸಿವು. ಅಡುಗೆಮನೆಯಿಂದ ಏನಾದರೂ ಪ್ರಸಾದ ತಂದುಕೊಡು."

"ಸ್ವಾಮಿ ಇನ್ನೂ ದೇವರಿಗೆ ನಿವೇದನವಾಗಿಲ್ಲ; ಹೋಗಿ ಕೂಡಿ."

"ನಿವೇದನವಾಗಿರುವ ಪ್ರಸಾದ ಇದೆಯಲ್ಲವೆ? ಅದನ್ನೇ ತಂದುಕೊಡು." ಇವನಿಗೆ ಹೇಗೆ ಗೊತ್ತು? ನಿವೇದನವಾಗಿದ್ದ ಪ್ರಸಾದವನ್ನು ಮನೆಗೆ ಒಯ್ಯಲು ತಾವು ಇಟ್ಟುಕೊಂಡಿರುವುದು? ಅವರ ಬಾಯಿಂದ ಮಾತು ಅಪ್ರಯತ್ನವಾಗಿ ಹೊರಬಂದಿತು.

"ಅದು ಬೆಳಗಿನ ನಿವೇದನವಾದದ್ದು ಮನೆಗೆ ಕೊಂಡೊಯ್ಯಲು ನನ್ನ ಪಾಲಿನದನ್ನು ಇಟ್ಟುಕೊಂಡಿದ್ದೇನೆ ಅಷ್ಟೆ. ತಣ್ಣಗಾಗಿದೆ."

"ನನಗೆ ಗೊತ್ತಿಲ್ಲ. ನನಗೀಗ ರಾಕ್ಷಸ ಹಸಿವು. ಪ್ರಾಣ ಹೋಗುತ್ತಿದೆ. ನಾಲ್ಕು ದಿವಸದಿಂದ ಉಪವಾಸ. ಹೊಟ್ಟೆಗೆ ಏನನ್ನಾದರೂ ತುಂಬಲೇಬೇಕು. ತಂದುಕೊಡು, ಅಷ್ಟೆ."

ನರಸಿಂಹಾಚಾರ್ಯರಿಗೆ ಈ ಹಟವನ್ನು ಕಂಡು ಬೇಸರವೂ ಆಯಿತು. ನಾಲ್ಕು ದಿವಸಗಳಿಂದ ಉಪವಾಸ ಎನ್ನುತ್ತಲೂ "ಅಯ್ಯೋ ಪಾಪ!" ಎನ್ನಿಸಿತು ಆ ಆಸಾಮಿ ನಿಜವನ್ನೇ ಹೇಳುತ್ತಿರುವನೇ, ಸುಳ್ಳು ಹೇಳುತ್ತಿರುವನೇ ಎಂಬ ಅನುಮಾನವೂ ಮೂಡಿತು. ಅವನ ದೃಷ್ಟಿಗೆ ತಾವು ಸೋತಂತೆ ಕಂಡು ಬಂದಿತು. ಏನಾದರೂ ಆಗಲಿ ಆತನೋರ್ವ ಭಾಗವತ! ಹಸಿವೆಂದೂ 'ದೇಹಿ' ಎಂದೂ ತಮ್ಮ ಮುಂದೆ ಕೈ ಒಡ್ಡಿ ಬೇಡುತ್ತಿದ್ದಾನೆ ಎಂಬ ಅನುಕಂಪಮೂಡಿತು. ಅವನು ಎದ್ದರು. ಅವರು ಕುಳಿತಿದ್ದೆಡೆ ನಡೆದರು. ಆ ವ್ಯಕ್ತಿ ಪ್ರಸಾದ ಸಿಗುವುದೆಂಬ ಭರವಸೆಯೊಡನೆ ಕುಳಿತ. ಆಚಾರ್ಯರು ಒಳಗಿನಿಂದ ಒಂದು ಎಲೆಯಲ್ಲಿ ತಮ್ಮ ಪಾಲಿನ ಪ್ರಸಾದದಲ್ಲಿ ಸ್ವಲ್ಪ ತಂದುಕೊಟ್ಟರು. ಬರಗೆಟ್ಟವನಂತೆ ಆತ ಗಬಗಬನೆ ಅದನ್ನು ತಿಂದ. ಪಾಪ ಎಷ್ಟು ಹಸಿವೆಯೋ? ಪ್ರಾಣಿಯಂತೆ ತಿನ್ನುತ್ತಿರುವನಲ್ಲ ಎಂದುಕೊಂಡರು ಆಚಾರ್ಯರು. "ಇನ್ನಷ್ಟು ಕೊಡು" ಎಂದು ಆತ ಕೇಳಿದ. ಆಚಾರ್ಯರು ತಮಗೆಂದು ಮಿಗಿಸಿಟ್ಟುಕೊಂಡಿದ್ದನ್ನೆಲ್ಲಾ ತಂದುಕೊಟ್ಟರು. ಆತ ಅದನ್ನೂ ತಿಂದು ಆಚಾರ್ಯರು ತಂದಿತ್ತ ನೀರನ್ನು ಕುಡಿದು "ತೃಪ್ತೋಽಸ್ಮಿ" ಎಂದ. ಅವನ ಕಣ್ಣಿನಲ್ಲಿ ಪ್ರಜ್ವಲಿಸುತ್ತಿದ್ದ ಕೋಪ ಈಗ ಶಾಂತಗೊಂಡಿತ್ತು. ಅದರ ಬದಲು ವಾತ್ಸಲ್ಯ ಮೂಡಿತ್ತು. ಆತ ಆಚಾರ್ಯರತ್ತ ಪ್ರಸನ್ನನಾಗಿ ನೊಡಿ,

"ನನ್ನ ಹಸಿವನ್ನು ಹಿಂಗಿಸಿದೆ. ಸಂತೋಷ. ನಿನ್ನ ಈ ಉಪಕಾರಕ್ಕೆ ನಾನು ಪ್ರತ್ಯುಪಕಾರ ಮಾಡಲೇಬೇಕು. ನನ್ನ ಹಿಂದೆ ಬರುತ್ತೀಯಾ?" ಎಂದ. ಅವನು ಹಾಗೆ ಪ್ರಶ್ನೆ ಮಾಡಿದರೂ ಅವನ ಕಣ್ಣಿನಲ್ಲಿ ಬಲವಂತವಾಗಿ ಸೆಳೆದುಕೊಂಡು ಹೋಗಬಲ್ಲೆ ಎನ್ನುವ ಒಂದು ನೋಟವಿದ್ದಿತು. ಆ ಸೂಜಿಗಲ್ಲಿನ ಬಲವನ್ನು ತಾವು ತಪ್ಪಿಸಿಕೊಳ್ಳಲು ಅಸಮರ್ಥರಾಗಿರುವಂತೆ ತೋರಿ ಬಂದಿತು ಆಚಾರ್ಯರಿಗೆ!

ಆದರೂ ತಮ್ಮನ್ನು ಸಂಬಾಳಿಸಿಕೊಂಡು "ಎಲ್ಲಿಗೆ?" ಎಂದು ಮರುಸವಾಲೆಸೆದರು.

ಆ ವ್ಯಕ್ತಿಯ ಕಣ್ಣಲ್ಲಿ ರೋಷ ಸ್ಪಷ್ಟವಾಯಿತು. "ಎಲ್ಲಿಗೆ ಏನು? ಬಾ ಎಂದರೆ ಬರಬೇಕು. ಇಷ್ಟವಿಲ್ಲವೆ? ಉಪಕಾರಮಾಡಬೇಕು ಎನಿಸಿತು," ಎಂದ. ಮಾತಿನಲ್ಲಿ ಗದರಿಕೆ ತುಂಬಿದ್ದಿತು. ನರಸಿಂಹಾಚಾರ್ಯರಿಗೆ ತಾನೇನೋ ಅಪರಾಧವೆಸಗಿದಂತೆ ತೋರಿತು. ಅವರು ತಲೆ ತಗ್ಗಿಸಿ "ಸರಿ, ಬರುತ್ತೇನೆ" ಎಂದು ಅರ್ಧ ಮನಸ್ಸಿನ ತಗ್ಗಿದ ಧ್ವನಿಯಿಂದ ಹೇಳಿದರು.

"ಸರಿ, ಈಗಲೇ ಹೊರಡು," ಎಂದು ಅಪ್ಪಣೆ

ಆಯಿತು.

"ಈ ರಾತ್ರಿಯಲ್ಲಿ?"

ಆ ವ್ಯಕ್ತಿ ಎದ್ದು ನಿಂತ. ದೇವಸ್ಥಾನದಿಂದ ಹೊರಡಲು. ಆತನ ಹಿಂದೆ ಆಚಾರ್ಯರೂ ಹೊರಟು ನಿಂತರು. ಹೊರಟು ನಿಂತರು ಎನ್ನುವುದಕ್ಕಿಂತ ಬಲವಂತವಾಗಿ ಕಾಲು ಹಾಕಿದರು ಎನ್ನುವುದು ಅತ್ಯಂತ ಸಮಂಜಸ.

ಆತ ಊರ ಹೊರಗಿನ ಕಾಡಿನತ್ತ ಸಾಗಿದ. ಮಂತ್ರ ಮುಗ್ಧರಾದಂತೆ ಆಚಾರ್ಯರು ಹಿಂಬಾಲಿಸಿದರು. ಹೊರಗಿನ ಗಾಳಿ, ಮಳೆ, ಶೀತ ಇವೊಂದರ ಪರಿವೆಯೂ ಈರ್ವರಿಗೂ ಇಲ್ಲವಾಗಿ ತೋರಿಬಂದಿತು. ಕತ್ತಲಲ್ಲೆ ರಾಯಗೋಪುರ ದಾಟಿದರು. ಕಾಡು ಮೃಗಗಳು ಸಂಚರಿಸುತ್ತಿರಬಹುದು. ಹಾವುಗಳು ರಾತ್ರಿ ಸ್ವಚ್ಛಂದ ಸಂಚಾರಕ್ಕೆ ಬಂದಿರಬಹುದು. ಚಂದ್ರನ ಸುಳಿವೂ ಇಲ್ಲ. ಒಳ್ಳೆಯ ದಟ್ಟ ಮೋಡ ಕವಿದು ಅಮಾವಾಸ್ಯೆಯ ಕತ್ತಲನ್ನು ನೆನಪಿಸುತ್ತಿದೆ. ನರಿಗಳು ಊಳಿಡುತ್ತಿರುವುದು ಕೇಳಿಸುತ್ತಿದೆ. ಕಿರುಬಗಳ ಸಂಚಾರ ಇದೆ ಎಂದು ತಿಳಿದಿದ್ದಿತು. ಆದರೆ ಈಗ ಅವರಿಗೆ ಅವುಗಳದೊಂದೂ ಲಕ್ಷ್ಯವಿಲ್ಲ. ಮೈಲಿ ದಾರಿ ಸಾಗಿತು. ಆತ ಮುಂದೆ, ಆಚಾರ್ಯರು ಹಿಂದೆ. ಹಿಂತಿರುಗಿ ಹೋಗಿಬಿಡಲೇ ಎನ್ನಿಸದಿರಲಿಲ್ಲ, ಭಯವಾಯಿತು. ಆದರೆ ಏನು ಆಕರ್ಷಣೆಯೋ, ಛಲವೋ, 'ತಾವು ಗಂಡಸಲ್ಲವೆ?' ಎಂಬ ಆತ್ಮಗೌರವವೋ, ಏನು ಮಾಡುತ್ತಾನೆ ನೋಡೇಬಿಡೋಣ ಎಂಬ ದೃಢ ನಿರ್ಧಾರವೊ, ಕುತೂಹಲವೋ- ಅಂತೂ ಯಾವುದೊ ಒಂದು ಅಥವಾ ಹಲವು ಭಾವನೆಗಳಿಂದ ಬದ್ಧರಾಗಿ ಮುಂದೆ ಸಾಗಿದರು. ಮುಂದಿಟ್ಟ ಹೆಜ್ಜೆ ಹಿಂದಿಡುವುದು ಹೇಡಿಯ ಲಕ್ಷಣ. ನೀರಿನಲ್ಲಿ ಇಳಿದಿದ್ದಾಯಿತು. ಛಳಿಗೆ ಹೆದರುವುದೇ? ಆದದ್ದಾಗಲಿ ಎಂಬ ದೃಢ ಮನೋಭಾವ ಆವರಿಸಿರಬೇಕು. ಅಂತೂ ನಡೆದರು, ನಡೆದೇ ಬಿಟ್ಟರು.

ವೇದಪುಷ್ಕರಿಣಿಗೆ ಇಬ್ಬರೂ ಬಂದರು; ಮೆಟ್ಟಿಲ ಮೇಲೆ ಆತ ನಿಂತ.

"ಇಳಿದು ಸ್ನಾನ ಮಾಡಿ ಬಾ" ಎಂದು ಆಚಾರ್ಯರಿಗೆ ಅಣತಿಹಾಕಿದ.

ಆಚಾರ್ಯರು ಒಂದು ನಿಮಿಷ ಹಿಂಜರಿದರು.




ಆದರೂ ಮಾತನಾಡದೇ ವಿಧೇಯರಾಗಿ ಸ್ನಾನ ಮಾಡಿ ಎದ್ದು ಬಂದರು. ಒದ್ದೆ ಬಟ್ಟೆಯಲ್ಲಿ ಆತನ ಮುಂದೆ ನಿಂತರು. ಆತ ಏನನ್ನೋ ಉಚ್ಚರಿಸುತ್ತಾ ತನ್ನ ಕೈ ಚೀಲದಿಂದ ಈಟಿಯಂತಹ ಪದಾರ್ಥವೊಂದನ್ನು ತೆಗೆದು ಅವರ ತಲೆಯ ಮೇಲೆ ಇಟ್ಟು ಅಭಿಮಂತ್ರಿಸಿ ಕಿವಿಯ ಬಳಿ ಮುಖ ತಂದು ಮಂತ್ರವೊಂದನ್ನು ಉಪದೇಶ ಮಾಡಿದ.

ಆಚಾರ್ಯರಿಗೆ ತಾವೆಲ್ಲೋ ತೇಲಿ ಹೋಗುವಂತೆ ಭಾಸವಾಯಿತು. ತಮಗೆ ಏನೋ ಆಗಿಬಿಡುವಂತೆ ತೋರಿತು. ಕಿವಿಯಲ್ಲಿ ಮಂತ್ರವು ಗಟ್ಟಿಯಾಗಿ ಸ್ವಚ್ಛವಾಗಿ ಸ್ಪಷ್ಟವಾಗಿ ಕೇಳಿಬಂದು ಅದು ತಲೆಯಲ್ಲಿ ಮೈಯಲ್ಲಿ ಅನುರಣಿತಗೊಂಡಂತೆ ಭಾಸವಾಯಿತು. ಅದೊಂದು ಹೇಳಲಾರದಂತಹ ಅನುಭವ.

"ಗಮನವಿಟ್ಟು ಕೇಳಿಕೊಂಡೆಯಾ? ತಪ್ಪಾಗಿ ಉಚ್ಚರಿಸಿದರೆ ನೀನು ನಾಶವಾಗುತ್ತೀಯೇ? ಅನುಮಾನಬಂದರೆ ಮತ್ತೊಮ್ಮೆ ಕ್ರಮವನ್ನೂ ಮಂತ್ರವನ್ನೂ ಕೇಳಿ ತಿಳಿದುಕೋ. ಮತ್ತೆ ನಾನು ಸಿಕ್ಕುವುದಿಲ್ಲ. ಮಂತ್ರೋಚ್ಚಾರಣೆಯಲ್ಲಿ ಲೋಪವಿರಕೂಡದು" ಎಂದು ಆತ ಹೇಳಿದಂತೆ ಅವರಿಗೆ ಭಾಸವಾಯಿತು. ಮಂತ್ರವು ಅವರಲ್ಲಿ ಭದ್ರವಾಗಿ ನೆಲೆಗೊಂಡರೂ ಆಚಾರ್ಯರು ಮತ್ತೊಮ್ಮೆ ಅದರ ವಿವರವನ್ನು ಅರಿಯಲು ಅಪೇಕ್ಷಿಸಿದರು.

ಆತ ಬೇಸರಿಸದೆ ಬೀಜಾಕ್ಷರ ಸಹಿತ ಮತ್ತೊಮ್ಮೆ ಕಿವಿಯಲ್ಲಿ ಉಸುರಿದ. ಅವರ ಹಣೆಯ ಮಧ್ಯಭಾಗವನ್ನು ಕೈಯಿಂದ ಮುಟ್ಟಿ "ಇನ್ನು ನನ್ನ ಕೆಲಸವಾಯಿತು. ನಮ್ಮ ಗುರು ನನಗೆ ನೀಡಿದ ಈ ವಿದ್ಯೆಯನ್ನು ಉತ್ತರಾಧಿಕಾರಿಗೆ ಒಪ್ಪಿಸಿದ್ದಾಯಿತು. ಸಿದ್ಧಿಯಾಗುವವರೆಗೂ ಇದನ್ನು ಪುನಶ್ಚರಣ ಮಾಡುತ್ತಲೇ ಇರಬೇಕು. ಇದೋ ಈ ಕೊಡಲಿ, ಗುರುಗಳಿಂದ ನನಗೆ ಪ್ರಸಾದಿತವಾಗಿ ಈಗ ನಿನ್ನ ಕೈ ಸೇರುತ್ತಿದೆ. ಇದು ನಿನ್ನ ರಕ್ಷಿಸುತ್ತದೆ. ಇದಕ್ಕೆ ನೀನೇ ಮುಂದಕ್ಕೆ ಯಜಮಾನ. ಸರಿಯಾಗಿ ನೋಡಿಕೊಳ್ಳಬೇಕು. ಪ್ರತಿದಿನ ಪೂಜೆ ಸಲ್ಲಿಸಬೇಕು, ಮಂತ್ರ ಸಿದ್ಧಿಯಾಗುವವರೆಗೂ ಮಂತ್ರೋಪಾಸನೆ ಬಿಡದೆ ಮಾಡು. ಲೋಪವೇನಾದರೂ ಜರುಗಿದಲ್ಲಿ ತಲೆ ಹೋಳಾಗುವುದು ಮಾತ್ರವಲ್ಲದೆ ನಿನ್ನ ಮನೆ ತನವೆಲ್ಲ ನಾಶವಾಗುತ್ತದೆ. ಹುಷಾರು. ತಪ್ಪದೇ ನಡೆದುಕೊಂಡು ಫಲವನ್ನು ಅನುಭವಿಸು. ಮಂತ್ರ ವನ್ನು ಮಾತ್ರ ಸ್ವಾರ್ಥಕ್ಕಾಗಲಿ ಅಥವಾ ದುಡ್ಡಿಗಾ ಗಲೀ ಎಂದಿಗಾದರೂ ಬಳಸಿದರೆ ನಿನ್ನ ಸರ್ವನಾಶ ಸ್ವತಸ್ಸಿದ್ಧ. ಇದು ಕೇವಲ ಲೋಕೋಪಕಾರಕ್ಕಾ ಗಿಯೂ ಸಮಸ್ತ ಸನ್ಮಂಗಳಕ್ಕಾಗಿಯೂ ಬಳಸಲ್ಪಡ ಬೇಕು ತಿಳಿಯಿತೆ? ಅದರ ಮೇಲೆ ನಿನ್ನ ಅದೃಷ್ಟ. ಇನ್ನು ನೀನು ಹಿಂತಿರುಗಬಹುದು. ಆದರೆ ಇಲ್ಲಿಗೆ ಬಂದಿದ್ದು, ನಾನು ನಿನಗೆ ಉಪದೇಶಿಸಿದ್ದು ಈ ಎಲ್ಲ ವಿಚಾರಗಳನ್ನೂ ಮಂತ್ರಸಿದ್ಧಿ ಆಗುವವರೆಗೂ ಯಾರ ಮುಂದಾದರೂ ಬಾಯಿ ಬಿಟ್ಟೀಯೆ. ಎಲ್ಲಾ ನೀರಿನಲ್ಲಿ ಹೋಮ ಮಾಡಿದಂತೆ ಆಗಿಬಿಡುತ್ತದೆ. ಜಾಗ್ರತೆಯಾಗಿರು. ನನ್ನನ್ನು ಇನ್ನು ಹುಡುಕಲು ಯತ್ನಿಸಬೇಡ. ನಾನು ನಿನಗೆ ಸಿಕ್ಕುವುದೂ ಇಲ್ಲ. ಮಂತ್ರವನ್ನು ಉತ್ತರಾಧಿಕಾರಿಗೆ ಒಪ್ಪಿಸಲು ಮೂರು ದಿನಗಳಿಂದ ಒಂದೇ ಸಮನೆ ನನಗೆ ಅಪ್ಪಣೆ ಆಗುತ್ತಿದೆ. ಹೀಗಾಗಿ ಮೂರು ನಾಲ್ಕು ದಿನಗಳಿಂದ ನಾನು ಹೇಗಿದ್ದೆ ಏನು ಮಾಡುತ್ತಿದ್ದೆ ಎನ್ನುವುದರ ಪರವೆಯೇ ನನಗೆ ಇಲ್ಲ. ಸರಿಯಾದ ವನನ್ನು ಹುಡುಕುತ್ತಿದ್ದೆ. ಇದೆಲ್ಲಾ ಜನ್ಮಜನ್ಮಾಂತರಕ್ಕೆ ಒದಗುವ ಭಾಗ್ಯ. ನಿನಗೆ ಲಭಿಸಿದೆ. ನಿನ್ನನ್ನು ನೋಡಿದಾಗಲೇ ಅಂದುಕೊಂಡೆ. ದೈವವೇ ನಿನ್ನತ್ತ ನನ್ನನ್ನು ನಡೆಸಿತು ಎಂದು ತಿಳಿದುಕೋ. ನನ್ನ ಕೆಲಸವಾಯಿತು. ನಾನಿನ್ನು ಹೋಗಿ ಬರುತ್ತೇನೆ" ಎಂದು ಹಿಂತಿರುಗಿಯೂ ನೋಡದೆ ಹೆಜ್ಜೆ ಹಾಕುತ್ತಾ ಆತ ಕಾಳ ರಾತ್ರಿಯಲ್ಲಿ ಕರಗಿ ಹೋದ

ಆತನ ರೂಪವೇ ಆಚಾರ್ಯರ ಕಣ್ಣಿಗೆ ಕಟ್ಟಿದಂ ತಿತ್ತು. ಆದರೆ ಆತ ಯಾರೆಂಬುದು ಮಾತ್ರ ತಿಳಿಯಲಿಲ್ಲ. ನಡೆದ ಘಟನೆಗಳೆಲ್ಲಾ ಕನಸಿನಂತೆ ಕಂಡುಬಂದಿತು. ಮೈ ಜಿಗುಟಿಕೊಂಡು ನೋಡಿ ದರು. ತಾವಿನ್ನೂ ವೇದಪುಷ್ಕರಿಣಿ ದಡದಲ್ಲೇ ನಿಂತಿರುವುದು ಕಂಡು ಬಂದಿತು. ಕೈಯಲ್ಲಿ ಆತ ನೀಡಿದ ಮಂತ್ರ ಪೂರಿತವಾದ ಗಂಡುಗೊಡಲಿ ಬೇರೆ ಇದೆ. ಅದನ್ನು ತಿರುಗಿಸಿದರು. ಅದರ ತುಂಬಾ ಬೀಜಾಕ್ಷರಗಳು, ಆದ್ದರಿಂದ ನಡೆದಿದ್ದೆಲ್ಲಾ ಭ್ರಾಂತಿಯಲ್ಲ, ನಿಜ. ಮಧ್ಯರಾತ್ರಿ ಆಗಿದೆ. ಮನೆಗೆ ಹೋಗಬೇಕು. ಮನೆಯಲ್ಲಿ ಎಲ್ಲರೂ ಎಲ್ಲಿ ಹೋದರೋ ಎಂದು ಕಂಗಾಲಾಗಿರುತ್ತಾರೆ. ಆದರೂ ಒಂದು ಬಗೆಯ ದುಃಖ ಆವರಿಸಿತು. ಸ್ವರ್ಗದಿಂದ ಭೂಲೋಕಕ್ಕೆ ಎಸೆಯಲ್ಪಟ್ಟಂತೆ ಅವರ ಭಾವನೆ. ಪರಮಗುರುವಿನ ಅಗಲಿಕೆಯಿಂದ ಅವರು ತತ್ತರಿಸಿ ಹೋದಂತೆ ಕಂಡುಬಂದಿತು. ಇದೇನು ವ್ಯಾಮೋಹ? ಋಣಾನುಬಂಧ? ಕೇವಲ ಕೆಲವೇ ನಿಮಿಷಗಳ ಸಂಘಟನೆಯ ಮೂಲಕ ಆ ವ್ಯಕ್ತಿ ತನಗೆ ಅತ್ಯಂತ ಆಪ್ತನೆನಿಸಿ ಕೊಂಡ. ಆತ ಉಪದೇಶಿಸಿದ ಮಂತ್ರ ಕಿವಿಯಲ್ಲಿ ರಿಂಗಣಿಸುತ್ತಿದೆ. ಅತ್ಯಂತ ಪವಿತ್ರವಾದ ಸುದ ರ್ಶನ ಮಂತ್ರ. ಆತ ಸುದರ್ಶನೋಪಾಸಕನೆಂದು ಆಚಾರ್ಯರು ಆಗಲೇ ಅರಿತಿದ್ದು. ಆತ ಉಪದೇಶಿ ಸಿದ ಮಂತ್ರವನ್ನೇ ಉಚ್ಚರಿಸುತ್ತಾ ಮನೆಯತ್ತ ಕಾಲು ಹಾಕಿದರು. ಮನಸ್ಸಿನಲ್ಲಿ ಏನೋ ಕಸಿವಿಸಿ. ನಿಧಿಯೊಂದನ್ನು ತೊರೆದು ಬಂದಂಥ ಭಾವನೆ.

ನರಸಿಂಹಾಚಾರ್ಯರು ಈಗ ಬೇರೆ ತೆರನಾಗಿ ದ್ದಾರೆ. ಅವರ ಮುಖದ ಕಾಂತಿಯೇ ಬದಲಾಯಿ ಸಿದೆ. ಅದೃಷ್ಟ ಖುಲಾಯಿಸಿದೆ. ಅವರ ತೇಜಸ್ಸು ಅವರೀಗ ಮಂತ್ರಸಿದ್ಧಿಯನ್ನು ಹೊಂದಿರುವುದನ್ನು ಸಾರುತ್ತದೆ. ಅವರ ಶ್ರದ್ಧೆಯ ಉಪಾಸನೆಗೆ, ಸುದ ರ್ಶನ ಒಲಿದಿದೆ. ಅವರು ಬಿಡದೆ ಮಂತ್ರೋಪಾ ಸನೆ ಆ ಕೊಡಲಿಯ ಪೂಜೆ ನಡೆಸುತ್ತಿದ್ದಾರೆ. ಅವರಲ್ಲೀಗ ವಾಕ್‌ಶುದ್ಧಿ ಮೂಡಿದೆ. ಅವರು ಏನು

ಎಂದರೂ ನಡೆದೇ ಬಿಡುತ್ತದೆ. ಅದೊಂದು ಅಪೂರ್ವಯೋಗ, ಎಲ್ಲರಿಗೂ ಬರುವಂತಹುದಲ್ಲ. ಅವರನ್ನು ಹಲವರು ಆಶ್ರಯಿಸುತ್ತಿದ್ದಾರೆ. ಅವರ ಮನೆಯನ್ನು ಅರಸಿಕೊಂಡು ಊರೂರಿಂದ ಜನ ಬರುತ್ತಾರೆ. ಅವರನ್ನು ಪ್ರಶ್ನೆಕೇಳಿ ಸಮಾಧಾನ ಪಡೆಯಲು ಅನೇಕರು ಬರುತ್ತಿದ್ದಾರೆ. ಅವರ ಕಟಾಕ್ಷ ವೀಕ್ಷಣಕ್ಕೆಂದೇ ಜನ ಕಾದು ಕೈಕಟ್ಟಿ ನಿಲ್ಲುತ್ತಾರೆ. ಅವರು ಸುಮ್ಮನೆ ತಮತ್ತ ಕಟಾಕ್ಷ ಹರಿಸಿದರೇ ತಮಗೂ ತಮ್ಮ ಭವಿಷ್ಯಕ್ಕೂ ಶ್ರೀರಕ್ಷೆ ಎಂದು ನಂಬಿದವರು ಹಲವರು. ಇದು ಸಿದ್ಧಿ ಪುರುಷರ ಮಹತ್ವದಂತೆ. ಅವರು ಇರುವ ಜಾಗದಲ್ಲೇ ನೆಮ್ಮದಿ ಏರ್ಪಡುವುದಂತೆ. ಅವರು ನಡೆದ ಜಾಗವೆಲ್ಲ ಸುಭಿಕ್ಷಮಯ ಎಂದು ಹೇಳುತ್ತಾರೆ. ಅವರು ಇದು ನಡೆಯುತ್ತದೆ ಎಂದರೆ ನಡೆದೇ ಬಿಡುತ್ತದೆ. ಇಲ್ಲ ಎಂದರೆ ಇಲ್ಲವೇ ಇಲ್ಲ. ಜನ ತಮ್ಮ ಕಷ್ಟದೆಶೆಯಿಂದ ಪಾರಾಗಲು ಆಚಾರ್ಯರ ಪದತಲದಲ್ಲಿ ಹಣವನ್ನು ರಾಶಿರಾಶಿಹಾಕಲೂ ಹಿಂಜರಿಯುವುದಿಲ್ಲ. ಅವರಿಂದ ಸುದರ್ಶನ ಜಪ ನಡೆಸಲು ಜನ ಆಹ್ವಾನಿಸುತ್ತಾರೆ. ಕಾರುಗಳು ಸಾಲುಗಟ್ಟಿ ಅವರ ಮನೆಯ ಮುಂದೆ ನಿಲ್ಲುತ್ತವೆ. ಜನ ತಟ್ಟೆ ತುಂಬಾ ಹಣ್ಣು ಹಂಪಲು ಕಾಣಿಕೆ ವಗೈರೆ ತರುತ್ತಾರೆ. ಶಾಲುಗಳೇನು? ಜರತಾರೀ ಮಗುಟಗಳೇನು? ಉಂಗುರವೇನು? ಸರಗಳೇನು? ಹೆಂಡತಿಗೆ ಜರತಾರಿ ಸೀರೆಗಳೇನು? ಖಣ-ಕುಪ್ಪಸಗಳೇನು? ಅವರಿಗೀಗ ಒಂದು ನಿಮಿಷವೂ ಪುರಸೊತ್ತಿಲ್ಲ. ದೇವಸ್ಥಾನದ ಕೈಂಕರ್ಯ ಕಾರ್ಯ ಬಿಟ್ಟಿದ್ದಾಯಿತು. ಈಗ ಊರೂರು ಸುತ್ತುವುದಾಯಿತು. ರಾಜರ ವಂಶಸ್ಥರಾದ ಅರಸುಗಳು ಮನೆಗೇ ಕಾರು ಕಳುಹಿಸಿ ಕರೆಸಿಕೊಳ್ಳುತ್ತಾರೆ. ಪಾದಪೂಜೆ ಎಸುಗುತ್ತಾರೆ. ಲವಾಜಮೆ ನೀಡುತ್ತಾರೆ. ಹಣ್ಣು ಹಂಪಲು ಒಪ್ಪಿಸುತ್ತಾರೆ. ದೇವರ ಪೂಜೆಗೆಂದು ಕಾಣಿಕೆ ಸಮರ್ಪಿಸುತ್ತಾರೆ. ಎಲ್ಲಾ ಸುದರ್ಶನ ಮಂತ್ರಶಕ್ತಿ ಪ್ರಭಾವ. ಮೈಸೂರು ಮಹಾರಾಜರೂ ಅರಮನೆಗೆ ಕರೆಸಿ ಗೌರವಿಸಿದ್ದಾರೆ. ವಿದೇಶೀಯರೂ ಇವರ ಪ್ರಭಾವಕ್ಕೆ ಮಣಿದಿದ್ದಾರೆ.

ಅವರ ಸಿದ್ಧಿಗೆ ಒಂದೆರಡು ಉದಾಹರಣೆ ನೀಡಬೇಕೆಂದು ತೋರುತ್ತದೆ. ನಮ್ಮ ತಾಯಿಯ



"ಇಷ್ಟು ದಿನ ಒಂದು ಬನ್ನು ಮತ್ತು ಮೂರು ಲೋಟ ನೀರು ಕುಡುದು ಅನುಭವವಿದೆ. ಮುಂದೆ ಕೆಲಸ ಸಿಕ್ರೆ ಎರಡೊತ್ತು ಊಟ, ಕಣ್ತುಂಬ ನಿದ್ರೆ ಮಾಡೋ ಅಭ್ಯಾಸ ಮಾಡ್ಕೋತೀನಿ."

ವರಿಂದ ತಿಳಿದು ಬಂದ ವಿಷಯಗಳನ್ನು ನಿವೇದಿಸುತ್ತೇನೆ.

ಒಬ್ಬ ವಿದೇಶೀ ಅಧಿಕಾರಿಯು ಅವರ ಮಹಿಮೆಯನ್ನರಿಯಲು ಅವರನ್ನು ತನ್ನ ಮನೆಗೆ ಆಮಂತ್ರಿಸಿದನು. ಅರಸುಗಳ ಮೂಲಕ ಅವರ ಖ್ಯಾತಿಯನ್ನರಿತು ಅವನು ತನ್ನ ಬಗ್ಗೆ ತಿಳಿದುಕೊಳ್ಳಲು ಕುತೂಹಲಪಟ್ಟು ಕರೆಸಿಕೊಂಡನು. ಆಚಾರ್ಯರು ಅವನ ಮನೆಗೆ ಅರಸುಗಳ ಮೂಲಕ ಕರೆದೊಯ್ಯಲ್ಪಟ್ಟಾಗ ಆತನು ಗೌರವದಿಂದ ಸತ್ಕರಿಸಿದನಂತೆ. ಹಣ್ಣುಹಂಪಲು ಇವುಗಳನ್ನು ನೀಡಿ ಉಪಚರಿಸಿದನಂತೆ. ಆತ ಇದ್ದುದು ಮೈಸೂರಿನಲ್ಲಿ. ಅವನ ಹೆಂಡತಿ ಬ್ರಿಟನ್ನಿನಲ್ಲಿದ್ದಳು. ಆತ ಆಚಾರ್ಯರನ್ನು ಕುರಿತು, "ಈಗ ನನ್ನ ಹೆಂಡತಿ ಏನು ಮಾಡುತ್ತಿರಬಹುದು?" ಎಂದು ಕೇಳಿದನು. ಆಚಾರ್ಯರು ನಕ್ಕು "ಏನು ಮಾಡುತ್ತಿದ್ದಾಳೆ ಎಂದೇ ಕೇಳಿರಿ ಹೇಳುತ್ತೇನೆ" ಎಂದು ಹೇಳಿ ನಿರ್ನಿಮೇಷರಾಗಿ ಕೆಲ ಕಾಲ ಇದ್ದು ಗಂಭೀರವಾಗಿ ಉತ್ತರಿಸಿದರಂತೆ, "ಆಕೆ ನಿನ್ನನ್ನೇ ಕುರಿತು ಮನೆಯ ಪಲ್ಲಂಗದಲ್ಲಿ ಪತ್ರ ಬರೆಯುತ್ತಿದ್ದಾಳೆ?" ಆತ ಅಲ್ಲಿಗೇ ಬಿಡದೇ "ಏನು ಬರೆಯುತ್ತಿದ್ದಾಳೆ? ಒಕ್ಕಣೆ ತಿಳಿಸಬಲ್ಲಿರಾ?" ಎಂದನು. ಮಾತುಕತೆಗಳು ಆ ಮಧ್ಯ




**“ 'ಕಡಿತ' ಅಂದ್ರೆ ಮೊದ್ಲು ಅಪ್ಪ, ಆತ ಒಗೆದ್ಮೇಲೆ ಮಗ, ಇನ್ನು ಮೂರನೇ ಒಗೆತಕ್ಕೆ ಮೊಮ್ಮಗ ಹೀಗೇ ಕೊನೇಗೆ ನೆಲ ಒರೆಸೋಕೆ ಉಪಯೋಗ್ಸೂದೂಂತ....”**

ವರ್ತಿ ಅರಸು ಪ್ರಮುಖರ ಮೂಲಕ ಸಾಗುತ್ತಿದ್ದಿತು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಏಕೆಂದರೆ ಆಚಾರ್ಯರಿಗೆ ಇಂಗ್ಲಿಷ್ ಪರಿಚಯ ಇರಲಿಲ್ಲ. ಆಚಾರ್ಯರು ಹಿಂಬೀಳಲಿಲ್ಲ. ನಿರ್ವಿಕಾರರಾಗಿ “ಒಂದು ಕಾಗದ ಹಾಗೂ ಮಸಿಯನ್ನು ತರಿಸಿ ಕೊಡಿ” ಎಂದರು. ಕಾಗದ-ಮಸಿ ಬಂದುವು. ಆಚಾರ್ಯರು ಕಾಗದದ ಮೇಲೆ ಇಂಗ್ಲೀಷ್ ಅಕ್ಷರಗಳನ್ನು ಮೂಡಿಸಿದರು. ವಿಚಿತ್ರವೆಂದರೆ ಆ ಬರವಣಿಗೆ ಆ ವಿದೇಶೀಯನ ಹೆಂಡತಿಯ ಬರವಣಿಗೆಯ ಪಡಿಯಚ್ಚಿನಂತಿದ್ದಿತಂತೆ. ಆ ರೀತಿ ಬರೆದು ವಿದೇಶೀಯನ ಕೈಗಿತ್ತು “ಈ ಕಾಗದದಲ್ಲಿರುವಂತೆ ಪತ್ರ ಬರೆಯುತ್ತಿದ್ದಾಳೆ. ಆ ಪತ್ರ ಇನ್ನು ಹದಿನೈದು ದಿನಗಳಲ್ಲಿ ನಿಮ್ಮ ಕೈ ಸೇರುತ್ತದೆ. ಆಗ ನನ್ನ ಮಾತಿನ ಸತ್ಯಾಸತ್ಯತೆ ತಿಳಿಯುತ್ತದೆ,” ಎಂದು ಹೇಳಿ ಹೊರಟು ಬಂದರಂತೆ. ಅವರೆಂದಂತೆಯೇ ಹದಿನೈದು ದಿನಗಳೊಳಗೆ ಪತ್ರವೊಂದು ಆ ವಿದೇಶೀಯನ ಹೆಂಡತಿಯಿಂದ ಬಂದು ಆ ಪತ್ರದ ಒಕ್ಕಣೆ ಆಚಾರ್ಯರು ಬರೆದ ರೀತಿಯಲ್ಲಿಯೇ ಇದ್ದಿತಂತೆ! ಆತ ಬಹಳ ಆಶ್ಚರ್ಯಪಟ್ಟು ಆಚಾರ್ಯರಿದ್ದ ಮೊಕ್ಕಾಮಿಗೇ ಬಂದು ಗೌರವ ಸಲ್ಲಿಸಿದನಂತೆ.

ಮೈಸೂರಿನ ವಿಖ್ಯಾತ ಸಂಸ್ಕೃತ ವಿದ್ವಾಂಸರೊಬ್ಬರು (ಅವರ ಹೆಸರನ್ನು ಬೇಕೆಂದೇ ಪ್ರಸ್ತಾಪಿಸಿಲ್ಲ) ಬಹಳ ಕಷ್ಟಕ್ಕೆ ಸಿಲುಕಿದ್ದರು: ಅವರ ಮಗನಿಗೆ ಎಂತಹುದೋ ಖಾಯಿಲೆಯಾಗಿ ಯಾವ ಯಾವ ರೀತಿಯ ಔಷಧೋಪಚಾರಗಳಿಂದಲೂ ಅವನ ತೊಂದರೆ ನಿವಾರಣೆ ಆಗಿರಲಿಲ್ಲ. ಕಡೆಗೂ ಆ ವಿದ್ವಾಂಸರು ಆಚಾರ್ಯರ ಬಳಿಗೆ ಬಂದು ತಮ್ಮ ಅಳಲನ್ನು ತೋಡಿಕೊಂಡರು. ಆಚಾರ್ಯರು ಕೇಳಿ ಶಾಂತಚಿತ್ತರಾಗಿ ಹೇಳಿದರು. “ನಿಮ್ಮ ಹಿಂದಿನವರು ಅತಿ ಭಕ್ತಿಯಿಂದ ಪೂಜಿಸಿದ ಆಂಜನೇಯನ ವಿಗ್ರಹ ಈಗ ಮರಳಿನಲ್ಲಿ ಹೂತು ಹೋಗಿ ನೋಡುವವರೇ ಇಲ್ಲದೆ ಅಲಕ್ಷಿಸಲ್ಪಟ್ಟಿದೆ. ಅದನ್ನು ಮರಳಿನಿಂದ ತೆಗೆದು ಜೀರ್ಣೋದ್ಧಾರ ಮಾಡಿಸಿ ಆಗ ನಿಮ್ಮ ಈ ಎಲ್ಲ ತೊಂದರೆಗಳು ಪರಿಹಾರವಾಗುತ್ತವೆ. ಈಗಿನ ಕಷ್ಟಗಳೆಲ್ಲ ಆ ದೇವರಿಗೆ ಆಗಿರುವ ಅಪಚಾರದಿಂದಲೇ” ಎಂದರಂತೆ. ಆತ “ಆ ವಿಗ್ರಹ ಎಲ್ಲಿ ಅಡಗಿದೆ ಎಂದು ತಿಳಿಯುವ ಬಗೆ ಹೇಗೆ?” ಎನ್ನಲು ಆಚಾರ್ಯರು ಅವರಿಗೆ ಆ ಜಾಗವನ್ನು ವಿವರಿಸಿ “ಅಲ್ಲಿ ನೆಲದ ಮೇಲೆ ಆಂಜನೇಯನ ಹೆಜ್ಜೆ ದೊಡ್ಡದಾಗಿ ಮೂರು ದಿನ ಪರ್ಯಂತ ಮೂಡಿರುತ್ತದೆ. ಸುಲಭವಾಗಿ ಗುರುತಿಸಬಹುದು. ಮೂರು ದಿನಗಳ ನಂತರ ಮುಚ್ಚಿಹೋಗುತ್ತದೆ. ಅಷ್ಟರೊಳಗೆ ಹೋಗಿ ವಿಗ್ರಹವನ್ನು ಪಡೆಯಿರಿ,” ಎಂದರಂತೆ.

ಅದೇ ರೀತಿ ಆ ಹಿರಿಯರಿಗೆ ವಿಗ್ರಹ ಗೋಚರಗೊಂಡು ಅದನ್ನು ಪುನರುದ್ಧಾರ ಮಾಡಿದರಂತೆ. ಅವರ ಮಗನಿಗೆ ಬಂದಿದ್ದ ಖಾಯಿಲೆಯೂ ವಾಸಿಯಾಯಿತು. ಅವರ ಕಷ್ಟಗಳೆಲ್ಲ ನಿವಾರಣೆಗೊಂಡುವು. ಅವರಿಗೆ ರಾಜಾಸ್ಥಾನದಲ್ಲಿ ಮನ್ನಣೆಯೂ ಬಂದಿತು.

ಆಚಾರ್ಯರು ಮೈಸೂರಿಗೆ ಅನೇಕ ಬಾರಿ ಬಂದಾಗಲೂ ನಮ್ಮ ಮನೆಯಲ್ಲಿಯೇ ಮೊಕ್ಕಾಂ ಮಾಡುತ್ತಿದ್ದುದರಿಂದಲೇ ಈ ಎಲ್ಲಾ ವಿಚಾರಗಳು

ನಮಗೆ ತಿಳಿದದ್ದು. ನಮ್ಮ ಮಾತುಃ-ಪಿತಾಮಹರು ಅವರಿಗೆ ಅತ್ಯಂತ ಆಪ್ತರು. ಅವರಿಗೆ ಎಲ್ಲಾ ಅನುಕೂಲಗಳನ್ನು ಮಾಡಿಕೊಡುತ್ತಿದ್ದರು. ನಮ್ಮ ತಾಯಿಗೆ ಆಗ ೭-೮ ವರ್ಷ ವಯಸ್ಸು. ಅವರು ಬಂದಾಗ ಆಕೆ ಅವರ ಹಿಂದೆ ಮುಂದೆ "ಮಾಮ ಮಾಮ' ಎಂದು ಓಡಾಡುತ್ತಿದ್ದರಂತೆ. ಆಚಾರ್ಯರಿಗೂ ಆಕೆಯ ಮೇಲೆ ವಿಶ್ವಾಸ. ಅವರೂ ಆಕೆಯನ್ನು ಅರಸುಗಳ ಮನೆಗೆ ಸಂಗಡ ಕರೆದೊಯ್ಯುತ್ತಿದ್ದರಂತೆ. ಅಲ್ಲಿ ಅವರಿಗೆ ನಡೆಯುತ್ತಿದ್ದ ಗೌರವ ಮರ್ಯಾದೆಗಳನ್ನು ಆಕೆ ಕಣ್ಣಾರೆ ಕಂಡಿದ್ದಳಂತೆ.

ಇಂತಹ ಉತ್ಕರ್ಷದೆಸೆಯನ್ನು ವಿವರಿಸಿದ ನಂತರ ಅದೇ ಬಾಯಿಂದ ಅಪಕರ್ಷಕ ಸ್ಥಿತಿಯನ್ನೂ ಹೇಳಲು ಮನಸ್ಸು ಹಿಂಜರಿಯುತ್ತಿದೆ. ಆದರೆ ಅದು ನಡೆದ ವಿಚಾರ. ತಿಳಿಸದೇ ಇದ್ದರೂ ಸರಿಯಲ್ಲ.

ಆಚಾರ್ಯರಿಗೆ ಈಗ ಕೀರ್ತಿ, ಪ್ರತಿಷ್ಠೆ, ಹಣ ಇವುಗಳು ಹೆಚ್ಚಾಗಿ ಸೇರುತ್ತ ಬಂದಂತೆಲ್ಲಾ ಒಂದು ರೀತಿಯ ಚಾಪಲ್ಯ ಹೆಚ್ಚಾಯಿತು. ಅವರ ಗುರುಗಳು ಎಚ್ಚರಿಸಿದ್ದರು, "ನಿನಗೆ ಸಿದ್ಧಿಸಿದ ಈ ವಿದ್ಯೆಯನ್ನು ಸ್ವಾರ್ಥಕ್ಕಾಗಲಿ, ದ್ರವ್ಯಕ್ಕಾಗಲಿ ದುರುಪಯೋಗ ಪಡಿಸಿದಲ್ಲಿ ಅದರ ಮಹಿಮೆ ಹೊರಟು ಹೋಗುತ್ತದೆ" ಎಂಬುದಾಗಿ. ಆಚಾರ್ಯರು ಅದನ್ನು ಉಲ್ಲಂಘಿಸಿದರು. ಅವರ ವಾಕ್‌ಸಿದ್ಧಿಯೂ ದೂರವಾಗಲಾರಂಭಿಸಿತು. ಆಚಾರ್ಯರು ಕಡೆಗಾಲದಲ್ಲೂ ವಿಪರೀತ ಕಷ್ಟ ಅನುಭವಿಸಿದರಂತೆ. ಅವರಲ್ಲಿ ಒಂದು ರೀತಿಯ ಉನ್ಮಾದ ಮೂಡಿತಂತೆ! ಅವರ ಕಣ್ಣಿಗೆ ಏನೇನೋ ಕರಾಳ ರೂಪಗಳು ಕಾಣಿಸಿಕೊಂಡು ಹೆದರಿಸಲಾರಂಭಿಸಿದುವಂತೆ. ಅವರು ಭಯದಿಂದ ನಡುಗುತ್ತಾ ಬಾಧೆಯಿಂದ ತತ್ತರಿಸಿ ಕಡೆಗೂ ಕೊನೆಯುಸಿರೆಳೆದರಂತೆ. ಅವರು ಸಂಪಾದಿಸಿದ ಐಶ್ವರ್ಯವು ಯಾರಿಗೂ ದಕ್ಕಲಿಲ್ಲ! ಎನ್ನುತ್ತಾರೆ.

ಇದೆಲ್ಲಾ ಸುದರ್ಶನ ಉಪಾಸನೆಯ ಉತ್ಕರ್ಷ ಅಪಕರ್ಷ ವಿಚಾರಗಳು. ೭೦ ವರ್ಷಗಳ ಹಿಂದಿನ ಸತ್ಯವೃತ್ತಾಂತ ಬರೆದಿದ್ದೇನೆ. ನಂಬಿದರೆ ನಂಬಿ ಬಿಟ್ಟರೆ ಬಿಡಿ.

ಇನ್ನೊಂದು ವಿಚಾರ. ಸುದರ್ಶನ ಮಂತ್ರಗಳಲ್ಲೂ ಹಲವಾರು ವಿಧಗಳಿವೆ. ಮಂತ್ರ ಭಾಗ ಬೇರೆ, ತಂತ್ರ ಭಾಗ ಬೇರೆ. ಆಚಾರ್ಯರು ನಮ್ಮ ಮುತ್ತಾತನವರಿಗೂ ಒಂದು ಸುದರ್ಶನ ಮಂತ್ರ ಉಪದೇಶ ಮಾಡಿದ್ದರು. ನಮ್ಮ ಅಜ್ಜಿಯವರಿಗೂ ಮಂತ್ರೋಪದೇಶವಾಗಿದ್ದಿತು. ಮನೆಯಲ್ಲಿ ಸಂಸಾರ ತಾಪತ್ರಯ, ಅಶಾಂತಿ, ತೊಂದರೆ ಉಂಟಾದಲ್ಲಿ ಮಂಡಲಪರ್ಯಂತ ಆ ಮಂತ್ರದ ಜಪ ನೇಮ ನಡೆಸಿ ೪೮ನೇ ದಿನ ಮಂಗಳ ಆಚರಿಸಿ ಯಥಾ ಶಕ್ತಿ ದೇವರಿಗೆ ಭಕ್ಷ ಭೋಜ್ಯ ನೈವೇದ್ಯವನ್ನು ಅರ್ಪಿಸಿ ಪ್ರಾರ್ಥಿಸಿದಾಗ ಇಷ್ಟಾರ್ಥ ಸಿದ್ಧಿ ಆಗುತ್ತದೆ ಎಂದು ಹೇಳಿದ್ದರು. ಅದೇ ರೀತಿ ಹಲವು ಸಲ ನಮ್ಮ ಅಜ್ಜಿ, ನಮ್ಮ ತಾಯಿಯರು ವ್ರತ ಕೈಕೊಂಡಿದ್ದನ್ನೂ ನಾನೇ ಕಣ್ಣಾರೆ ಕಂಡಿದ್ದೇನೆ. ಈಗ ನಮ್ಮ ಅಜ್ಜಿಯವರೂ ಇಲ್ಲ. ನಮ್ಮ ತಾಯಿಯವರೂ ವೃದ್ಧರು. ಹೀಗಾಗಿ ಆ ವ್ರತ ಮಂತ್ರಗಳು ಗತ ಆಖ್ಯಾಯಿಕೆಗಳಾಗಿ ಉಳಿದಿವೆ.

ಆಚಾರ್ಯರು ಪೂಜಿಸುತ್ತಿದ್ದ ಆ ಗಂಡುಗೊಡಲಿ ಈಗಲೂ ನಮ್ಮ ಆತ್ಮೀಯರೊಬ್ಬರ ಮನೆಯ ಪೂಜಾ ಗೃಹದಲ್ಲಿ ಪೂಜೆಗೊಳ್ಳುತ್ತಿದೆ. ಅವರ ಹಿಂದಿನವರಿಗೆ ಆಚಾರ್ಯರು ಮಂತ್ರೋಪದೇಶ ಮಾಡಿ ಆ ಕೊಡಲಿಯನ್ನು ಅನುಗ್ರಹ ಮಾಡಿದ್ದರಂತೆ.

ಇದೆಲ್ಲಾ ಏನೇ ಇರಲಿ, ಆ ಸಿದ್ಧ ಪುರುಷರ ಕತೆ ಆಚಾರ್ಯರ ತಲೆಯೊಂದಿಗೇ ಮುಕ್ತಾಯಗೊಂಡಿತಲ್ಲ ಎನ್ನುವುದೇ ಮನಸ್ಸಿಗೆ ವ್ಯಾಕುಲ ವಾಗುವ ವಿಚಾರ! ●

## ಅತಿ ದೊಡ್ಡ ಪಿರಮಿಡ್

ಜಗತ್ತಿನಲ್ಲಿ ಅತಿ ದೊಡ್ಡ ಪಿರಮಿಡ್ ಎಲ್ಲಿದೆಯೆಂದರೆ ಇಜಿಪ್ಟಿನಲ್ಲಿ ಎಂದು ಯಾರಾದರೂ ಉತ್ತರಿಸಬಹುದು. ವಾಸ್ತವವಾಗಿ ಅತಿ ದೊಡ್ಡ ಪಿರಮಿಡ್ ಇರುವುದು ಮೆಕ್ಸಿಕೋದ ಕ್ವೆಜಲ್‌ಕೋಟಲ್‌ದಲ್ಲಿ. ಅದು ೪೫ ಎಕರೆಗಳಷ್ಟು ಜಾಗವನ್ನು ಆಕ್ರಮಿಸಿಕೊಂಡಿದೆ.

● ಧನಂಜಯ

## ಆಪ್ತಳಿಯುವ ಪುಟಗಳು

### ಗ್ರಾಮಗಳ ಅಂತಃಸತ್ವ

(ಗ್ರಾಮೋದಯ ತತ್ವಗಳು- ಅಧ್ಯಾಯ; ಲೇಖಕ-ನಾನಾಜಿ ದೇಶಮುಖ) ಪುಸ್ತಕದ ಹೆಸರು; ಭಾರತದಲ್ಲಿ ಸಮಾಜಕಾರ್ಯ ಹಿನ್ನೆಲೆ, ಮುನ್ನೋಟ, ಸಂಪಾದಕರು; ಎಸ್.ಆರ್. ರಾಮಸ್ವಾಮಿ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ಪುಟಗಳು; viii ೩೪೮ ಬೆಲೆ: ೫೫.೦೦ ಮೊದಲ ಮುದ್ರಣ ೧೯೯೨.)

**ಭಾ**ರತ ಹಳ್ಳಿಗಳ ದೇಶವೆಂದು ಹೇಳುತ್ತೇವೆ. ಅದರರ್ಥ ಶೇಕಡಾ ೭೫ರಷ್ಟು ಜನ ಹಳ್ಳಿಗಳಲ್ಲಿ ವಾಸಿಸುತ್ತಾರೆ ಎಂದಷ್ಟೇ ಅಲ್ಲ, ಇಂದಿಗೂ ಭಾರತೀಯ ಜೀವನ ಮೌಲ್ಯಗಳನ್ನು ಹಳ್ಳಿಗಳಲ್ಲಿ ಕಾಣಲಾಗುವುದು ಎಂದು ತಾತ್ಪರ್ಯ.

ಒಂದು ಉದ್ಬೋಧಕ ಪ್ರಸಂಗ ನೆನಪಾಗುತ್ತದೆ. ಉತ್ತರ ಪ್ರದೇಶದ ರೈಲು ನಿಲ್ದಾಣವೊಂದರಲ್ಲಿ ಸ್ವರ್ಗೀಯ ಪಂ.ದೀನದಯಾಳ ಉಪಾಧ್ಯಾಯರೊಡನೆ ಇಳಿದೆವು. ಅಲ್ಲಿಂದ ೧೪ ಮೈಲಿ ದೂರದ ಸ್ಥಳವೊಂದಕ್ಕೆ ನಡೆದುಹೋಗಬೇಕಾಗಿತ್ತು. ಸಮಯ ರಾತ್ರಿ ೯ ಗಂಟೆಯಾಗಿತ್ತು.

ನಡೆಯುತ್ತ ನಡೆಯುತ್ತ ಮಧ್ಯರಾತ್ರಿಯಾಯಿತು. ನಾವೆಲ್ಲಾ ಬಾಯಾರಿದ್ದೆವು. ನಮ್ಮ ತಂಡದ ನಾಯಕರು ರಾಮಪ್ರಕಾಶ ಪಾಂಡೆ. ಪಂಡಿತರು ಕೇಳಿದರು: "ಏನು ರಾಮಪ್ರಕಾಶರೇ, ಬಾಯಾರಿಕೆಯಾಗುತ್ತಿದೆ, ಇಲ್ಲೆಲ್ಲಾದರೂ ಕುಡಿಯಲು ನೀರು ಸಿಕ್ಕೀತೆ?"

ಅಷ್ಟು ಹೊತ್ತಿಗೆ ಹಳ್ಳಿಯೊಂದು ಕಾಣಿಸಿತು. ಅಲ್ಲೊಂದು ಬಾವಿಯೂ ಕಾಣಿಸಿತು. ಬಾವಿಯ ಹತ್ತಿರವೇ ಯಾರೋ ಒಬ್ಬಾತ ಚಾರ್ಪಾಯಿಯ ಮೇಲೆ ಮಲಗಿದ್ದ. ಪಕ್ಕದಲ್ಲಿ ನೆಲದ ಮೇಲೆ ಏನೂ ಹಾಸಿಕೊಳ್ಳದೆಯೇ ಒಬ್ಬ ಹೆಂಗಸು ಮಲಗಿದ್ದಳು. ಚಾರ್ಪಾಯಿಯ ಮೇಲೆ ಮಲಗಿದ್ದ ವ್ಯಕ್ತಿಯನ್ನು ರಾಮ ಪ್ರಕಾಶರು ಎಬ್ಬಿಸಿ, ನೀರು ಸೇದಲು ಬಿಂದಿಗೆ ಮತ್ತು ಹಗ್ಗ ಕೋರಿದರು. ಆತ ತಟ್ಟನೇ ಎದ್ದು 'ಈಗಲೇ ತರುತ್ತೇನೆ,' ಎಂದು ಹೇಳಿ ಪಕ್ಕದ ಗುಡಿಸಲಿಗೆ ಹೋದ. ಆ ವೇಳೆಗೆ ಮಲಗಿದ್ದಾಕೆಯೂ ಎದ್ದಳು.

ದೀನದಯಾಳರು ಮೊದಲು ನೀರು ಕುಡಿಯಲಿ ಎಂದು ನಮ್ಮ ಇಚ್ಛೆ ಇತ್ತು. ಅವರು ಮುಂದೆ ಸರಿದು ನೀರು ಕುಡಿಯಲು ಕೈಯನ್ನು ಬೊಗಸೆಮಾಡಿ ಕುಳಿತರು. ಅಷ್ಟು ಹೊತ್ತಿಗೆ ಮಹಿಳೆ ಒಳಗಿನಿಂದ ಕಟೋರಿಯೊಂದನ್ನು ತಂದು ನೀಡಿದಳು. ಅದರೊಳಗೆ ಕೆಲವು ಬೆಲ್ಲದ ತುಣುಕುಗಳಿದ್ದವು. ಆಕೆ ಪಂಡಿತಜಿಯನ್ನು ತಡೆದು ಹೇಳಿದಳು:

"ಬಾಬೂಜಿ, ಬರೀ ಹೊಟ್ಟೆಯಲ್ಲಿ ನೀರನ್ನು ಕುಡಿಯಬೇಡಿ. ನೀವೆಲ್ಲ ಆಯಾಸಗೊಂಡು ನಮ್ಮ ಮನೆಯ ಬಾಗಿಲಿಗೆ ಬಂದಿದ್ದೀರಿ. ಈ ಬೆಲ್ಲದ ಚೂರನ್ನಾದರೂ ತಿಂದು ನೀರು ಕುಡಿಯಿರಿ."

ಆಕೆಯ ಮಾತನ್ನು ಕೇಳಿ ಪಂಡಿತರ ಕಣ್ಣಲ್ಲಿ ನೀರು ಬಂದಿತು. ಹೋಗುವ ಮೊದಲು ಅವರು ಆ ಮಹಿಳೆಯ ಕೈಯಲ್ಲಿಡಲು ೫ ರೂಪಾಯಿಯ ನೋಟನ್ನು ಚಾಚಿದರು. ಆಗ ಆ ಅನಕ್ಷರಸ್ಥ ಮಹಿಳೆ ಹೇಳಿದಳು, "ಬಾಬೂಜಿ ಹೀಗೆ ಮಾಡಬೇಡಿ. ನೀವು ಪ್ರಯಾಣಿಕರು. ನಮ್ಮ ಭಾಗ್ಯವಶದಿಂದ ನಮ್ಮ ಮನೆಗೆ ಬಂದಿರಿ...." ಒತ್ತಾಯ ಮಾಡಿದರೂ ಆಕೆ ಹಣವನ್ನು ಸ್ವೀಕರಿಸಲಿಲ್ಲ.

ಈ ಘಟನೆ ನಡೆದದ್ದು ೧೯೫೫ರಲ್ಲಿ.

ನಂತರ ಕೆಲವು ಹೆಜ್ಜೆ ನಡೆದ ಮೇಲೆ ದಯಾಳ್‌ಜೀ ಹೇಳಿದರು: "ಹಳ್ಳಿಯ ಜನರು ಅನಕ್ಷರಸ್ಥರೂ ಬಡವರೂ ಆಗಿದ್ದರೂ ಅವರಲ್ಲಿ ಅದೆಷ್ಟು ಸಂವೇದನಶೀಲತೆ, ಔದಾರ್ಯ ತುಂಬಿದೆ..... ಆದರೆ ಪಟ್ಟಣವಾಸಿಗಳಲ್ಲಿ, ಓದಿದವರೆನಿಸಿಕೊಂಡವರಲ್ಲಿ ಈ ಮೌಲ್ಯಗಳು ಕಾಣೆಯಾಗಿವೆ. ಸಾಮಾಜಿಕ ಜೀವನದ ಆಧಾರಸ್ವರೂಪಗ

ಲಾದ ಮೌಲ್ಯಗಳು ನಷ್ಟವಾಗುತ್ತವೆ. ಹಳ್ಳಿಗಳಲ್ಲಿ ಈಗಲೂ ಕಾಣಲಾಗುವ ಇಂತಹ ಉದಾತ್ತ ಆಚರಣೆಗಳಲ್ಲಿ ತಿಳಿಅರಿವು ಪಟ್ಟಣಗಳನ್ನು ಆವರಿಸಿದಾಗ ಭಾರತ ನಿಜವಾದ ಭಾರತವಾದೀತು."

ಸಂಗ್ರಹ: **ವೀರಣ್ಣ ಕಮ್ಮಾರ್**

## ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್

> ಪುಸ್ತಕದ ಹೆಸರು: ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್, ಲೇಖಕರು: ಶ್ರೀ ಕೆ.ಪಿ. ಪೂರ್ಣಚಂದ್ರತೇಜಸ್ವಿ ಪ್ರಕಾಶಕರು: ಪುಸ್ತಕ ಪ್ರಕಾಶನ ಮೈಸೂರು.

ನಾವು ಮತ್ತೆ ಬಸ್ ಹತ್ತಿದಾಗ ಬಸ್ಸೊಳಗೆ ಒಂದು ಅನವಶ್ಯಕ ಜಗಳ ಆರಂಭವಾಯ್ತು. ಜಗಳದ ದೆಸೆಯಿಂದ ಮುಂದಿನ ಕಾಡುದಾರಿಯಲ್ಲಿ ಅಕ್ಕಪಕ್ಕ ಏನಿತ್ತೆಂದು ಗಮನಿಸಲು ಸಾಧ್ಯವಾಗಲಿಲ್ಲ.

ಜಗಳಕ್ಕೆ ಕಾರಣ ಇಷ್ಟೇ: ನಾನು ಟೀ ಕುಡಿದು ಬಸ್ಸಿನೊಳಗೆ ಹತ್ತಿದಾಗ ನನ್ನ ಸೀಟಿನಲ್ಲಿ ಯಾರೋ ಒಂದು ಚರ್ಮದ ಫೈಲನ್ನು ಇಟ್ಟಿದ್ದರು. ನಾನು ಅದನ್ನು ತೆಗೆದು ಖಾಲಿಯಿದ್ದ ಪಕ್ಕದ ಸೀಟಿನ ಮೇಲೆ ಇಟ್ಟೆ. ನನ್ನ ಪಕ್ಕ ರಾಜೇಶ್ವರಿ ಕುಳಿತುಕೊಳ್ಳುತ್ತಿರುವಾಗ ಬಸ್ ಹತ್ತಿದ ಯಾವನೋ ಒಬ್ಬ ನನ್ನ ಬಳಿ ಬಂದು, ನನ್ನ ಸೀಟು ತೋರಿಸುತ್ತಾ, ಇದು ನನ್ನ ಜಾಗ ಎಂದು ಅಬ್ಬರಿಸಿ ಕೂಗಿದ.

ನನಗೂ ಇದು ನಾನು ಕುಳಿತಿದ್ದ ಜಾಗ ಅಲ್ಲವೇನೋ ಎಂದು ಅನುಮಾನ ಬಂದು ರಾಜೇಶ್ವರಿಗೂ ಏಳಲು ಹೇಳಿ ನಾನೂ ಎದ್ದೆ. ಬಸ್ಸಿನಲ್ಲಿ ಖಾಲಿ ಜಾಗಗಳಿಗೇನೂ ಕೊರತೆಯಿರಲಿಲ್ಲ. ನನ್ನ ಮುಂದಿನ ಸೀಟಿನಲ್ಲಿದ್ದ ಪ್ರಶಾಂತ ಮತ್ತು ಮಲ್ಲಿಕ್ ಆತನ ಮಾತು ಕೇಳಿಸಿಕೊಂಡವರೇ ಹಿಂದಕ್ಕೆ ತಿರುಗಿದರು. ಏಳುತ್ತಿದ್ದ ನನ್ನನ್ನು ನೋಡಿ, "ನೀವು ಕೂತ್ಕೊಳ್ಳಿ, ಅದು ಹೇಗೆ ಅವನ ಜಾಗ? ಕೇಳ್ತೀನಿ. ನೀವು ನಮ್ಮ ಸೀಟಿನ ಹಿಂದೆ ಕುಳಿತಿದ್ದಲ್ಲವೆ?" ಎಂದು ನನ್ನನ್ನು ಅದುಮಿ ಕುಳ್ಳಿರಿಸಿ ನನ್ನ ಪರವಾಗಿ ಅವನ ಹತ್ತಿರ ಜಗಳ ತೆಗೆದರು.

"ಅದು ಹೇಗಯ್ಯಾ ನಿನ್ನ ಜಾಗ?" ಎಂದರು ಮಲ್ಲಿಕ್.

"ನನ್ನ ಫೈಲ್ ಇಲ್ಲಿ ಇಟ್ಟಿರಲಿಲ್ಲವೆ?"

"ನಿನ್ನನ್ನು ಯಾರು ಇಲ್ಲಿ ಫೈಲ್ ಇಡಲು ಹೇಳಿದರು?"

"ಆ ಜಾಗ ಕಾದಿರಿಸಲು ಫೈಲ್ ನಾನೇ ಇಟ್ಟೆ."

"ನಾವು ಪೋರ್ಟ್ ಬ್ಲೇರ್‌ನಿಂದ ಇಲ್ಲಿ ಕುಳಿತುಕೊಂಡು ಬಂದಿದ್ದು ನೀನು ನೋಡಲಿಲ್ಲವೆ?"

"ಅವರು ಇಳಿದು ಹೋಗಲಿಲ್ಲವೆ?"

"ನೀನು ಇಳಿಯಲಿಲ್ಲವೆ?"

"ಅವರೂ ನನ್ನ ಹಾಗೇ ತಮ್ಮ ಜಾಗದಲ್ಲಿ ಏನಾದರೂ ಇಟ್ಟು ಹೋಗಬೇಕಿತ್ತು."

"ಅವರ ಹತ್ತಿರ ಇಟ್ಟುಹೋಗಲು ಏನೂ ಇಲ್ವಲ್ಲ?"

"ಬೇರೊಬ್ಬರ ವಸ್ತುವನ್ನು ಮುಟ್ಟಲು ಇವರಿಗೇನು ಅಧಿಕಾರ?"

"ಬೇರೊಬ್ಬರ ಸೀಟಿನಲ್ಲಿ ಫೈಲ್ ಇಡಲು ನಿಮಗೇನು ಅಧಿಕಾರ?" ಮಲ್ಲಿಕ್ ಹಾಗೂ ಆ ಫೈಲಿನ ಯಜಮಾನನ ಜಗಳ ನೋಡಿ ಇಂಗ್ಲೀಷಿನಲ್ಲಿ ಜಗಳವಾಡುವುದು ಎಷ್ಟೊಂದು ಕಷ್ಟ ಎಂಬುದು ನನ್ನ ಅರಿವಿಗೆ ಬಂದಿತು. ಇಬ್ಬರ ಜಗಳವೂ ಅವರ ಕೋಪಾವೇಶದ ಅಭಿವ್ಯಕ್ತಿಯಂತೆ ಕಾಣದೆ ಯಾವುದೋ ಸರ್ಕಾರೀ ವ್ಯವಹಾರದಂತೆ ಕಾಣುತ್ತಿತ್ತು. ಅದೇ ತಮ್ಮ ಮಾತೃಭಾಷೆಯಲ್ಲಿ ಜಗಳ ಆಡಿದ್ದರೆ ಇಬ್ಬರೂ ಮರ್ಮಕ್ಕೆ ತಾಗುವಂತೆ ವಾಗ್ಬಾಣಗಳನ್ನು ಬಿಟ್ಟು ಈ ವೇಳೆಗೆ ಸಲೀಸಾಗಿ ಕೈ ಕೈ ಮಿಲಾಯಿಸುವ ಹಂತಕ್ಕೆ ಜಗಳ ಹೋಗುತ್ತಿತ್ತು. ಈಗಲಾದರೋ ಇಬ್ಬರೂ ಇಂಗ್ಲೀಷ್ ಗ್ರಾಮರನ್ನು ಮರೆಯದೆ ವಾಕ್ಯ ರಚನೆಯ ಕಡೆಗೆಲ್ಲಾ ಗಮನವಿಟ್ಟು ಜಗಳವಾಡಬೇಕಿತ್ತು. ಮಾತೃಭಾಷೆ ಎಷ್ಟೊಂದು ಆಪ್ತ ಮತ್ತು ಆತ್ಮೀಯ ಎಂದು ನಾನು ಯೋಚಿಸಿದೆ. ನಮ್ಮ ಆಲೋಚನೆಗೂ ಅಭಿವ್ಯಕ್ತಿಗೂ ಮಧ್ಯೆ ಕಂದರವೇ ಇರುವುದಿಲ್ಲ.

ಸಂಗ್ರಹ: **ಪಿ.ಎಲ್. ಪ್ರಕಾಶ್**

"ಏನಪ್ಪಾ ಮರಿ ಮರಿ ಮರಿಮೊಮ್ಮಗನೆ ಸೌಖ್ಯವಾಗಿದ್ದೀಯಾ?"

" ?!.... ನೀವು ಯಾರು ಅಂತ ತಿಳೀಲಿಲ್ಲ. ಮೇಲಾಗಿ ಅಪರಿಚಿತರಾದ ನೀವು ನನ್ನನ್ನು ಮರಿ ಮರಿ ಮರಿ ಮೊಮ್ಮಗನೆ ಎಂದು ಸಂಬೋಧಿಸುತ್ತಿದ್ದೀರಿ? ಇದು ನನಗೆ ಬಹಳ ವಿಚಿತ್ರವೆನ್ನಿಸುತ್ತಿದೆ."

"ಇದರಲ್ಲಿ ವಿಚಿತ್ರವೇನಿದೆ? ನಾನು ನಿನ್ನ ಹಿರಿ ಹಿರಿ ಹಿರಿಯಜ್ಜನಾಗಿರುವುದರಿಂದಲೇ ಹಾಗೆ ಸಂಬೋಧಿಸಿದೆ. ಅದರಲ್ಲಿ ತಪ್ಪೇನಿದೆ?"

"ತಪ್ಪಿನ ಪ್ರಶ್ನೆಯಲ್ಲ ಯಜಮಾನ್ರೆ, ನೀವು ನೋಡಿದರೆ ಇಷ್ಟೇ ಎತ್ತರ ಇದ್ದೀರ. ನಾನು ನೋಡಿದರೆ ಇಷ್ಟೆತ್ತರ ಇದ್ದೇನೆ. ಮೇಲಾಗಿ ನಮ್ಮ ಪೂರ್ವಿಕರೆಲ್ಲ ಬಹಳ ಎತ್ತರವಾದವರೂ ದಷ್ಟಪುಷ್ಟರೂ ಆಗಿದ್ದರೆಂದು ಕೇಳಿದ್ದೇನೆ. ಹೀಗಿರುವಾಗ ನೀವು ಅದ್ಹೇಗೆ ನನ್ನ ಹಿರಿ ಹಿರಿ ಹಿರಿಯಜ್ಜ ಆಗಲು ಸಾಧ್ಯ ಎಂಬುದು ನನ್ನ ಅನುಮಾನ."

"ಓಹೋ! ನಿನ್ನ ಎತ್ತರವಾದ ನಿಲುವು ನಾನು ನಿನ್ನ ಹಿರಿಯಜ್ಜ ಅಲ್ಲ ಎಂದು ಹೇಳುವಂತೆ ಮಾಡಿದೆ ಅನ್ನು. ಹಾಗಾದರೆ ನನ್ನ ಅಜ್ಜನನ್ನು ಅಂದ್ರೆ ನಿನ್ನ ಗಿರಿಗಿರಿಯಜ್ಜನನ್ನ ಕರಿತೇನೆ ತಾಳು. ಆಗ ನಿನಗೇ ಗೊತ್ತಾಗುತ್ತೆ, ನಾನೇ ನಿನ್ನ ಮರಿಯಜ್ಜ ಎಂದು."

"ಓಹೋಹೋ! ಇವರು ನಿಜವಾಗಲೂ ನನ್ನ ಗಿರಿಯಜ್ಜನೇ. ಯಾಕೆಂದರೆ ಇವರು ಎತ್ತರ, ಆಜಾನುಬಾಹು ವ್ಯಕ್ತಿತ್ವ, ಆ ಧೀರ ನಿಲುವು, ಇವರು ಪರ್ವತವನ್ನೇ ಕುಟ್ಟಿ ಪುಡಿ ಮಾಡಬಲ್ಲಂತಹ ಶಕ್ತಿ ಹೊಂದಿದ್ದಾರೆಂಬುದನ್ನು ಮೇಲ್ನೋಟಕ್ಕೇ ತೋರು



# ಮಾನವ ವಾಮನನಾಗುತ್ತಿದ್ದಾನೆಯೆ?

ತ್ತವೆ. ನಾನಿವರನ್ನು ನನ್ನ ಗಿರಿಯಜ್ಜ ಎಂದು ಒಪ್ಪಿಕೊಳ್ಳಬಲ್ಲೆ. ಆದರೆ...''

''ಆದರೆ.... ಅಂತ ರಾಗ ಯಾಕಯ್ಯಾ ಎಳಿತೀಯಾ?''

''ಅಲ್ಲ ಅಜ್ಜ, ಇವರು ನಿನ್ನ ಅಜ್ಜ ಎನ್ನುತ್ತೀ. ಆದ್ರೆ ನೀನ್ಯಾಕೆ ಇಷ್ಟೊಂದು ಕುಳ್ಳನಾಗಿದ್ದೀ? ಬೆಳವಣಿಗೆ ತಡೆಯಲು ಬೆಂಗಳೂರು ಬಸವನಗುಡಿಯ ಬಸವಣ್ಣನ ತಲೆಯಮೇಲೆ ಹಾರೆ ಹೊಡೆದಂತೆ ನಿಮ್ಮ ತಲೆ ಯಾರಾದ್ರೂ ಮೊಟಕಿದರೇನು ಮತ್ತೆ?''

''ಹಾಗಲ್ಲ ಕಣ್‌ಮಗ, ನಾನೂ ನನ್ನಜ್ಜ ಇದ್ದಂಗೇ ಇರಬಹುದಾಗಿತ್ತು. ಆದ್ರೆ....''

''ಆದ್ರೆ.... ಅಂತ ರಾಗ ಎಳದ್ರೆ ನನಗೆ ನೀವ್ಯಾಕೆ ಗಿಡ್ಡರಾದ್ರಿ ಎಂಬ ವಿಷಯ ಗೊತ್ತಾಗಬೇಕಾದ್ರೂ ಹ್ಯಾಗೆ?''

''ಸರಿಯಪ್ಪ, ನೀನಿಷ್ಟು ಕೇಳ್ತಿ ಅಂದಮೇಲೆ ಖಂಡಿತವಾಗ್ಲೂ ಹೇಳ್ತೀನಿ. ಅದೂ ವಿಜ್ಞಾನಿಗಳು, ಮಾನವಶಾಸ್ತ್ರಜ್ಞರು ನಿರಂತರ ಸಂಶೋಧನೆ ನಡೆಸಿ ತೆರೆದಿಟ್ಟ ವಿಷಯವನ್ನು ಗಮನವಿಟ್ಟು ಕೇಳು.

''ನೀನೀಗ ನಿನ್ನ ಸುತ್ತಲೂ ನೋಡುವಾಗ ಮನುಷ್ಯರೆಲ್ಲ ಹೆಚ್ಚು ಎತ್ತರವಾಗಿರುವಂತೆ ಭಾಸವಾಗುತ್ತದಲ್ಲವೆ? ಅದು ಸಹಜ. ಯಾಕೆಂದರೆ ಕಳೆದ ೫೦ ವರ್ಷಗಳಲ್ಲಿ ಹಾಲೆಂಡ್ ದೇಶವೊಂದರಲ್ಲೇ ಮನುಷ್ಯನ ಸರಾಸರಿ ಎತ್ತರ ೧೦ ಸೆಂ. ಮೀ.ಗಳಷ್ಟು ಹೆಚ್ಚಾಗಿದೆ. ಇನ್ನು ಭಾರತದಲ್ಲಿರುವ ಮನುಷ್ಯರ ಎತ್ತರ ಗಣನೀಯವಾಗಿ ಏರಿದೆ ಎಂಬುದು ಮೇಲ್ನೋಟಕ್ಕೇ ಕಂಡು ಬರುತ್ತದೆ.

''ಆದರೆ, ನನ್ನ ನಿನ್ನ ಪೂರ್ವಜರ, ಅಂದರೆ, ಮಾನವನ ಉಗಮವಾದಂದಿನಿಂದ ಇಂದಿನವರೆಗೆ ಮನುಷ್ಯರನ್ನು ಕುರಿತು ಅಭ್ಯಸಿಸುತ್ತಿರುವ ವಿಜ್ಞಾನಿಗಳು ಹೇಳುವ ಕಥೆಯೇ ಬೇರೆಯಾಗಿದೆ. ಅವರ ಅಭಿಪ್ರಾಯದಂತೆ ೨೦೦,೦೦೦ ವರ್ಷಗಳ ಇತಿಹಾಸ ಹೊಂದಿರುವ ನೀನು, ನನ್ನ ಹಿರಿ-ಗಿರಿಯಜ್ಜರಿಗಿಂತ ಕುಳ್ಳನೂ, ಕೃಶಕಾಯನೂ ಮತ್ತು ದುರ್ಬಲನೂ ಆಗಿದ್ದೀಯೆ. ಇಷ್ಟೇ ಆಗಿದ್ದರೆ ಸರಿ ಎನ್ನಬಹುದಿತ್ತು. ನಿನ್ನ ಮಿದುಳಿನ ಗಾತ್ರವೂ ಚಿಕ್ಕದಾಗಿದೆ ಎನ್ನುತ್ತಾರೆ ವಿಜ್ಞಾನಿಗಳು.

''ಇನ್ನು ಮಾನವಶಾಸ್ತ್ರಜ್ಞರು ಹೇಳುವ ಪ್ರಕಾರ ಮನುಷ್ಯ ಕುಳ್ಳನಾಗುವ ಪ್ರಕ್ರಿಯೆ ೨೦೦,೦೦೦ ವರ್ಷಗಳ ಹಿಂದೆ ಆರಂಭಗೊಂಡು ಇಂದಿಗೂ ಮುಂದುವರಿಯುತ್ತಿದೆ. ಅವರ ಪ್ರಕಾರ ಹಿಮಯುಗದಲ್ಲಿ, ಅಂದರೆ ೧೦,೦೦೦ ವರ್ಷಗಳ ಹಿಂದೆ ಈ ಪ್ರಕ್ರಿಯೆ ತೀವ್ರವಾಯಿತು. ಆದರೆ ಕೆಲ ಸಾವಿರ ವರ್ಷಗಳ ಹಿಂದೆ ಈ ಪ್ರಕ್ರಿಯೆಯ ವೇಗ ಸ್ವಲ್ಪ ಕುಂಠಿತಗೊಂಡಿತು.

''ಈಗ ನೀನು ನೋಡುತ್ತಿರುವದು ಅದಕ್ಕೆ ವಿರುದ್ಧವಾದ ಪರಿಸ್ಥಿತಿಯನ್ನು. ಅಂದರೆ ಯಾವುದೋ ಒಂದು ಕಾಲಘಟ್ಟದಲ್ಲಿ ಕುಳ್ಳಗಾಗುವ ಪ್ರಕ್ರಿಯೆಯಲ್ಲಿ ಶಾರ್ಟ್‌ಸರ್ಕ್ಯೂಟ್ ಸಂಭವಿಸಿದೆ. ಅದರಿಂದಾಗಿ ಕುಳ್ಳಗಾಗುವ ಪ್ರಕ್ರಿಯೆ ನಿಂತಿದೆ. ಆದರೂ ಈ ಶಾರ್ಟ್ ಸರ್ಕ್ಯೂಟ್ ಸಂಭವಿಸಿದ್ದು ಪೋಷಕಾಂಶಗಳ ಸೇವನೆಯಿಂದ ಆಗಿರಬೇಕೇ ಹೊರತು ವಂಶವಾಹಿಗಳಿಂದಲ್ಲ ಎನ್ನುವ ಅಭಿಪ್ರಾಯವೂ ಕೇಳಿ ಬರುತ್ತಿದೆ.

**• ಇಂದ್ರದೇವ್ ಪಂತ್**

ಇಷ್ಟಾದರೂ ಜೀವಶಾಸ್ತ್ರಜ್ಞರು ಹೇಳುವುದೇನು ಗೊತ್ತೆ? ಈ ಕುಬ್ಜಗೊಳ್ಳುವ ಪ್ರಕ್ರಿಯೆ ನಿರಂತರವಾಗಿ ಮುಂದುವರಿಯುವ ಸಾಧ್ಯತೆಗಳಿವೆ. ಹಾಗಾದಾಗ ಕೆಲ ಪೀಳಿಗೆಯ ನಂತರ ಇದರ ತೀವ್ರತೆ ಮತ್ತಷ್ಟು ಹೆಚ್ಚಬಹುದು ಎಂಬ ಅನುಮಾನ ಅವರದಾಗಿದೆ.

''ಇನ್ನು ಮನುಷ್ಯ ತನ್ನ ಸದೃಢತೆಯನ್ನು ಕಳೆದುಕೊಳ್ಳತೊಡಗಿದ್ದು ೧೦,೦೦೦ ದಿಂದ ೫,೦೦೦ ವರ್ಷಗಳ ಹಿಂದೆ. ನಂತರ ಅದೂ ನಿಂತಿತು. ಇದೇ ಸಂದರ್ಭದಲ್ಲಿ ಮಾನವನ ಮಿದುಳಿನ ಗಾತ್ರ ೧,೫೦೦ ರಿಂದ ೧,೩೦೦ ಘನ ಸೆಂ.ಮೀ.ಗಳಷ್ಟು ಕಡಿಮೆಯಾದದ್ದು ತಿಳಿದುಬಂದಿದೆ. ಈ ೫,೦೦೦ ವರ್ಷಗಳಲ್ಲಿ ಮಾನವನ ವಿವಿಧ ಲಕ್ಷಣಗಳು ವಿವಿಧ ವೇಗದಲ್ಲಿ ಸಂಕುಚಿತಗೊಳ್ಳತೊಡಗಿದವು ಎನ್ನುತ್ತಾರೆ ಮಾನವಶಾಸ್ತ್ರಜ್ಞರು.

''ಆಸ್ಟ್ರೇಲಿಯಾದ ನ್ಯೂ ಇಂಗ್ಲೆಂಡ್ ವಿಶ್ವವಿದ್ಯಾಲಯದ ಪೀಟರ್ ಬ್ರೌನ್ ಮಾನವನ ಸಂಕುಚನ

## ಒಂದಷ್ಟು ಪುರಾವೆ

ಈಗಿರುವ ಮಾನವ ತನ್ನ ಪೂರ್ವಿಕರಿಗಿಂತ ಕುಳ್ಳನೆನ್ನುವುದನ್ನು ವಿಜ್ಞಾನಿಗಳು ಉತ್ಖನನ, ಅಧ್ಯಯನಗಳ ಮೂಲಕ ಹೊರಗೆಡವಿದ್ದಾರೆ. ಇಂಥ ಉತ್ಖನನದ ಸಮಯದಲ್ಲಿ ದೊರೆತ ಮಾನವ ತಲೆಬುರುಡೆಯೊಂದರ ಕುರಿತ ವರದಿ ೧-೧೨-೧೯೩೪ರ 'ಸಂಯುಕ್ತ ಕರ್ನಾಟಕ'ದಲ್ಲಿ ಪ್ರಕಟವಾಗಿದೆ. ಅದನ್ನಿಲ್ಲಿ ಯಥಾವತ್ತಾಗಿ ನೀಡುತ್ತಿದ್ದೇವೆ.

**ಏಳು ಫೂಟಿನ ತಲೆಬುರುಡಿ ಸಾವಿರಾರು ವರ್ಷಗಳ ಹಿಂದಿನದು**

ನಾರ್ಥ ಡರ್ಬಿಶಾಯರದ ಈಯಾಮ ಎಂಬಲ್ಲಿ ಇತಿಹಾಸದ ಪೂರ್ವ ಕಾಲೀನ ಮನುಷ್ಯನ ಏಳು ಫೂಟಿನ ತಲೆಬುರುಡಿಯೊಂದು ಸಿಕ್ಕಿದೆ. ಅದು ಸುಣ್ಣದ ಕಲ್ಲಿನ ಖಣಿಯಲ್ಲಿ ಇತ್ತು. ತಲೆಬುರುಡಿಯು ಅತಿ ಫೊಳ್ಳಿದ್ದು ಕೆಳಗಿನ ದವಡೆಯ ಎರಡು ಹಲ್ಲುಗಳ ಹೊರ್ತು ಎಲ್ಲ ಹಲ್ಲುಗಳು ಇವೆ.

ಮನುಷ್ಯ ಕುಗ್ಗುತ್ತಿರುವುದರ ಬಗೆಗಿನ ವರದಿಯೊಂದು ೩೦-೧-೧೯೫೫ರ 'ಸಂಯುಕ್ತ ಕರ್ನಾಟಕ'ದಲ್ಲಿ ಪ್ರಕಟವಾಗಿದೆ. ಅದರ ಆಯ್ದ ಭಾಗ ಇಂತಿದೆ.

ಲಂಡನ್ ೨೮: ಪ್ರತಿಯೊಬ್ಬ ಪ್ರೌಢನೂ ಪ್ರತಿ ೨೦ ವರ್ಷಗಳಿಗೆ ಅರ್ಧ ಇಂಚಿನಂತೆ ಕುಗ್ಗುತ್ತ ಹೋಗುತ್ತಾನೆಂದು 'ಫೆಮಿಲಿ ಡಾಕ್ಟರ್' (ಕುಟುಂಬದ ವೈದ್ಯ ಎಂಬ ವೈದ್ಯಕೀಯ ವಾರಪತ್ರಿಕೆಯು ಬರೆದಿದೆ.

ಭಾರತೀಯ ಧಾರ್ಮಿಕ ಗ್ರಂಥಗಳಲ್ಲೊಂದಾದ ಭಾಗವತದಲ್ಲಿ ಮಾನವನ ಆಕೃತಿಯ ಕುರಿತಂತೆ ಮಾಹಿತಿಯೊಂದಿದೆ. ಅದರ ಪ್ರಕಾರ ಕೃತಯುಗದಲ್ಲಿ ಮನುಷ್ಯ ೨೮ ಮೊಳ ಉದ್ದ ಇದ್ದನಂತೆ. ತ್ರೇತಾಯುಗದಲ್ಲಿ ಅವನ ಎತ್ತರ ೧೪ ಮೊಳಕ್ಕೆ ಇಳಿಯಿತಂತೆ. ನಂತರ ದ್ವಾಪರಯುಗದಲ್ಲಿ ಏಳು ಮೊಳದಷ್ಟಾದ ಮಾನವ ಕಲಿಯುಗದಲ್ಲಿ ಮೂರೂವರೆ ಮೊಳಕ್ಕೆ ಇಳಿದಿದ್ದಾನೆ ಎನ್ನುತ್ತದೆ ಈ ಐತಿಹ್ಯ.

---

ಕ್ರಿಯೆ ಸಂದರ್ಭದಲ್ಲಿ ದೇಹದ ಆಕಾರ ಶೇ.೭ರಷ್ಟು, ಮುಖದ ಆಳತೆ ಶೇ.೬ ರಿಂದ ೧೨ರಷ್ಟು, ಮಿದುಳು ಶೇ.೯.೫ರಷ್ಟು ಮತ್ತು ಹಲ್ಲುಗಳು ಶೇ.೪.೫ರಷ್ಟು ಸಂಕುಚಿತಗೊಂಡಿವೆ ಎಂದು ಹೇಳಿದ್ದಾರೆ.

"ಆದರೂ ಮಾನವನ ಮಿದುಳು ಸಂಕುಚನಗೊಳ್ಳತೊಡಗಿದ್ದು ೧೦,೦೦೦ ವರ್ಷಗಳ ಹಿಂದೋ ಅಥವಾ ೩೦,೦೦೦ ವರ್ಷಗಳ ಹಿಂದೋ ಎಂಬ ಬಗ್ಗೆ ಪರಿಣಿತರಲ್ಲೇ ಭಿನ್ನಾಭಿಪ್ರಾಯವಿದೆ. ಇಷ್ಟೆಲ್ಲ ವಿವರಗಳು ತಿಳಿದುಬಂದದ್ದೇ ಕಳೆದ ಶತಮಾನದಲ್ಲಿ, ಅಂದರೆ ಪೋಷಕಾಂಶಗಳ ಸೇವನೆಯ ಪರಿಣಾಮಗಳು ಹೊರಬಿದ್ದಾಗ. ಆದರೆ ಈ ವಿಷಯವನ್ನು ಎಲ್ಲರೂ ಸಲೀಸಾಗಿ ಒಪ್ಪಿಕೊಳ್ಳುತ್ತಿಲ್ಲ.

"ಹೀಗೆ ಈ ವಿಷಯವನ್ನು ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ತಿಳಿದಿಲ್ಲವಾದರೂ ಈ ಕುರಿತಂತೆ ಎರಡು ಪ್ರತ್ಯೇಕ ಸಿದ್ಧಾಂತಗಳು ಮಂಡಿಸಲ್ಪಟ್ಟಿವೆ.

"ಇದರಲ್ಲಿ ಮೊದಲ ಸಿದ್ಧಾಂತ ನನ್ನಿಂದ ಆರಂಭವಾಗುತ್ತದೆ. ಕೃಷಿಯುಗ ೧೦,೦೦೦ ವರ್ಷಗಳ ಹಿಂದೆ ಆರಂಭವಾಯಿತು ಎಂಬ ವಿಷಯ ನಿನಗೆ ತಿಳಿದಿರಬೇಕಲ್ಲವೆ? ಆಗ ಉಂಟಾದ ಪೋಷಕಾಂಶಗಳ ಒತ್ತಡದ ಪರಿಣಾಮವಾಗಿ ನನ್ನ, ನನ್ನ ಸಮಕಾಲೀನರೆಲ್ಲ ಇದ್ದಕ್ಕಿದ್ದಂತೆ ಸಂಕುಚಿತಗೊಳ್ಳತೊಡಗಿದೆವು. ಕೃಷಿ ಅಭಿವೃದ್ಧಿಗೊಳ್ಳುವ ಮುನ್ನ ಭೂಮಿಯನ್ನು ಕೃಷಿಗೆ, ಪ್ರಾಣಿಗಳನ್ನು ಮಾನವರ ಉಪಯೋಗಕ್ಕೆ ಪಳಗಿಸುವ ರೂಢಿ ಇರಲಿಲ್ಲ. ಆಗ ನಾವೆಲ್ಲ ಬೇಟೆಯಾಡಿ ಆಹಾರ ಸಂಗ್ರಹಿಸುತ್ತಿದ್ದೆವು. ಬೇಟೆಯಾಡುವ ರೂಢಿ ಅತ್ಯಂತ ಹಿಂದಿನಿಂದಲೂ ಮಾನವನಲ್ಲಿತ್ತು. ಹಾಗಾಗಿ ಸಾಕಷ್ಟು ಶ್ರಮವಹಿಸಿ ಆಹಾರ ಸಂಗ್ರಹಿಸುತ್ತಿದ್ದೆವು.

"ಡಾರ್ವಿನ್ ಒಂದು ಕಡೆ ಏನು ಹೇಳಿದ್ದಾನೆ ಗೊತ್ತೆ? ಜೀವಂತ ಪ್ರಾಣಿಗಳ ಹೆಚ್ಚು ಉಪಯೋಗವಾಗುವ ಅಂಗಾಂಗಗಳು ಹೆಚ್ಚು ವಿಕಾಸಹೊಂದುತ್ತವೆ. ಉಪಯೋಗವಾಗದ ಅಂಗಾಂಗಗಳು ವಿಕಾಸಹೊಂದುವುದಿಲ್ಲ ಎಂದು.

"ಡಾರ್ವಿನ್ನನ ಈ ಹೇಳಿಕೆಯ ಆಧಾರದ ಮೇಲೆ ನೋಡಿದಾಗ ನಮ್ಮ ಪೂರ್ವಿಕರು ಶ್ರಮಕ್ಕೆ ಹೆಚ್ಚು ಅಂಟಿಕೊಂಡಿದ್ದರು. ಹಾಗಾಗಿ ಅವರು ಹೆಚ್ಚು ಎತ್ತರ ಮತ್ತು ದಷ್ಟಪುಷ್ಟವಾಗಿದ್ದರು. ಕೃಷಿಯನ್ನು ಮಾನವ ಯಾವಾಗ ಆವಿಷ್ಕರಿಸಿದನೋ ಆಗ ದೈಹಿಕ ಶ್ರಮ ಕಡಿಮೆಯಾಯಿತು. ದೇಹದ ಗಾತ್ರವೂ ಕುಗ್ಗತೊಡಗಿತು.

"ಅಂತೆಯೇ ಯಾವಾಗ ನಾವು ಆಹಾರವನ್ನು ಬೇಯಿಸಿ ತಿನ್ನತೊಡಗಿದೆವೋ ಆಗ ಅಗಿಯುವ ಕೆಲಸವೂ ಕಡಿಮೆಯಾಯಿತು. ಹಲ್ಲುಗಳಿಗೆ ಅಗತ್ಯವಿರುವಷ್ಟು ಕೆಲಸವಿಲ್ಲದಂತಾಗಿ ಅವೂ ಸಂಕುಚಿತಗೊಳ್ಳತೊಡಗಿದವು. ಈ ಪ್ರಕ್ರಿಯೆ ಭೂಮಿಯ ವಿವಿಧ ಭಾಗಗಳಲ್ಲಿ, ವಿವಿಧ ಕಾಲ ಘಟ್ಟದಲ್ಲಿ ಸಂಭವಿಸಿತು ಎನ್ನುತ್ತಾರೆ ವಿಜ್ಞಾನಿಗಳು.

"ಹೀಗೆಂದಾಕ್ಷಣ ಆದಿಮಾನವರ ಆಹಾರ ಕ್ರಮ ಉತ್ತಮವಾಗಿತ್ತೆಂದು ಭಾವಿಸಬೇಡ. ಯಾಕೆಂದರೆ ಆಗವರು ಆಹಾರ ಪದಾರ್ಥಗಳನ್ನು ಸೇವಿಸುವ ಪದ್ಧತಿಯೇ ಅಪಾಯಕರವಾಗಿತ್ತು.

"ಕೃಷಿ ಆವಿಷ್ಕಾರವಾದ ಸಂದರ್ಭದ ವ್ಯಕ್ತಿ ನಾನು ಎಂದು ಮೊದಲೇ ಹೇಳಿದೆನಲ್ಲವೇ? ಆಗ ನಮಗೆ ಸಮತೋಲನ ಆಹಾರ ಪದ್ಧತಿಯ ಪರಿಚಯವೇ ಇರಲಿಲ್ಲ. ಹಾಗಾಗಿ ನಮ್ಮ ದೇಹದ ಆಕಾರವನ್ನು ಒಂದೇ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಹಲವಾರು ಕಷ್ಟಗಳನ್ನು ಎದುರಿಸಬೇಕಾಯಿತು. ಇದರಿಂದಾಗಿ ನಾನು ನಿನಗಿಂತ ಕೊಂಚ ಹೆಚ್ಚು ಕುಳ್ಳನಾಗಿದ್ದಿರಬಹುದು. ಇದು ಪ್ರಾಚ್ಯವಸ್ತು ಸಂಶೋಧನಾ ದಾಖಲೆಗಳಿಂದ ತಿಳಿದುಬರುತ್ತದೆ.

"ನಿಮಗೀಗ ಸಮತೋಲನ ಆಹಾರ ಪದ್ಧತಿಯ ಪರಿಚಯವಿದೆ. ಆದರಿಂದಾಗಿ ಸಂಕುಚನ ಕ್ರಿಯೆಯನ್ನು ತಡೆಯಲು ಪ್ರಮುಖ ಅಸ್ತ್ರದೊರೆತಂತಾಗಿದೆ. ಹೀಗೆಂದಾಕ್ಷಣ ನೀನು ಇದೇ ರೀತಿ ಇರಬಲ್ಲೆ ಎಂದು ಮಾತ್ರ ಭಾವಿಸಬೇಡ. ಯಾಕೆಂದರೆ ವಂಶವಾಹಿಗಳಲ್ಲಿ ಈ ಗುಣ ಹರಿದುಬರುವುದಿಲ್ಲ. ಆದ್ದರಿಂದ ಕೆಲಪೀಳಿಗೆಯ ನಂತರ ಇದಕ್ಕೆ ವ್ಯತಿರಿಕ್ತವಾದ ಪರಿಸ್ಥಿತಿಯೂ ಉಂಟಾಗಬಹುದು ಎಂಬ ಭೀತಿಯನ್ನು ವಿಜ್ಞಾನಿಗಳು ವ್ಯಕ್ತಮಾಡಿದ್ದಾರೆ.

"ಇನ್ನು ಎರಡನೇ ಸಿದ್ಧಾಂತ ಏನು ಹೇಳುತ್ತದೆ



ಗೊತ್ತೆ? ಹೆಚ್ಚುತ್ತಿರುವ ಭೂಮಂಡಲದ ಉಷ್ಣತೆಯೂ ಮಾನವನ ಸಂಕುಚನ ಪ್ರಕ್ರಿಯೆಗೆ ಕಾರಣವಾಗಿದೆ. ಕಳೆದ ಕೆಲ ಸಾವಿರ ವರ್ಷಗಳಿಂದ ಭೂಮಂಡಲದ ಉಷ್ಣತೆ ಹೆಚ್ಚುತ್ತಿದೆ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಮನುಷ್ಯರಷ್ಟೇ ಅಲ್ಲ, ಹೊಟ್ಟೆಯೊಳಗೆ ಮರಿಗಳನ್ನು ಅಡಗಿಸಿಟ್ಟುಕೊಳ್ಳುವ ಸಸ್ತನಿಗಳು ಸಹ ತಮ್ಮ ದೈಹಿಕ ಪ್ರಮಾಣವನ್ನು ಕಳೆದುಕೊಳ್ಳುತ್ತವೆ. ದೇಹ ಬಡಕಲಾಗುವುದು ನೈಸರ್ಗಿಕ ಕ್ರಿಯೆಯಾಗಿದೆ. 'ತೆಳುವಾದ ದೇಹ ಹೊಂದಿರುವುದೆಂದರೆ ದೇಹದ ಉಷ್ಣತೆಯ ನಷ್ಟ ಕಡಿಮೆಯಾಗುವುದು ಎಂದರ್ಥ' ಎಂಬ ವಾದವನ್ನು ವಿಜ್ಞಾನಿಗಳು ಇಡುತ್ತಾರೆ.

"ಇದಕ್ಕಿಂತ ಭಿನ್ನವಾಗ ವಿಚಾರವೊಂದನ್ನು ಮಂಡಿಸುವ ಜೋಹಾನ್ಸ್‌ಬರ್ಗ್ ವಿಶ್ವವಿದ್ಯಾಲಯದ ಮೆಸೀಹೆನೆಬರ್ಗ್ ಪ್ರಕಾರ ಭೂಮಿಯ ಪಥಕ್ಕೂ ದೇಹದ ಗಾತ್ರಕ್ಕೂ ಸಂಬಂಧವಿದೆ. ಫೆಬ್ರುವರಿ-ಜುಲೈ ನಡುವೆ ಜನಿಸಿದವರು ಉಳಿದ ತಿಂಗಳುಗಳಲ್ಲಿ ಜನಿಸಿದವರಿಗಿಂತ ದೈಹಿಕವಾಗಿ ಸಣಕಲರಾಗಿರುತ್ತಾರೆ.

"ಆದರೆ ಎರಡೂ ಗೋಳಾರ್ಧಗಳಲ್ಲಿ ಹೀಗಾಗುವುದರಿಂದ ಋತುಮಾನಕ್ಕೂ ಅದಕ್ಕೂ ಸಂಬಂಧವಿದೆಯೆಂದು ಹೇಳುವಹಾಗಿಲ್ಲ. ಸುದೀರ್ಘ ಅವಧಿಯಲ್ಲಿ ಭೂಮಿಯ ಕಕ್ಷೆಯ ಸ್ಥಿತ್ಯಂತರವಾಗಿ ಆ ಕಾರಣದಿಂದಾಗಿ ಮಾನವರ ದೇಹ ಕುಬ್ಜಗೊಂಡಿರಲೂ ಸಾಧ್ಯ. ಆದರೆ ಅದನ್ನು ಸಿದ್ಧಪಡಿಸಲು ಅಂಕಿಸಂಖ್ಯೆಗಳು ಸಿಗಬೇಕಲ್ಲ? ಹೀಗಾಗಿ ಆ ವಿಚಾರವನ್ನು ಒಂದು ತಾರ್ಕಿಕ ಊಹೆಯೆಂದು ಮಾತ್ರ ಗ್ರಹಿಸಬಹುದು.

"ಈಗ ತಿಳಿಯಿತೆ ನಾನೇಕೆ ಕುಬ್ಜನಾದೆನೆಂದು? ಮಾನವ ಕುಳ್ಳನಾಗುವುದಕ್ಕೆ ಕಾರಣಗಳು ಏನೇ ಇರಲಿ, ಈಗಿರುವ ಮಾನವ - ಮುಂದೆಯೂ ಹೀಗೇ ಇರುವುದು ಸಾಧ್ಯವಿಲ್ಲ ಎಂಬುದು ಸತ್ಯವೆನಿಸಿದೆ. ಅನೇಕ ತಾಂತ್ರಿಕ, ಸಾಮಾಜಿಕ ಮತ್ತು ಖಗೋಳ ಶಾಸ್ತ್ರೀಯ ಅಂಶಗಳು ಮಾನವನ ಸ್ಥಿತಿಗತಿಯ ಮೇಲೆ ಹಿಂದೆಯೂ ಪ್ರಭಾವ ಬೀರಿವೆ; ಮುಂದೆಯೂ ಬೀರುತ್ತವೆ." ●

---

## ಹೃದಯವನ್ನು ಗೆದ್ದ ಸ್ವಾಮಿಗಳು

ಹಿಂದಿನ ದಿನ ಶೃಂಗೇರಿ ಜಗದ್ಗುರುಗಳೊಬ್ಬರು ಮೇಣೆಯಲ್ಲಿ ಕುಳಿತು ಹೋಗುತ್ತಿದ್ದಾಗ ದಾರಿಯಲ್ಲಿ ಒಂದು ಮಸೀದೆ ಎದರಾಯಿತು. ಮುಂದೆ ಓಲಗ ಊದಿಕೊಂಡು ಹೋಗಬಾರದೆಂದು ಮುಸ್ಲಿಮರು ಮೇಣೆಯನ್ನು ತಡೆದರು. ಆಗ ಹಿಂದುಗಳು, "ರಸ್ತೆ ಯಾರಿಗೂ ಸೇರಿದ್ದಲ್ಲ, ಅದರ ಮೇಲೆ ನಿಮ್ಮದ್ದೆಂಥ ಯಜಮಾನಿಕೆ?" ಎಂದರು. ಇಬ್ಬರಿಗೂ ವಾಗ್ವಾದ ನಡೆಯಿತು. ಸ್ವಾಮಿಗಳು ಅದು ಏನು ಗಲಾಟೆ ಎಂದು ಕೇಳಿ ತಿಳಿದುಕೊಂಡರು. ಅವರು ಓಲಗ ನಿಲ್ಲಿಸುವಂತೆ ಅಪ್ಪಣೆ ಮಾಡಿ, ಮೇಣೆಯಿಂದ ಕೆಳಗಿಳಿದು ಮಸೀದಿಯ ಬಳಿಗೆ ಬಂದರು. ಅಲ್ಲಿ ಗುಂಪು ಕಟ್ಟಿಕೊಂಡಿದ್ದ ಮುಸ್ಲಿಮರನ್ನು ಕುರಿತು, "ನಮ್ಮವರಿಗೆ ಹೇಳಿ, ಮಸೀದಿಯಲ್ಲಿ ನಿಮ್ಮ ಪ್ರಾರ್ಥನೆಯನ್ನು ಕೇಳುವ ದೇವರು, ಮಠದಲ್ಲಿ ನಾವು ಪೂಜೆ ಮಾಡುವ ದೇವರೇ. ದೇವರ ಸನ್ನಿದಿಯಲ್ಲಿ ಓಲಗ ಊದಕೂಡದೆಂಬ ನಿಮ್ಮ ವಾದ ಸರಿ. ನಾವು ದೇವರ ಸನಿಹದಲ್ಲಿ ಮೇಣೆಯಲ್ಲಿ ಸಹ ಕುಳಿತುಕೊಳ್ಳುವುದಿಲ್ಲ. ದೇವರ ಸಮ್ಮುಖದಲ್ಲಿ ಭಕ್ತಿಯಿಂದ ನಡೆದುಕೊಳ್ಳಬೇಕೆಂಬ ನಿಮ್ಮ ಇಚ್ಛೆ ನಮಗೆ ಸಮ್ಮತ."

ಮೆರವಣಿಗೆ ಮುಗಿದು, ಪೂಜ್ಯರು ಬಿಡಾರಕ್ಕೆ ಹಿಂದಿರುಗಿದಾಗ ನಾಲ್ವರು ಮುಸಲ್ಮಾನ ಪ್ರಮುಖರು ಬಂದು, "ಸ್ವಾಮಿಗಳ ಒಂದು ದಿನದ ಭಿಕ್ಷೆ ನಮ್ಮ ಪರವಾಗಿ ನಡೆಯುವುದಕ್ಕೆ ಅಪ್ಪಣೆಯಾಗಬೇಕು" ಎಂದು ಕೋರಿದರು. ಅದಕ್ಕೆ ಅವರು, "ಅಗತ್ಯವಾಗಿ ಆಗಲಿ" ಎಂದರು. ಮರುದಿನ ಚಂದ್ರಮೌಳೀಶ್ವರ ಸ್ವಾಮಿಯ ಪೂಜೆಯೆಲ್ಲಾ ಊರಿನ ಮುಸಲ್ಮಾನರ ಪರವಾಗಿ ನಡೆಯಿತು. ಭಾವೈಕ್ಯ ಎಂದರೆ ಇದೇ ಅಲ್ಲವೇ?

● ಡಿ. ಗುಂಡೂರಾವ್

ನಿಧಾನವಾಗಿಯಾದರೂ ಅಭಿವೃದ್ಧಿಯ ಬೆಲೆಯನ್ನು ಅಲ್ಲಿನ ಜನ ತೆರುತ್ತಿದ್ದಾರೆ

# ಬಂಗಾರದ ತ್ರಿಕೋನಕ್ಕೆ ಹೊಸ ಆಯಾಮ

ಹೆರಾಯಿನ್ ಬೇಕೆ...? ಎಲ್.ಎಸ್.ಡಿ. ಬೇಕೆ...? ಅಫೀಮು ಬೇಕೆ...? ಅಥವಾ ಇನ್ನಾವುದಾದರೂ ಭ್ರಮಾತ್ಮಕ ಪರಿಣಾಮವನ್ನುಂಟುಮಾಡುವ ಚಟಕಾರಕಗಳು ಬೇಕೆ? ನಾಗರಿಕ ಜಗತ್ತಿನಲ್ಲಿ ನಿಷೇಧಿಸಲ್ಪಟ್ಟ ಎಲ್ಲ ಮಾದಕ ದ್ರವ್ಯಗಳೂ ಇಲ್ಲಿ ಸುಲಭವಾಗಿ ಲಭ್ಯ. ಹಾಗೆಂದೇ ಈ ಪ್ರದೇಶಕ್ಕೆ ಮಾದಕಪ್ರಿಯರಿಂದ 'ಭೂತಳದ ಸ್ವರ್ಗ' ಎಂಬ ಅಭಿದಾನ

ಥೈಲೆಂಡ್, ಲಾವೋಸ್ ಹಾಗೂ ಬ್ರಹ್ಮದೇಶ (ಈಗಿನ ಮ್ಯಾನ್‌ಮಾರ್)ಗಳು ಕೂಡುವ ಸ್ಥಳವೇ ಈ 'ಭೂತಳದ ಸ್ವರ್ಗ.' ಆದರೆ ಇಲ್ಲಿ ಈ ಯಾವ ದೇಶಗಳ ಕಾನೂನೂ ನಡೆಯುವುದಿಲ್ಲ. ಹೀಗಾಗಿ ಈ ಪ್ರದೇಶ ಪೊಲೀಸರ ಪಾಲಿಗೆ ಸದಾ ಒಂದು ತಲೆನೋವು.

ಎಲ್ಲಿ ನೋಡಿದಲ್ಲಿ ಪರ್ವತಗಳು. ಸುತ್ತಲೂ ನಿಬಿಡಾರಣ್ಯ. ಅರಣ್ಯ ಮಧ್ಯದಲ್ಲೇ ಅಲ್ಲಲ್ಲಿ ಅಫೀಮಿನ ಸಾಗುವಳಿ. ಮಾದಕ ಪದಾರ್ಥಗಳನ್ನು ಸಂಸ್ಕರಿಸಿ, ವಿವಿಧ ರಾಸಾಯನಿಕಗಳನ್ನು ತಯಾರಿಸಲು ಚಿಕ್ಕಪುಟ್ಟ ಕಾರ್ಖಾನೆಗಳು. ಇವೆಲ್ಲ ನಾಗರಿಕ ಜಗತ್ತಿನಿಂದ ಬಲುದೂರ. ಆದರೆ ಚಟಗಳನ್ನು ಅಂಟಿಸಿಕೊಂಡವರಿಗೆ ಅವರು ಜಗತ್ತಿನಲ್ಲಿ ಎಲ್ಲಿಯೇ ಇರಲಿ, ಇಲ್ಲಿ ತಯಾರಾದ ಚಟಕಾರಕಗಳು ಸುಲಭವಾಗಿ ಲಭ್ಯ.

ಈ ನಿಬಿಡಾರಣ್ಯಗಳಲ್ಲಿ ಬೇರೆ ಬೇರೆ ಆದಿವಾಸಿ ಜನಾಂಗದವರೂ ವಾಸವಾಗಿದ್ದಾರೆ. ಅವರನ್ನು ನೋಡಲು, ಅವರ ಜೀವನ ಕ್ರಮವನ್ನು ಅಭ್ಯಸಿಸಲು ಬರುವವರೂ ಇದ್ದಾರೆ. ಆದರೆ ಇಲ್ಲಿನ ಪ್ರಕೃತಿ ಸೌಂದರ್ಯವನ್ನು ಸವಿಯಲು ಬರುವವರ ಸಂಖ್ಯೆಯೇ ಹೆಚ್ಚು. ಅವರಿಗಾಗಿ ಪ್ರವಾಸಗಳನ್ನು ಏರ್ಪಡಿಸುವ ಸಂಸ್ಥೆಗಳು ಆ ಮೂರು ದೇಶಗಳಲ್ಲಿಯೂ ಹರಡಿಕೊಂಡಿವೆ.

• 'ಕಸ್ತೂರಿಮೃಗ'

ಆದರೆ ಕಳ್ಳಸಾಗಾಟಗಾರರ ಜಗತ್ತೇ ಬೇರೆ. ಅವರ ಕಾರ್ಯವಿಧಾನವೇ ಬೇರೆ. ಸಾಮಾನ್ಯವಾಗಿ ಅವರಾರೂ ಪ್ರವಾಸಿಗರ ಮಾರ್ಗವನ್ನು ಅವಲಂಬಿಸುವುದಿಲ್ಲ. ಮಾದಕಗಳ ವ್ಯಾಪಾರದಲ್ಲಿ ಕೋಟಿ

ಗಟ್ಟಲೆ ಹಣ ಹರಿಯುತ್ತದೆ. ಈ ಹಣದ ಬಹು ಪಾಲು ಕಳ್ಳ-ಖದೀಮರ ಕಿಸೆ ತುಂಬುತ್ತದೆ. ಆದ್ದರಿಂದಲೇ ಅವರು ಮೂರು ದೇಶಗಳು ಸಂಧಿಸುವ ಈ ಸ್ಥಳವನ್ನು 'ಗೋಲ್ಡನ್ . ಟ್ರಯಾಂಗಲ್' ಅರ್ಥಾತ್ 'ಬಂಗಾರದ ತ್ರಿಕೋನ' ಎಂದು ಹೆಸರಿಸಿದ್ದಾರೆ.

ಇಲ್ಲಿ ಸದಾ ಹರಿದ್ವರ್ಣದ ವೃಕ್ಷಗಳು ರಾರಾಜಿಸುತ್ತವೆ. ಆ ಪೈಕಿ ಸಾಗವಾನಿ ವೃಕ್ಷಗಳೇ ಬಹಳ. ಅಲ್ಲಲ್ಲಿ ನದಿಗಳ ಕಲರವ; ಚಿಕ್ಕಪುಟ್ಟ ಜಲಪಾತಗಳು. ಕ್ಷಿತಿಜದ ಸುತ್ತ ವೃಕ್ಷಗಳಿಂದ ಆವೃತ್ತವಾದ ಪರ್ವತಗಳು. ಹೀಗೆ ಹೊರಗಿನವರಾರೂ ಸುಲಭವಾಗಿ ಪ್ರವೇಶಿಸದಂತಹ ಪರಿಸರದಲ್ಲಿ ಹಮೋಂಗ್, ಮಿಯೋ, ಕರೇನ್, ಇಕೋ, ಮೂಸೋ ಇತ್ಯಾದಿ ಆದಿ ಜನಾಂಗಗಳ ವಾಸ. ಹೊರಜಗತ್ತಿನ ಸಂಪರ್ಕ ಏನೇನೂ ಇಲ್ಲದ ಇವರ ಜೀವನ ವಿಧಾನವನ್ನು ಅಭ್ಯಸಿಸಲೆಂದೇ ಸಮಾಜ ಶಾಸ್ತ್ರಜ್ಞರು ಜಗತ್ತಿನ ಮೂಲೆಮೂಲೆಗಳಿಂದ ಇಲ್ಲಿಗೆ ಬರುತ್ತಾರೆ.

ಈ ಬಂಗಾರದ ತ್ರಿಕೋನದಲ್ಲಿರುವ, ಥೈಲಂಡಿಗೆ ಸೇರಿದ ಚ್ಯಾಂಗ್ ಮಾಯಿ ಹಾಗೂ ಚ್ಯಾಂಗ್ ರಾಯಿ ಎಂಬ ಎರಡು ಪಟ್ಟಣಗಳನ್ನು ಪರ್ಯಟಕರು ಸಂದರ್ಶಿಸದೆ ಇರುವುದಿಲ್ಲ. ವಿಸ್ತಾರದಲ್ಲಿ ಚ್ಯಾಂಗ್‌ಮಾಯಿ ಜಿಲ್ಲೆಗೆ ಎರಡನೆಯ ಸ್ಥಾನ. ಬ್ಯಾಂಕಾಕ್‌ನಿಂದ ಏಳನೂರು ಕಿಲೋಮೀಟರ್ ಉತ್ತರಕ್ಕಿದೆ. ಗಿರಿಕಂದರಗಳಿಂದ ಸುತ್ತುವರಿಯಲ್ಪಟ್ಟ ಈ ಊರು ಸಮುದ್ರ ತಟದಿಂದ ಮುನ್ನೂರು ಮೀಟರುಗಳಷ್ಟು ಎತ್ತರದಲ್ಲಿದೆ. ಬೆತ್ತದ ಕೆಲಸ, ಕೊಡೆಗಳನ್ನು ತಯಾರಿಸುವುದು, ಮಣ್ಣಿನಿಂದ ವಿವಿಧ ಬಗೆಯ ಗಡಿಗೆಗಳನ್ನೂ ಕಲಾಕೃತಿಗಳನ್ನೂ ತಯಾರಿಸುವುದು ಇಲ್ಲಿನ ಜನರ ಮುಖ್ಯ ಉದ್ಯೋಗ. ಥೈಲಂಡಿನ ಜನ ಚ್ಯಾಂಗ್ ಮಾಯಿಯನ್ನು 'ಥೈಲಂಡಿನ ಗುಲಾಬಿ' ಎಂದು ಪ್ರೀತಿಯಿಂದ ಕರೆಯುವುದಿದೆ.

ಚ್ಯಾಂಗ್ ರಾಯಿ ಬಂಗಾರದ ತ್ರಿಕೋನದ ಕೇಂದ್ರಸ್ಥಾನದಲ್ಲಿದೆ. ಉತ್ತರದಲ್ಲಿ ಬ್ರಹ್ಮದೇಶಕ್ಕೂ ಪೂರ್ವದಲ್ಲಿ ಲಾವೋಸಿಗೂ ಹೊಂದಿಕೊಂಡ ಈ ನಗರ ಬ್ಯಾಂಕಾಂಕ್‌ನಿಂದ ಎಂಟುನೂರು ಕಿಲೋಮೀಟರು ದೂರ. ೧೨೬೨ರಲ್ಲಿ ಮೇಂಗರಾಯಿ ಎಂಬ ರಾಜನಿಂದ ಸ್ಥಾಪಿಸಲ್ಪಟ್ಟ ಚ್ಯಾಂಗ್ ರಾಯಿ ಇತಿಹಾಸದಲ್ಲಿ ಅನೇಕ ಏರಿಳಿತಗಳನ್ನು ಕಂಡಿದೆ. ಥೈಲಂಡಿನ ರಾಜನಿಂದ ಈ ನಗರ ಸ್ಥಾಪಿಸಲ್ಪಟ್ಟಿದ್ದರೂ ೧೬೪೮ರ ನಂತರ ಎರಡು ಬಾರಿ ಬ್ರಹ್ಮದೇಶದ ಆಡಳಿತಕ್ಕೊಳಗಾಗಿತ್ತು. ೧೭೮೬ರಲ್ಲಿ ಥೈಲಂಡ್ ಇದನ್ನು ಪುನಃ ಸ್ವಾಧೀನಪಡಿಸಿಕೊಂಡಿತು. ಅಂದಿನಿಂದಲೂ ಚ್ಯಾಂಗ್‌ರಾಯಿ ಥೈಲಂಡಿನ ಆಡಳಿತದಲ್ಲೇ ಇದೆ.

ಇಲ್ಲಿ ಊರಿನ ತುಂಬಾ ಬೌದ್ಧಮಂದಿರಗಳು. ಅಲ್ಲಲ್ಲಿ ಅರಣ್ಯವನ್ನು ಕಡಿದು, ಹೊಲವನ್ನಾಗಿ ಪರಿವರ್ತಿಸಿ ಅಫೀಮನ್ನು ಬೆಳೆಯಲಾಗುತ್ತಿದೆ. ನಿಬಿಡವಾದ ಅರಣ್ಯವಿರುವುದರಿಂದ ಕಳ್ಳಕಾಕರಿಗೂ ಸರಕಾರದ ವಿರುದ್ಧ ಸೆಣಸಾಡುವ ಕೂಟಯೋಧರಿಗೂ ಆಶ್ರಯಸ್ಥಾನ. ಇಲ್ಲಿ ವಾಹನಗಳ ಮಾತಿರಲಿ, ಕಾಲಿನಿಂದ ಕೂಡ ಸಂಚರಿಸುವುದು ಕಠಿಣವಾದುದರಿಂದ ಕಳ್ಳಕಾಕರನ್ನಾಗಲಿ ದರೋಡೆಖೋರರನ್ನಾಗಲಿ ನಿಯಂತ್ರಿಸಲು ಸರಕಾರಕ್ಕೆ ಸಾಧ್ಯವಾಗಿಲ್ಲ. ಈ ಜಿಲ್ಲೆಯಲ್ಲಿಯೇ ಮೆಕಾಂಗ್ ನದಿ ಹರಿದಿದೆ. ಅದನ್ನು ದಾಟಿದರೆ ಲಾವೋಸ್‌ನಲ್ಲಿ ಪ್ರವೇಶ. ಚ್ಯಾಂಗ್ ರಾಯಿ ಥೈಲಂಡಿಗೆ ಸೇರಿದ್ದರೂ ವಾಸ್ತವವಾಗಿ ಅಲ್ಲಿ ಮಾತು ನಡೆಯುವುದು ಮಾದಕ ದ್ರವ್ಯಗಳ ದೊರೆಗಳದ್ದೇ ಹೊರತು ಸರಕಾರದ್ದಲ್ಲ.

ಬಂಗಾರದ ತ್ರಿಕೋನ ಲಾವೋಸ್, ಥೈಲಂಡ್ ಹಾಗೂ ಬ್ರಹ್ಮದೇಶಗಳ ಸಂಧಿಸ್ಥಾನವಂತೂ ಸರಿಯೆ, ಚೀನದಿಂದಲೂ ಬಹಳ ದೂರವಿಲ್ಲ. ಥೈಲಂಡಿಗೆ ಸೇರಿದ ಅಲ್ಲಿನ ಗಡಿಭಾಗದಿಂದ ಒಂದು ಒಂದೂವರೆ ಗಂಟೆಯಲ್ಲಿಯೇ ಯಾರಾದರೂ ವಾಹನಗಳ ಮೂಲಕ ಕಚ್ಚಾರಸ್ತೆಯನ್ನು ಕ್ರಮಿಸಿ ಚೀನವನ್ನು ತಲುಪಬಹುದು.

ಪ್ರವಾಸಿಗರ ಮೇಲೆ ವಿಧಿಸಲಾಗಿದ್ದ ಪ್ರತಿಬಂಧವನ್ನು ತೆಗೆದೊಗೆದರೆ ಈ ಪ್ರದೇಶದಿಂದ ಸಾಕಷ್ಟು ವಿದೇಶಿ ವಿನಿಮಯವನ್ನು ಗಳಿಸಬಹುದೆಂಬ ವಿಚಾರದಿಂದ ಬಂಡವಾಳಶಾಹಿ ಥೈಲಂಡ್, ಸಾಮ್ಯವಾದಿ ಲಾವೋಸ್ ಹಾಗೂ ಚೀನ ಮತ್ತು ಸೈನ್ಯಾಡಳಿತವಿರುವ ಬ್ರಹ್ಮದೇಶಗಳು ಸೇರಿ ಯೋಜ

ನೆಯೊಂದನ್ನು ರೂಪಿಸಿವೆ. ಹೀಗಾಗಿ ಈಗ ಪ್ರವಾಸಿಗರಿಗೆ ಮೊದಲಿದ್ದ ನಿರ್ಬಂಧವಿಲ್ಲ. ಥೈಲಂಡಿನ ಮಾಯಿಸಾಯಿ ನಗರದಿಂದ ಬ್ರಹ್ಮದೇಶದೊಳಗಾಗಲಿ ಮೆಕಾಂಗ್ ನದಿಯನ್ನು ದಾಟಿ ಥೈಲಂಡ್ ಹಾಗೂ ಲಾವೋಸನ್ನಾಗಲಿ ಯಾರಾದರೂ ಪ್ರವೇಶಿಸಬಹುದು. ಚೀನ ಕೂಡ ಈ ಕ್ಷೇತ್ರದಲ್ಲಿ ಸದ್ಯದಲ್ಲೆ ವ್ಯಾಪಾರ ಮಳಿಗೆಗಳನ್ನು ತೆರೆಯಲಿದೆ.

ಅಫೀಮಿನಿಂದಾಗಿ ಕಳ್ಳಸಾಗಾಟಗಾರರ ಪಾಲಿಗೆ ಬಂಗಾರದ ತ್ರಿಕೋನವಾದರೂ ಸಂಬಂಧಿಸಿದ ದೇಶಗಳ ಸರಕಾರಗಳಿಗೆ ಈ ಪ್ರದೇಶ ಕಲಂಕಪ್ರಾಯವಾಗಿದ್ದು ಸುಳ್ಳಲ್ಲ. ಅಫೀಮು ಬೆಳೆಯುವುದನ್ನು ಸೈನ್ಯಬಲದಿಂದಾದರೂ ಸರಿ, ತಡೆಗಟ್ಟಬೇಕೆಂದು ಥೈಲಂಡ್ ನಿರ್ಧರಿಸಿದೆ. ಹೀಗಾಗಿ ಈವರೆಗೆ ದುರ್ಭೇದ್ಯವೆನಿಸಿದ ಸ್ಥಾನಗಳಲ್ಲೆಲ್ಲ ಅಲ್ಲಿನ ಸರಕಾರ ದಾರಿಗಳನ್ನು ನಿರ್ಮಿಸಲು ಪ್ರಾರಂಭಿಸಿದೆ. ಗಸ್ತು ತಿರುಗುವ ಸೈನ್ಯಪಡೆಗಳು ಯಾವಾಗ ಎರಗಬಹುದೋ ಎನ್ನುವುದನ್ನು ಹೇಳಲಾಗದಿದ್ದುದರಿಂದ ಈ ಮೊದಲು ಅಫೀಮು ಬೆಳೆಯುತ್ತಿದ್ದ ಅನೇಕರು ಅದರ ಬದಲು ಬೇರೆ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಿದ್ದಾರೆ. ನೌಕಾವಿಹಾರಕ್ಕಾಗಿ ಮೆಕಾಂಗ್‌ನದಿಯಲ್ಲಿ ಎಲ್ಲ ಸೌಕರ್ಯಗಳೂ ಉಳ್ಳ ನೌಕೆಗಳನ್ನು ಪೂರೈಸಿದ್ದಲ್ಲದೆ ಅಲ್ಲಲ್ಲಿ ಹೂಳೆತ್ತುವ ಕೆಲಸವನ್ನೂ ಥೈಲಂಡ್ ಸರಕಾರ ಕೈಗೊಂಡಿದೆ.

ಪ್ರವಾಸೋದ್ಯಮವನ್ನು ಇನ್ನಷ್ಟು ಬಲಪಡಿಸುವ ದೃಷ್ಟಿಯಿಂದ ಚ್ಯಾಂಗ್‌ರಾಯಿಯಲ್ಲಿ ಅಂತಾರಾಷ್ಟ್ರೀಯ ವಿಮಾನನಿಲ್ದಾಣವನ್ನೂ ನಿರ್ಮಿಸಲಾಗಿದ್ದು ಇಷ್ಟರಲ್ಲಿಯೇ ಚೀನ ಹಾಗೂ ಲಾವೋಸ್‌ಗಳಿಗೆ ವಿಮಾನಯಾನ ಪ್ರಾರಂಭವಾಗಲಿದೆ. ಥೈಲಂಡಿನ ರೇಲ್ವೆಮಾರ್ಗ ಚ್ಯಾಂಗ್‌ಮಾಯಿಗೇ ಕೊನೆಗೊಳ್ಳುತ್ತದೆ. ಅದನ್ನೀಗ ಚ್ಯಾಂಗ್‌ರಾಯಿಯವರೆಗೆ ವಿಸ್ತರಿಸುವ ಯೋಜನೆಯಿದೆ. ಈ ಭಾಗದಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಗುತ್ತಿದೆ. ಹೊಸ ಹೊಸ ಔದ್ಯೋಗಿಕ ಘಟಕಗಳು ತಲೆಯೆತ್ತುತ್ತಿವೆ. ಮಾಯಿಸಾಯಿಯಿಂದ ಪ್ರಾರಂಭವಾಗಿ, ಬ್ರಹ್ಮದೇಶದ



ಅಲಂಕಾರ
ಆಕಾರ
ಅಹಂಕಾರ
ಅಧಿಕಾರ
ಎಲ್ಲ 'ಕಾರ'ಗಳಲ್ಲೂ
ಹೆಂಗಸರದೇ
ಮೇಲುಗೈ;
ಧೂಂಕಾರಕ್ಕೆ
ಮಾತ್ರ
ಗಂಡಸರು ಸೈ!

● ಶಿವಾನಂದ ಕೂಡಗಿ

ಶಾನ್ ಪ್ರಾಂತದೊಳಗೆ ಹಾಯ್ದು, ನಂತರ ಚೀನದ ಯುನ್ನಾನ್ ಪ್ರಾಂತದ ವರೆಗೆ ತಲಪುವ ರಾಜಮಾರ್ಗವನ್ನು ನಿರ್ಮಿಸಲು ಆ ಮೂರೂ ದೇಶಗಳು ಮುಂದಾಗಿವೆ.

ಥೈಲಂಡಿನ ಬಂಡವಾಳ, ಚೀನದ ವಿದ್ಯುತ್ತು, ಕಲ್ಲಿದ್ದಲು ಹಾಗೂ ಕಚ್ಚಾ ಪದಾರ್ಥಗಳು ಲಾವೋಸ್ ಹಾಗೂ ಬ್ರಹ್ಮ ದೇಶಗಳಲ್ಲಿ ಹೇರಳವಾಗಿ ಲಭ್ಯವಿರುವ ಖನಿಜಗಳು ಇವನ್ನೆಲ್ಲ ಉಪಯೋಗಿಸಿಕೊಂಡು ಈ ಪ್ರದೇಶದ ಸರ್ವತೋಮುಖ ಪ್ರಗತಿಯನ್ನು ಸಾಧಿಸಬಹುದೆಂಬ ವಿಚಾರದಿಂದ ಈ ನಾಲ್ಕೂ ದೇಶಗಳ ಸರಕಾರಗಳು ಹೊಸಹೊಸ ಯೋಜನೆಗಳನ್ನು ಜಾರಿಗೆತಂದಿವೆ. ಪರಿಣಾಮವಾಗಿ ಮಾಯಿಸಾಯಿ (ಥೈಲಂಡ್) ಹಾಗೂ ತಾಜಿಲೇಕ್ (ಬ್ರಹ್ಮದೇಶ)ಗಳಂತಹ ನಗರಗಳಲ್ಲಿ ಬಹುಮಹಡಿ ಕಟ್ಟಡಗಳು ತಲೆಯೆತ್ತುತ್ತಿವೆ. ಈ ಗಡಿಭಾಗಗಳ ಜನರಲ್ಲೂ ಸಹಕಾರದ ಮನೋಭಾವ ಹೆಚ್ಚುತ್ತಿದೆ. ಬೆಳಿಗ್ಗೆ ಬ್ರಹ್ಮದೇಶ ಬಿಟ್ಟು, ಥೈಲಂಡಿನ ಗಡಿಗೆ ಹತ್ತಿರವಾದ ನಗರಗಳಲ್ಲಿ ದುಡಿದು, ಸಾಯಂಕಾಲ ಮತ್ತೆ ತಾಯ್ನಾಡಿನಲ್ಲಿರುವ ಮನೆಗೆ ಹಿಂದಿರುಗುವ ಜನರು ಸಾಕಷ್ಟಿದ್ದಾರೆ. ಥೈಲಂಡಿನ ಗಡಿಯಲ್ಲಿರುವವರು ತಮಗೆ ಬೇಕೆನಿಸಿದಾಗ ಗಡಿದಾಟಿ, ತಾಜಿಲೇಕಕ್ಕೆ ಬಂದು ಚಿರೂಟು, ಬಟ್ಟೆ ಬರೆ, ಪ್ಲಾಸ್ಟಿಕ್ ವಸ್ತುಗಳನ್ನು ಪಾದರಕ್ಷೆಗಳು ಇತ್ಯಾದಿಗಳನ್ನು ಖರೀದಿಸಿ ಥೈಲಂಡಿಗೆ ಹಿಂದಿರುಗುತ್ತಾರೆ. ಹೀಗೆ ಅಲ್ಲಿ ಈಗ ಗಡಿಗಳೆನ್ನುವುದು ಹೆಸರಿಗೆ ಮಾತ್ರ. ಗಡಿಯಾಚೆಗೂ ಈಚೆಗೂ ಒಮ್ಮತದ ಮನೋಭಾವ.

ಆದರೆ ಪ್ರಾದೇಶಿಕ ಅಭಿವೃದ್ಧಿಯೊಂದಿಗೆ ಹೊಸ ಹೊಸ ಸಮಸ್ಯೆಗಳೂ ಹುಟ್ಟಿಕೊಳ್ಳುತ್ತಾ ಇವೆ. ಲಂಗುಲಗಾಮಿಲ್ಲದೆ ಮರಗಳನ್ನು ಕಡಿಯುತ್ತಿರುವುದರಿಂದ ಭೂಸವೆತ ಹೆಚ್ಚಾಗುತ್ತಿದೆ. ಕಾರಖಾನೆಗಳಿಂದಾಗಿ ಇಲ್ಲಿನ ವಾತಾವರಣ ಮೊದಲಿನ ಹಾಗೆ ಸ್ವಚ್ಛವಾಗಿ ಉಳಿದಿಲ್ಲ. ಹೊರ ದೇಶಗಳಿಂದ ಹೆಚ್ಚು ಹೆಚ್ಚು ಜನ ಬರುತ್ತಾ ಇದ್ದಾರೆ. ಅವರಲ್ಲಿ ರೋಗವನ್ನು ತಗಲಿಸಿಕೊಂಡವರೂ ಇರುವುದರಿಂದ ಹೊಸದಾಗಿ ರೋಗಗಳು ಹಬ್ಬುತ್ತಿವೆ. ಏಡ್ಸ್ ಹೆಸರನ್ನು ಕೂಡ ಕೇಳಲರಿಯದ ಇಲ್ಲಿನ ಮುಗ್ಧ ಜೀವಿಗಳಲ್ಲಿ ಅದು ವರ್ಷವರ್ಷಕ್ಕೂ ಹೆಚ್ಚಾಗಿ ವ್ಯಾಪಿಸುತ್ತಿದೆ.

ಮಾದಕ ದ್ರವ್ಯಗಳ ಕಳ್ಳ ಸಾಗಾಟದಲ್ಲಿ ನಿರತರಾದವರ ಪಾಲಿಗೆ 'ಬಂಗಾರದ ತ್ರಿಕೋನ'ವಾಗಿದ್ದ ಈ ಪ್ರದೇಶ ನಿಧಾನವಾಗಿ ಆಕರ್ಷಣೆಯನ್ನು ಕಳೆದುಕೊಳ್ಳುತ್ತಿದೆ. ಆದರೆ ಅಫೀಮಿನ ಸ್ಥಾನವನ್ನು ಉದ್ದಿಮೆಗಳು ಆಕ್ರಮಿಸಿರುವುದರಿಂದ ಅಲ್ಲಿನ ಸಂಪತ್ತಿಗೇನೂ ಕೊರತೆಯಾಗಿಲ್ಲ. ಔದ್ಯಮಿಕ ಅಭಿವೃದ್ಧಿಯಿಂದಾಗಿ ಉದ್ಭವಿಸಿದ ಈ ಸಂಪತ್ತಿಗೆ ಪ್ರತಿಯಾಗಿ ಅಲ್ಲಿನ ಜನ ಅನಿವಾರ್ಯವಾಗಿ ಹೊಸ ಹೊಸ ತೊಂದರೆಗಳಿಗೆ ಈಡಾಗುವುದೂ ತಪ್ಪಿಲ್ಲ. ಆರೋಗ್ಯದ ಲೆಕ್ಕದಲ್ಲಿ ಅಭಿವೃದ್ಧಿ ಎಷ್ಟು ದುಬಾರಿಯಾಗಬಹುದೆಂಬುದನ್ನು ಅಲ್ಲಿಯ ಜನರೀಗ ಅರಿತಿದ್ದಾರೆ.

●

೧) ನುಂಗಿದವ ಬದುಕಿದ, ನೋಡಿದವ ಸೊರಗಿದ.

೨) ಸಣ್ಣದಕ್ಕೆ ಆಶೆಪಡಬಾರದು, ದೊಡ್ಡದು ಸಿಕ್ಕರೆ ಬಿಡಬಾರದು.

೩) ಬಹುಮಾನವು ಕೊಡುವವರನ್ನು ಅವಲಂಬಿಸಿದೆಯೇ ಹೊರತು ಅರ್ಹತೆಯುಳ್ಳವರನ್ನಲ್ಲ.

೪) ಮುಚ್ಚಿಕೊಟ್ಟದ್ದರ ಬಗ್ಗೆ ಬಡಾಯಿ ಕೊಚ್ಚಿಕೊಳ್ಳಬಾರದು.

೫) ಕಳೆದು ಹೋದದ್ದು ಹುಡುಕಿದರೆ ಸಿಗಬಹುದು; ದೋಚಿಕೊಂಡು ಹೋದದ್ದು ಎಂದಿಗೂ ಸಿಗಲಾರದು

೬) ಸಿಕ್ಕಷ್ಟರಲ್ಲಿಯೇ ಯಾರೂ ತೃಪ್ತಿಹೊಂದುವುದಿಲ್ಲ; ಮುಂದಕ್ಕೆ ಹೋಗಿ ದೋಚುವ ಆಶೆಯನ್ನು ಬಿಡುವುದೂ ಇಲ್ಲ.

● ಎ.ಸಿ. ಬಳಿಗಾರ

# ಮಜಾಶೀರ ಮಜಕೂರು

## ನಗುರೋಗ!

ಸುಂಸುಮ್ನೇ ನಗೋ ಜನಾನ ಕಂಡ್ರೆ "ಇವ್ನಿಗೆಲ್ಲೋ ಯಾವ್ದೋ ರೋಗಾ ಬಡ್ಕೊಂಡಿರ್ಬೇಕು" ಅಂದ್ಕೊಳ್ಳೋರೇ ಜಾಸ್ತಿ ಅಲ್ವಾ? ಮನೋವಿಜ್ಞಾನಿ ಹಾಗೂ ಹಾಸ್ಯ ವಿಶೇಷಜ್ಞ ರಾಬರ್ಟ್ ಹೋಲ್ಡನ್ ಎಂಬ ವ್ಯಕ್ತಿ ಆಫ್ರಿಕಾದ ಟಾಂಗಾನಿಕಾದ ಬುಕೋಬಾ ಜಿಲ್ಲೇಲಿರೋ ಒಂದು ಹಳ್ಳಿಯ ಶಾಲೇಲಿ ಇಂಥಾ 'ನಗುರೋಗ' ಇರೋದನ್ನ ಗುರ್ತಿಸ್ದ.

"ಇದೊಂದ್ರೀತಿ ಅಂಟುರೋಗ. ಒಬ್ಬ ಹುಡುಗ ನಗೋಕ್ ಶುರೂ ಮಾಡ್ದ ಅಂದ್ರೆ ಮುಂದೊಂದ್ ಗಂಟೇಲಿ ಇಡೀ ಶಾಲೆಗೇ ಆ ರೋಗ ಹಬ್ಕೊಂಬಿಡ್ತಿತ್ತು. ನಗೋಕೆ ಇಂಥಾ ಹೊತ್ತು, ಇಂಥಾ ಕಾರಣಾನೇ ಆಗಬೇಕೂಂ ತೇನಿರ್ಲಿಲ್ಲ. ಒಂದಿನ್ವಂತೂ ಈ ರೋಗ ತೀವ್ರ ಸ್ವರೂಪ ತಾಳ್ತು. ಪರಿಣಾಮ ಏನಾಯ್ತೂಂತೀರಿ? ಇಡೀ ಶಾಲೇನೇ ಬಂದ್ ಮಾಡಿ ಮಕ್ಕಳ್ನೆಲ್ಲಾ ಮನೋರೋಗ ತಜ್ಞರ ಹತ್ರ ಕರ್ಕೊಂಡ್ಹೋಗ್‌ಬೇಕಾಯ್ತು. ಇದು ಮೊನ್‌ಮೊನ್ನೆ, ೧೯೬೨ ರ ಆಗಸ್ಟ್ ತಿಂಗಳಲ್ಲಿ ನಡೀತು" ಅಂತಾನೆ ಹೋಲ್ಡನ್.

ಅದ್ಕಿಂತ್ ಮೊದ್ಲು ಅನೇಕ್ಸಲ ಈ ರೀತಿ 'ನಗುರೋಗ' ಕ್ಕೀಡಾಗಿದ್ವಂತೆ ಈ ಮಕ್ಳು. ಕಾರಣವಿಲ್ದೆ ಒಬ್ಬ ನಗೋಕ್ ಶುರು ಮಾಡಿ, ಆತ ನಕ್ಕದ್ದಕ್ಕೇನು ಕಾರಣ ಅಂತ ಯೋಚಿಸೋ ಗೋಜಿಗೇನೂ ಹೋಗ್ದೇನೇ ಉಳಿದೋರು, ಮತ್ತು ಇವ್ರೆಲ್ಲಾ ಯಾಕೆ ನಗೋದು ಅಂತ ಗೊತ್ತಾಗ್ದಿದ್ರೂ ಮಾಸ್ತರು, ಪಕ್ಕದ ಕ್ಲಾಸ್ ನಗ್ತಾ ಇದೆ ಅಂದ್ಮೇಲೆ ತಾವ್ಯಾಕ್ ಸುಮ್ನೆ ಕೂತಿರ್‌ಬೇಕು ಅಂತ ಇನ್ನೊಂದು ಕ್ಲಾಸ್ನೋರು...ಹೀಗೇ ಶಾಲೆಗೆ ಶಾಲೇನೇ 'ಹಿಹ್ಹಿ-ಹುಹ್ಹು' ಅನ್ನೋಕ್ ಶುರು ಮಾಡ್ತಿತ್ತು.

ಹುಡುಗ್ರು ಮನೇಗ್ಹೋದ್ರೂ ನಗೆ ನಿಲ್ತಿರ್ಲಿಲ್ಲ. ಮಗು ನಗ್ತಿದೆ ಅಂದ್ಮೇಲೆ ತಾವಾದ್ರೂ ನಗ್ಲೇಬೇಕೂಂತ ಆತನ ಅಪ್ಪ-ಅಮ್ಮನೂ ನಗೋಕ್ ಶುರು ಮಾಡ್ತಿದ್ರಂತೆ.

## ಸಂಗೀತ ಯಾತನೆ?

ಸಂಗೀತ ಕೇಳೋದು ನಿಮ್ಮ ಶೌಕೇನು? ಒಳ್ಳೇದೇ. ಕೇಳಿ, ಯಾರು ಬ್ಯಾಡಾಂತಾರೆ? ಆದ್ರೆ ಶೌಕು ಉಳ್ಳೋರ ಪಾಲಿನ ಶಾಪ ಆಗ್ಬಾರ್ದಲ್ವ? ನ್ಯೂಯಾರ್ಕ್ ನಗರದ ಜೊಸೇಫ್ ವೆಲ್ಲಾನ್ ಅನ್ನೋ ೨೫ರ ತರುಣ ತನ್ನ ನೆರೆಹೊರೆ ಜನಕ್ಕೆ 'ಸಂಗೀತ ಯಾತನೆ' ನೀಡಿದ ಕಾರಣಕ್ಕಾಗಿ ೩೦,೦೦೦ ಡಾಲರು ದಂಡ ಕಟ್ಬೇಕಾಯ್ತು.

ಮೈಕೆಲ್ ಹಾಗೂ ಕಾನ್ಸೆಟಾ ಅಂತ ಇಬ್ರು ನಡುವಯಸ್ನೋರು. ವೆಲ್ಲಾನ್ ಮನೆ ಇದ್ದದ್ದು ಇವ್ರಿಬ್ಬರ ಮನೆಗಳ ನಡ್ವೇನೇ. ಸತತ ಮೂರು ವರ್ಷಕಾಲ ಈ ನಥುವಿನವ ನೀಡಿದ ಸಂಗೀತ ಯಾತನೆಯಿಂದ ತಮ್ಮ ನೆಮ್ಮದೀನೇ ಕೆಟ್ಟು ಹೋಗಿದೆ ಅಂತ. ಅವ್ರಿಬ್ರೂ ದೂರಿಕೊಂಡ್ರು. "ರಾತ್ರಿ ನಿದ್ದೆಯಿಲ್ಲ, ಹಗಲಲ್ಲಿ ಹಾಯಾಗಿ ರೋಕೂ ಆಗಲ್ಲ. ಯಾವಾಗ ಕೇಳೀದ್ರೂ ತಲೆಚಿಟ್ಟು ಹಿಡಿಸೋವಂಥ ವಾದ್ಯ ಸಂಗೀತ. ಕೆಟ್ಟದನಿಯ ಹಾಡುಗಳನ್ನು ಒಣಗೆ ಕೇಳೋ ಹಾಗೆ ಹಚ್ಕೊಂಡೇ ಇರ್ತಾನೆ ಈತ" ಅಂತ ಪೊಲೀಸರೆದ್ರು ಅತ್ತುಕೊಂಡ್ರು, ಅಲವತ್ತುಕೊಂಡ್ರು. ಒಂದು ಸಲವಲ್ಲ ನಾಲ್ಕು ಸಲ ಪೊಲೀಸ್ರು ವೆಲ್ಲಾನ್‌ಗೆ ಎಚ್ಚರಿಸೀದ್ರು. ಊಹೂಂ, ಆತ ಅವರ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ.

ನ್ಯಾಯಾಧೀಶ್ರು ವೆಲ್ಲಾನ್‌ಗ ೩೦,೦೦೦೦ ಡಾಲರು ದಂಡ ಕಟ್ಬೋ ತೀರ್ಪು ಬರದ್ರು.

# ಮೆಲುಕು



೧೯೪೦ರ ದಶಕದ ಆರಂಭದ ವರ್ಷಗಳಿರಬೇಕು. ಆಗ ನಾನಿನ್ನೂ ಬಾಲಕ. ಪ್ರಾಯಶಃ ಗುಡ್ಡೆ ಶಾಲೆಯಲ್ಲಿ ಪ್ರೈಮರಿ ವಿದ್ಯಾರ್ಥಿಯಾಗಿದ್ದೆ. ಆ ಕಾಲದ ನೆನಪುಗಳೆಲ್ಲ ಸಹಜವಾಗಿಯೆ ಈಗ ಚೂರು ಚೂರಾಗಿವೆ. ಆದರೆ ಅಂದಿನ ಸಂಗತಿಗಳನ್ನು ಜ್ಞಾಪಿಸಿಕೊಂಡು, ನೆನಪಿಗೆ ಬಂದವುಗಳನ್ನು ವರ್ಗೀಕರಿಸಿ ಜೋಡಿಸಿಕೊಂಡರೆ ಅನೇಕ ಸೊಗಸಾದ ಶಬ್ದಚಿತ್ರಗಳು ಮೂಡಿಬರುತ್ತವೆ. ಅಂತಹ ಒಂದು ಸ್ವಾರಸ್ಯಕರ ನುಡಿಚಿತ್ರವೇ ಈ ಪಿಜ್ಜಯ್ಯನ ತಿಥಿ.

ಪಿಜ್ಜಯ್ಯ ಎಂದರೆ ನನ್ನ ತಾಯಿಯ ತಂದೆಯ ಅಪ್ಪಯ್ಯ. ತಾಯಿಯ ತವರೂರು ಪುಡೂರು. ನಮ್ಮೂರಿನಿಂದ ಅದು ಹನ್ನೆರಡು ಮೈಲಿಗಳಷ್ಟು ದೂರ. ಪ್ರತಿವರ್ಷ ಜೂನ್ ತಿಂಗಳ ಆರಂಭದಲ್ಲಿ ಪಿಜ್ಜಯ್ಯನ ಶ್ರಾದ್ಧ ಬರುತ್ತಿತ್ತು. ಅದನ್ನು ಅಜ್ಜಯ್ಯ ಸಂಭ್ರಮದಿಂದ ಆಚರಿಸುತ್ತಿದ್ದರು. ನಮಗೂ ಪಿಜ್ಜಯ್ಯನ ತಿಥಿ ಎಂದರೆ ಉಳ್ಳೂರ ಹಬ್ಬದಂತೆ ಅಥವಾ ಕಾಳಾವರದ ಷಷ್ಠಿಯಂತೆ. ಹೋಗುವ ಉಮೇದು, ಆದರೆ ಅಷ್ಟುದೂರ ನಡೆದು ಕಾಲು ನೋಯಿಸಿಕೊಳ್ಳಬೇಕಲ್ಲ ಎಂಬ ಚಿಂತೆ. ಸಾರಿಗೆ ಸೌಲಭ್ಯಗಳಾವವೂ ಇರದ ದಿನಗಳವು. 'ಗಾಡಿ ಮಾಡಬಾರದೆ?' ಎಂದು ಅಮ್ಮ ಹೇಳಿದರೂ ಅಪ್ಪಯ್ಯ ಕೇಳುತ್ತಿರಲಿಲ್ಲ. 'ಕಾಲು ನೋಯುತ್ತದೆ' ಎಂಬ ನಮ್ಮ ಅಳಲಿಗೆ ಅವರು ಕಿವಿಗೊಡುತ್ತಿರಲೂ ಇಲ್ಲ. 'ಬರುವುದಿಲ್ಲ' ಎಂದು ಹಟ ಹಿಡಿದರೂ 'ವರ್ಷಕ್ಕೊಮ್ಮೆ ಬರುವ ಶ್ರಾದ್ಧ, ಪ್ರಸಾದ ತೆಗೆದುಕೊಳ್ಳದಿರುವುದೆ?' ಎಂದು ಒತ್ತಾಯದಿಂದ ಮನೆಮಂದಿಯೆಲ್ಲರನ್ನೂ ಹೊರಡಿಸುತ್ತಿದ್ದರು. ಮೂರು-ಮೂರೂವರೆ ಗಂಟೆಗಳ ಪ್ರಯಾಣ. ಐದು ಮೈಲಿ ದೂರದ ಪೇರಳಕಟ್ಟೆಯವರೆಗೆ ಮಾತ್ರ ಸಪೂರ ರಸ್ತೆ; ಮುಂದೆ ಹೊಳೆ ದಾಟಿದ ಮೇಲೆ ಮತ್ತೆ ಕಾಲ್ದಾರಿಯೇ ಗತಿ. ಮುಂಗಾರು ಮಳೆ ಬೇಗ ಶುರುವಾಗಿದ್ದ ಪಕ್ಷದಲ್ಲಿ ಆ ಕಾಲ್ದಾರಿಯೂ ಕೆಸರಿನಿಂದ, ಕೊಳೆತ ತರಗೆಲೆಗಳಿಂದ ಮುಚ್ಚಿಹೋಗಿರುತ್ತಿತ್ತು. ನಾವು ದಿಕ್ಕಿನ ಅಂದಾಜು ಹಿಡಿದು ಸಾಗಬೇಕಾಗುತ್ತಿತ್ತು. ದಾರಿಯಲ್ಲಿ ಅಡ್ಡ ಬರುವ ಕೊಂಬೆ ರೆಂಬೆಗಳನ್ನು ಕಡಿದು ಮುಂದೆ ಸಾಗಲು ನಾವು ಕತ್ತಿಯನ್ನು ಹಿಡಿದುಕೊಂಡೇ ಹೊರಡುತ್ತಿದ್ದೆವು.

ಹೊತ್ತು ಮೂಡುವಾಗಲೆ ಮನೆಯಿಂದ ಹೊರಡುವ ನಾವು ಹತ್ತುಗಂಟೆಯ ಒಳಗೆ ಅಜ್ಜನ ಮನೆ ಸೇರುತ್ತಿದ್ದೆವು. ಮನೆಯಲ್ಲಿ ತಿಂದ ದೋಸೆ ಅಥವಾ ಕಡುಬು ಆ ವೇಳೆಗೆ ಕರಗಿ ಹೋಗಿರುತ್ತಿತ್ತು. ದಾರಿಯ ಮಧ್ಯೆ ತೊಡುವಿಗೆ ಕಿಸ್ಕಾರದ ಹಣ್ಣುಗಳನ್ನೋ ಗರ್ಚನ ಕಾಯಿಗಳನ್ನೋ ಹೊಟ್ಟೆ ಬಿರೀ ತಿನ್ನುತ್ತಿದ್ದೆವು. ಕಲ್ಲು ಬೀಸಿ, ಗೋವೆಹಣ್ಣುಗಳನ್ನು ಉದುರಿಸಿ ಹಣ್ಣು ತಿಂದು ಬೀಜಗಳನ್ನು ವಾಪಸ್ ಬರುವಾಗ ಮನೆಗೆ ತರುವ ಉದ್ದೇಶದಿಂದ ಯಾವುದಾದರೂ ಪೊದೆಗಳ ಬುಡದಲ್ಲಿ ಅಡಗಿಸಿ ಇಡುತ್ತಿದ್ದೆವು. ಅಪ್ಪಯ್ಯ ದಾರಿಯಲ್ಲಿ ಇಡೀ ವರ್ಷಕ್ಕಾಗುವಷ್ಟು ವಾಟೆಹುಳಿ ಸಂಗ್ರಹಿಸುತ್ತಿದ್ದರು.



# ಅಜ್ಜಯ್ಯನ ಶ್ರಾದ್ಧ

• ಶಂಪ

ಅಜ್ಜಯ್ಯನ ಮನೆ ಸೇರಿದ ನಂತರವೂ ನಮಗೆ ಗಟ್ಟಿ ತಿಂಡಿ ಸಿಗುತ್ತಿರಲಿಲ್ಲ. ತಿಂಡಿ ಏನಿದ್ದರೂ ಉಪ್ಪಿಟ್ಟು ಅಥವಾ ಮೊಸರವಲಕ್ಕಿ. ತಿಥಿಯ ದಿನ ಬೆಳಗ್ಗೆ ಮನೆಯವರಾರೂ ಮುಸುರೆ ತಿಂಡಿ ತಿನ್ನ ಬಾರದಲ್ಲ! ಅಜ್ಜಯ್ಯ ಮತ್ತು ಆ ದಿನ ಎಲೆ ಹೊರಗಿಡುವ ಅವರ ಅಕ್ಕತಂಗಿಯರು ಬೆಳಗ್ಗೆ ತಿಂಡಿ ಹಾಗಿರಲಿ, ಒಂದು ಲೋಟ ಕಾಫಿಯನ್ನೂ ಕುಡಿಯುತ್ತಿರಲಿಲ್ಲ. ಅಜ್ಜಯ್ಯ ಶ್ರಾದ್ಧದ ಹಿಂದಿನ ದಿನದ ರಾತ್ರಿ ಕೂಡ ಉಪವಾಸವಿರುತ್ತಿದ್ದರು. ಅವರ ಆಚಾರ ತುಂಬ ಕಟ್ಟುನಿಟ್ಟು. ತುಂಬಾ ಮಡಿ. ಚಿಕ್ಕ ಮಕ್ಕಳ ಹೊಲಸು ತುಳಿದುಬಿಟ್ಟರೂ ಆಗಬೇಕು ತಣ್ಣೀರ ಸ್ನಾನ. ಅವರು ತಣ್ಣೀರ ಸ್ನಾನ ಮಾಡುವಂತಾಗಲಿ ಎಂದೇ ಕೆಲವು ಮೊಮಕ್ಕಳು ಮರಿಮಕ್ಕಳು ಕುಚೇಷ್ಟೆಯಿಂದ ಅವರನ್ನು ಮುಟ್ಟು ತ್ತಿದ್ದುದುಂಟು.

ಶ್ರಾದ್ಧದ ಹಿಂದಿನ ದಿನವಿಡೀ ಸ್ವಚ್ಛತಾ ಕಾರ್ಯ ಕ್ರಮ. ಹಾಸಿಗೆಯ ಬಟ್ಟೆ ಬರೆಗಳೂ ಸೇರಿದಂತೆ, ಮನೆಯ ಎಲ್ಲ ವಸ್ತ್ರಗಳನ್ನೂ ಆ ದಿನ ಒಗೆದು ಹಾಕಲೇಬೇಕು. ಮಳೆ ಬರತೊಡಗಿದ್ದರೆ, ಆ ದಿನ ಒಗೆದು ಹಾಕಿದ ಬಟ್ಟೆಗಳು ವಾರ ಕಾಲ ಒಣಗು ತ್ತಿರಲಿಲ್ಲ. ಒಗೆಯಲಾರದ ರಗ್ಗು-ಕಂಬಳಿಗಳು ಮತ್ತು ಚಿಕ್ಕಮಕ್ಕಳಿಗೆ ಬೇಕಾಗುವ ಹರಕು ಬಟ್ಟೆಗ ಳಿಗಷ್ಟೇ ಈ ಒಗೆತದಿಂದ ವಿನಾಯತಿ. ಅವುಗಳ ನ್ನೆಲ್ಲ ಹಿಂದಿನ ದಿನ ಒಂದು ಪ್ರತ್ಯೇಕ ಕೋಣೆಯಲ್ಲಿ

ಗುಡ್ಡೆ ಹಾಕುತ್ತಿದ್ದರು. ಆ 'ಮೈಲಿಗೆ ರೂಮು' ಬಿಟ್ಟರೆ ಮನೆಯಿಡೀ ಮಡಿ. ಮಾರ್ಜಾಲಮೈಲಿಗೆಯೂ ಆಗಬಾರದೆಂದು, ಬೆಕ್ಕನ್ನೂ ಅದರ ಮರಿಗಳನ್ನೂ ಪತ್ತಾಸಿನಲ್ಲಿ ಕೂಡಿ ಹಾಕುತ್ತಿದ್ದರು. ಹೀಗಾಗಿ ಅವುಗಳ 'ಮಿಯಾವ್' ಕೂಗೇ ಆ ದಿವಸದ ವಾದ್ಯ.

ಅಜ್ಜಯ್ಯನಿಗೆ ಅಕ್ಕತಂಗಿಯರ, ತಮ್ಮಂದಿರ, ಮಕ್ಕಳು ಅಳಿಯಂದಿರು ಸೊಸೆಯರ ಹಾಗೂ ಮೊಮ್ಮಕ್ಕಳು ಮರಿಮಕ್ಕಳ ಸಂಖ್ಯೆ ಹತ್ತಿರ ಹತ್ತಿರ ನೂರರಷ್ಟು. ಹೀಗಾಗಿ ಹಿಂದಿನ ದಿನವೇ ಅಡುಗೆ ಭಟ್ಟರಿಬ್ಬರು ಬರುತ್ತಿದ್ದರು. ತಿಥಿಯ ಊಟ ಅಂತಿಂತಹ ಯಃಕಶ್ಚಿತ್ ಊಟವಾಗಿರುತ್ತಿರಲಿಲ್ಲ. ಬಗೆಬಗೆಯ ಪದಾರ್ಥಗಳಾಗಬೇಕು. ನಂಬಿದರೆ ನಂಬಿ, ಬಿಟ್ಟರೆ ಬಿಡಿ; ಪಿಜ್ಜಯ್ಯನ ತಿಥಿಯ ದಿನ ಕನಿಷ್ಠ ಹತ್ತು ಬಗೆಯ ಪಲ್ಯಗಳನ್ನೂ ಮೂರು-ನಾಲ್ಕು ಬಗೆಯ ಹುಳಿಗಳನ್ನೂ ಮಾಡುತ್ತಿದ್ದರು. ಜೊತೆಗೆ ಮೂರು ಕೋಸಂಬರಿಗಳು, ಗೊಜ್ಜು, ಸಾಸಿವೆ, ತಂಬಳಿ, ಪಳದ್ಯ ಇತ್ಯಾದಿ. ಅಲ್ಲದೆ ಗೋಧಿ, ಹೆಸರು, ಬಾಳೆಹಣ್ಣು, ಇಬ್ಬಡಲ ಶ್ಯಾವಿಗೆ ಮೊದಲಾದ ನಾಲ್ಕಾರು ಬಗೆಯ ಪಾಯಸಗಳು, ವಡೆ-ಶುಕ್ರುಂಡೆಗಳಂತೂ ಆಗಲೇಬೇಕು, ಲಾಡೂ ಬೇರೆ ಆಗಬೇಕು. ಆದ್ದರಿಂದ ಹಿಂದಿನ ರಾತ್ರಿಯಿಡಿ ಕಡಿಗೆ ಕೊಚ್ಚುವ, ತರಕಾರಿ ಹೆಚ್ಚುವ ಕೆಲಸವೇ ಭಟ್ಟರಿಗೆ. ಮುಂಜಾವಿನ ವೇಳೆಗೆ ಒಂದೊಂದನ್ನಾಗಿ ಬೇಯಿಸಲು ಶುರುಮಾಡಬೇಕಲ್ಲ?- ಅದೂ ಹೊಗೆ ಕಾರುವ ಸೌದೆ ಒಲೆಗಳಲ್ಲಿ!

ಅಜ್ಜಯ್ಯನ ಮನೆಗೆ ಬರುತ್ತಿದ್ದ ಪುರೋಹಿತರೂ ಅತಿ ಚುರುಕಿನವರೇ. ಅವರ ನಿಜಹೆಸರು ವಿಶ್ವನಾಥ ಪುರಾಣಿಕ; ಆದರೆ ಅಡ್ಡ ಹೆಸರು 'ಗಂಟೆ ಭಟ್ಟರು' ಎಂದು. ಆಗ ಅವರು ತಮ್ಮ ಜೊತೆ ಕೊಂಡೊಯ್ಯುತ್ತಿದ್ದ ಗಡಿಯಾರವೇ ಈ ಅಡ್ಡಹೆಸರಿಗೆ ಕಾರಣವಾಗಿತ್ತು. ಗಡಿಯಾರವೆಂದರೆ ಕೈಗೆ ಕಟ್ಟುವ ಈಗಿನ ರಿಸ್ಟ್ ವಾಚ್ ಅಲ್ಲ, ಚಿಕ್ಕ ಗಾತ್ರದ ಅಲಾರಮ್ ಗಡಿಯಾರ. ಈ 'ಗಂಟೆ,' ಪುರಾಣಿಕರ ದೊಡ್ಡ ಚೀಲದಲ್ಲಿ, ಕೊಳೆತ ತೆಂಗಿನಕಾಯಿ, ಕಡಿಯಕ್ಕಿ, ಮಡಿ ಬಟ್ಟೆಗಳೊಂದಿಗೆ ಸದಾ ಇರುತ್ತಿತ್ತು. ಮನೆಮನಗಳಲ್ಲಿ ಆಗ ಸಾಮಾನ್ಯವಾಗಿ ಗಡಿಯಾರ ಇರುತ್ತಿರಲಿಲ್ಲ, ಆದ್ದರಿಂದ ಪುರೋಹಿತ ಪುರಾಣಿಕರು ಬಂದ ದಿನ ಆ ಮನೆಯವರಿಗೆ ಹಿಗ್ಗು- ಸಮಯ ಎಷ್ಟೆಂದು ತಿಳಿಯಲು ಆಕಾಶ ನೋಡಬೇಕಾಗಿಲ್ಲವಲ್ಲ ಎಂದು. ಪುರಾಣಿಕರು ಅತಿ ಚುರುಕು; ಈಗಿನ ಕೆಲವು ಪ್ರಸಿದ್ಧ ದೇವಾಲಯಗಳ ಅರ್ಚಕರಂತೆ ಮಂತ್ರಭಾಗಗಳನ್ನು ಅಲ್ಲಲ್ಲಿ ಗುಳುಮ್ ಗುಳುಮ್ ನುಂಗುತ್ತಿರಲಿಲ್ಲ. ಸ್ಫುಟವಾಗಿ ಮಂತ್ರ ಹೇಳುತ್ತಿದ್ದರು. ಅಲ್ಲದೆ ಸಮಾರಂಭಗಳಿಗೆ ಬೇಕಾಗುವ ದರ್ಭೆ, ತುಳಸಿದಳ, ಗಂಧ, ಶೇಡಿ ಪುಡಿ, ಹಲಸಿನ ಮಾವಿನ ತುಂಡುಗಳನ್ನು ಶಿಷ್ಯರ ಮನೆಗಳಿಗೆ ತಾವೇ ತರುತ್ತಿದ್ದರು. ಪಿಜ್ಜಯ್ಯನ ತಿಥಿಗಾಗಿ ಅಜ್ಜಯ್ಯನ ಮನೆಗೆ ಬರುವಾಗ, ಮೂರು ಎಮ್ಮೆಗ್ರಳ ಮೇವಿಗಾಗುವಷ್ಟು ಉದ್ದ ಉದ್ದದ ದರ್ಭೆಕಟ್ಟುಗಳನ್ನೂ ಅವರು ತರುತ್ತಿದ್ದರು. 'ಕಾಗೆಗಳನ್ನೂ ನೀವೇ ಹಿಡಿದುಕೊಂಡು ಬರಬಾರದೇ ಭಟ್ಟರೇ?' ಎಂದು ಕೆಲವರು ಅವರನ್ನು ಕುಚೇಷ್ಟೆ ಮಾಡುತ್ತಿದ್ದುದೂ ಉಂಟು. ಪುರಾಣಿಕರು ಶಿಷ್ಯರ ಮನೆಗೆ ಹೊರಡುತ್ತಿದ್ದುದು ಸೂರ್ಯೋದಯದ ಮೊದಲೇ-ಬರಿ ಹೊಟ್ಟೆಯಲ್ಲಿಯೇ. ಅವರ ಫಲಾಹಾರ ಶಿಷ್ಯರ ಮನೆಯಲ್ಲಿಯೇ ಆಗತಕ್ಕದ್ದು. ಅದು ಅವರ ಸಂಪ್ರದಾಯ.

'ಕುತಪ' ಕಾಲ ಶುರುವಾಗುತ್ತಲೇ ತಿಥಿಯ ಕಾರ್ಯಕ್ರಮ ಪ್ರಾರಂಭವಾಗುತ್ತಿತ್ತು. ಅಜ್ಜಯ್ಯನಿಗೆ ಮಹಾ ಅವಸರ; ಅವರ ಹೊಟ್ಟೆಯ ಹಸಿವೂ ಇದಕ್ಕೆ ಕಾರಣವಾಗಿದ್ದಿರಬೇಕು. ಆದರೆ ಪುರಾಣಿಕರು ಎಷ್ಟು ಚುರುಕಾಗಿದ್ದರೇನು? ತಿಥಿ ಸಂಜೆ ನಾಲ್ಕು ಗಂಟೆಯ ಮೊದಲು ಮುಗಿಯುತ್ತಿರಲಿಲ್ಲ. ಏಕೆಂದರೆ ಅಜ್ಜಯ್ಯ 'ಚಟಕ' ಶ್ರಾದ್ಧ ಮಾಡುತ್ತಿರಲಿಲ್ಲ. ಅವರು ಮಾಡುತ್ತಿದ್ದುದು, ಈಗ ರೂಢಿಯಿಂದ ತಪ್ಪಿಹೋಗಿರುವ 'ಕ್ಷಣಿಸಿ' ಶ್ರಾದ್ಧವನ್ನು. ಅಂದರೆ ವಿಷ್ಣುವಿಶ್ವೇದೇವರ, ಪಿತೃ ಪಿತಾಮಹ ಪ್ರಪಿತಾಮಹರ ಸ್ಥಾನದಲ್ಲಿ ಬ್ರಾಹ್ಮಣರನ್ನೇ ಕುಳ್ಳಿರಿಸಲಾಗುತ್ತಿತ್ತು. ಈ 'ಕ್ಷಣಿಸಿ'ಗೆ ಕುಳಿತುಕೊಳ್ಳುವ ಬ್ರಾಹ್ಮಣರದ್ದೇ ಒಂದು ಪ್ರತ್ಯೇಕ ವರ್ಗ. ಅವರೂ ಶ್ರಾದ್ಧಕ್ಕೆ ಬರಿ ಹೊಟ್ಟೆಯಲ್ಲಿ ಬರಬೇಕಾಗಿತ್ತು. ಶ್ರಾದ್ಧದ ನಡುವೆ ಅವರ 'ಮಹಾಭೋಜನ'ದ ಕಾರ್ಯಕ್ರಮವಿರುತ್ತಿತ್ತು. ಐದೈದು ಬಾಳೆ ಎಲೆಗಳನ್ನು ಅಡ್ಡಡ್ಡ ಕತ್ತರಿಸಿ, ಚೌಕಾಕಾರವಾಗಿ ಜೋಡಿಸಿ,

ಅವುಗಳ ಮೇಲೆ ಆ ಬ್ರಾಹ್ಮಣರಿಗೆ ಬಡಿಸಲಾಗುತ್ತಿತ್ತು. ಅವರು ಬಕಾಸುರರಂತೆ ಬೆವರು ಸುರಿಸುತ್ತ ಬಡಿಸಿದಷ್ಟನ್ನೂ ಕಬಳಿಸುತ್ತಿದ್ದರು. ಒಂದು ದೊನ್ನೆ ತುಂಬ ತುಪ್ಪ ಬಡಿಸಿದ್ದರೆ, ಅದನ್ನು ಖಾಲಿ ಮಾಡಿ ದೊನ್ನೆ ತುಪ್ಪ ಹೀರುತ್ತಿದ್ದರು. ರಾಶಿ ರಾಶಿ ಅನ್ನವನ್ನು ಕರಗಿಸುವ ಅವರ ಶಕ್ತಿ ಸಾಮರ್ಥ್ಯಗಳನ್ನು ಜ್ಞಾಪಿಸಿಕೊಂಡಾಗ ಈಗಲೂ ನನಗೆ ದಿಗ್ಭ್ರಮೆಯಾಗುತ್ತದೆ.

ಅಂತೂ ತಿಥಿ ಮುಗಿದು, ಮೊದಲ ಪಂಕ್ತಿಯ ಊಟಕ್ಕೆ ಎಲೆಹಾಕುವಾಗ ಸಂಜೆ ಐದು ಗಂಟೆ. ತಿಥಿಯೂಟಕ್ಕೆ ಬಂದವರೆಲ್ಲ ಹಸಿವಿನಿಂದ ಕಂಗೆಟ್ಟು ಅರ್ಧಜೀವವಾಗಿರುತ್ತಿದ್ದರು. ಮಕ್ಕಳೇನೋ ಬಾಳೆಹಣ್ಣನ್ನೋ ಹಲಸಿನ ತೊಳೆಯನ್ನೋ ಅಥವಾ ಬೆಳಿಗ್ಗೆ ತಿಂಡಿಗೆ ಮಾಡಿದ ಉಪ್ಪಿಟ್ಟನ್ನೋ ತಿಂದುಕೊಂಡು ಜೀವ ಉಳಿಸಿಕೊಳ್ಳುತ್ತಿದ್ದವು. ಆದರೆ ದೊಡ್ಡವರಿಗೆ ಆಗಾಗ ಸಿಗುವ ಲಿಂಬೆಹಣ್ಣಿನ ಪಾನಕವೇ ಗತಿ. ಅವರಿಗೆ ಕಾಲ ಕಳೆಯುವುದೂ ಕಷ್ಟ. ಏಕೆಂದರೆ ಅಜ್ಜಯ್ಯನ ಮನೆಯಲ್ಲಿ ಇಸ್ಪೀಟ್ ಆಟ ಸಂಪೂರ್ಣ ನಿಷಿದ್ಧವಾಗಿತ್ತು. ಮಕ್ಕಳಾದರೆ ಕುಟ್ಟಿದೊಣ್ಣೆ, ಪಗಡೆ, ಚೆನ್ನೆ-ಹೀಗೆ ಏನನ್ನಾದರೂ ಆಡುತ್ತ ಕಾಲ ಕಳೆಯುತ್ತಿದ್ದುವು, ಇಲ್ಲವಾದರೆ ಜಾಗ ಸಿಕ್ಕಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದವು.

ಅಜ್ಜಯ್ಯನೂ ಅವರ ಅಕ್ಕತಂಗಿಯರೂ ಕಾಗೆಗಳಿಗೆ ಎಲೆಯಿಟ್ಟು, ಅವುಗಳ ಬರವನ್ನು ಕಾಯುತ್ತ ನಿಲ್ಲುತ್ತಿದ್ದರು. ಎಲ್ಲರಿಗೂ, ಬರುವ ಕಾಗೆಗಳು ತಾವು ಇಟ್ಟ ಎಲೆಯ ಮೇಲಿನ ಅನ್ನವನ್ನೇ ಮೊದಲು ಮುಟ್ಟಲಿ ಎಂಬ ಬಯಕೆ. ಕಾಗೆಗಳು ಯಾರು ಇಟ್ಟ ಎಲೆಯನ್ನು ಮೊದಲು ಮುಟ್ಟುತ್ತವೋ, ಅವರು ಪಿಜ್ಜಯ್ಯನಿಗೆ ಅತ್ಯಂತ ಪ್ರೀತಿಪಾತ್ರರು ಎಂದು ಅವರೆಲ್ಲ ನಂಬಿದ್ದುದೇ ಇದಕ್ಕೆ ಕಾರಣವಾಗಿತ್ತು.

ಮೊದಲ ಪಂಕ್ತಿಯ ಊಟ ಪ್ರಾರಂಭವಾಗುವ ವೇಳೆಗೆ, ಬಂದವರಿಗೆ ಊಟದ ಮೇಲಿನ ಆಸಕ್ತಿಯೇ ಪೂರ್ತಿ ಕುಂದಿಹೋಗಿ, ಯಾವ ಭಕ್ಷ್ಯಭೋಜ್ಯಗಳೂ ಬೇಡ ಎನಿಸುತ್ತಿತ್ತು. ಆದ್ದರಿಂದಲೇ ಇರಬೇಕು; ವಡೆ, ಲಾಡು ಇತ್ಯಾದಿಗಳನ್ನು ಬಡಿಸಲು ಬಂದಾಗ, ಅವರು ಎಲೆಗೆ ಬಡಿಸಿಕೊಳ್ಳದೆ ಎಡಗೈ ಮುಂದೆ ಚಾಚಿ ಅವುಗಳನ್ನು ತೆಗೆದುಕೊಂಡು, ತಮ್ಮ ತಮ್ಮ ಮನೆಗಳಿಗೆ ಕೊಂಡೊಯ್ಯುತ್ತಿದ್ದರು.

ಎರಡನೆಯ ಪಂಕ್ತಿಯ ಊಟದ ಕಾರ್ಯಕ್ರಮ ಸೀಮೆ ಎಣ್ಣೆಯ ದೀಪಗಳ ಮಂದ ಬೆಳಕಿನಲ್ಲಿ. ಆದ್ದರಿಂದ ಮತ್ತೆ ರಾತ್ರಿ ಊಟದ ರಿವಾಜೇ ಇರುತ್ತಿರಲಿಲ್ಲ, ಅಗತ್ಯವೂ ಇರುತ್ತಿರಲಿಲ್ಲ. ಸಿಹಿ ತಿಂಡಿಗಳು ಮತ್ತೆ ನಾಲ್ಕಾರು ದಿನ ಡಬ್ಬಗಳಲ್ಲಿ ಉಳಿಯುತ್ತಿದ್ದವು. ಅಪ್ಪಯ್ಯ-ಅಮ್ಮನನ್ನು ಬಿಟ್ಟರೆ ಉಳಿದ ನಾವು-ಮಕ್ಕಳು-ಮನೆಗೆ ಹಿಂದಿರುಗುತ್ತಿದ್ದುದು ಆ ಡಬ್ಬಗಳೆಲ್ಲ ಖಾಲಿಯಾದ ಮೇಲೆಯೇ.

ಪಿಜ್ಜಯ್ಯನ ತಿಥಿಯ ಇಡೀದಿನ ಮನೆಯ ಒಂದು ಮೂಲೆಯಲ್ಲಿ ನಿಸ್ತೇಜವಾಗಿ, ಮೂಕಳಾಗಿ ಕುಳಿತಿರುತ್ತಿದ್ದ ಪಿಜ್ಜಿಯನ್ನೂ ನೆನಪಿಸಿ ಕೊಳ್ಳಲೇಬೇಕು. ತನ್ನ ಆರನೆಯ ವಯಸ್ಸಿನಲ್ಲಿ ಹತ್ತು ವರ್ಷದ ಹುಡುಗನನ್ನು ಮದುವೆಯಾದ ಅವಳು ಅರ್ಧ ಶತಮಾನ ಕಾಲ ತುಂಬು ದಾಂಪತ್ಯವನ್ನೂ ಮತ್ತೆ ಸುಮಾರು ೪೦-೪೫ ವರ್ಷಗಳ ಕಾಲ ವೈಧವ್ಯವನ್ನೂ ಅನುಭವಿಸಿ, ಶತಾಯುಷಿಯಾಗಿ ನಿಧನಳಾದಳು. ಅಜ್ಜಯ್ಯನ ಮನೆಗೆ ಹೋದ ಮೊಮ್ಮಕ್ಕಳು- ಮರಿಮಕ್ಕಳಿಗೆಲ್ಲ ಪಿಜ್ಜಿ ಪ್ರಮುಖ ಆಕರ್ಷಣೆಯಾಗಿರುತ್ತಿದ್ದಳು. ಅವಳು ನೆನಪಿಸಿಕೊಂಡು ಹೇಳುತ್ತಿದ್ದ ಹತ್ತೊಂಬತ್ತನೆಯ ಶತಮಾನದ ಕೊನೆಕೊನೆಯ ದಶಕಗಳ ಸ್ಥಿತಿಗತಿಗಳು ನಮಗೆ ತುಂಬ ಆಶ್ಚರ್ಯವನ್ನು ಉಂಟುಮಾಡುತ್ತಿದ್ದುವು. ಆದ್ದರಿಂದಲೇ ಆ ಪಿಜ್ಜಿ ಸತ್ತಾಗ ನಮಗೆಲ್ಲ ಮಹತ್ತಾದುದೇನನ್ನೋ ಕಳೆದುಕೊಂಡ ಅನುಭವ.

ಹೀಗೆ, ಅಜ್ಜಯ್ಯ ಮಾಡುತ್ತಿದ್ದ ಪಿಜ್ಜಯ್ಯನ ತಿಥಿ ನನ್ನ ನೆನಪಿನಲ್ಲಿ ಅವಿಸ್ಮರಣೀಯವಾದ ಘಟನೆಯಾಗಿ ಉಳಿದಿದೆ. ಪ್ರತಿವರ್ಷ ಹೊಸ ಪಂಚಾಂಗ ಬಂದೊಡನೆ ನಾವು, 'ಈ ವರ್ಷ ಪಿಜ್ಜಯ್ಯನ ತಿಥಿ ಯಾವ ದಿನ ಬರುತ್ತದೆ ಹೇಳಿ' ಎಂದು ಅಪ್ಪಯ್ಯನನ್ನು ಕೇಳಿ ಆ ದಿನವನ್ನು ಗುರುತು ಹಾಕಿಕೊಳ್ಳುತ್ತಿದ್ದೆವು ಎಂದರೆ ಸಾಕಲ್ಲ- ಅದು ನಮ್ಮ ಪಾಲಿಗೆ ಎಂತಹ ಸಂಭ್ರಮದ ಅವಿಸ್ಮರಣೀಯ ದಿನವಾಗಿರುತ್ತಿತ್ತು ಎಂಬುದನ್ನು ಅರಿಯಲು? ●

# ಯೋಗ್ಯತೆ!

ನಾಗಾರ್ಜುನರು ಆಯುರ್ವೇದದ ಮಹಾನ್ ಆಚಾರ್ಯರಲ್ಲೊಬ್ಬರು. ಒಂದೊಮ್ಮೆ ತಮ್ಮ ಪ್ರಯೋಗಶಾಲೆಯ ಸಹಾಯಕ ಹುದ್ದೆಗೆ ಹುಡುಗರನ್ನು ಆಯ್ದುಕೊಳ್ಳಬಯಸಿದರು. ಇದ್ದವರು ಇಬ್ಬರು ಅಭ್ಯರ್ಥಿಗಳು.

ಅವರಿಬ್ಬರಿಗೂ ನಾಗಾರ್ಜುನರು ಪದಾರ್ಥಕವೊಂದನ್ನು ಕೊಟ್ಟು, "ಎರಡು ದಿನಗಳೊಳಗಾಗಿ ಮನೆಯಲ್ಲಿ ಅದರ ರಸಾಯನವನ್ನು ತಯಾರಿಸಿಕೊಂಡು ಬನ್ನಿರಿ" ಎಂದು ಹೇಳಿ ಕಳುಹಿಸಿದರು.

ಎರಡು ದಿನಗಳು ನಂತರ ಅಭ್ಯರ್ಥಿಯೊಬ್ಬ ಕೈಯಲ್ಲೊಂದು ಭರಣಿ ಹಿಡಿದುಕೊಂಡು ನಾಗಾರ್ಜುನರ ಎದುರು ಬಂದ. ಅವರ ಪೀಠದೆದುರು ಭರಣಿಯನ್ನಿರಿಸಿ ನಿಂತ. "ರಸಾಯನವನ್ನು ತಯಾರಿಸುವಾಗ ಏನೂ ವಿಶೇಷ ಅಡಚಣೆಯಾಗಲಿಲ್ಲವಷ್ಟೇ?" ಆಚಾರ್ಯರು ಆತನನ್ನು ಪ್ರಶ್ನಿಸಿದರು.

"ಆಚಾರ್ಯ, ಅಡಚಣೆಗಳು ಒಂದೆರಡೆ? ನನ್ನವ್ವನಿಗೆ ವಿಪರೀತ ಜ್ವರ. ಅಪ್ಪನಂತೂ ಹೊಟ್ಟೆ ನೋವೆಂದು ಒದ್ದಾಡುತ್ತಲಿದ್ದ. ಚಿಕ್ಕ ತಮ್ಮನಿಗೆ ಕಾಲಿನ ಮೂಳೆ ಮುರಿಯಿತು.... ಆದರೂ ನಾನು ರಸಾಯನ ತಯಾರಿಯ ಸಾಧನೆಯಿಂದ ವಿಚಲಿತನಾಗಲಿಲ್ಲ" ಎಂದ. ಆತನ ಸ್ವರದಲ್ಲಿ ಗರ್ವ ತುಂಬಿತ್ತು.

ನಾಗಾರ್ಜುನರು ಕೇವಲ ನಕ್ಕರು. ಅಷ್ಟೇ.

ಕೆಲ ಹೊತ್ತಿನ ಬಳಿಕ ಇನ್ನೊಬ್ಬ ಅಭ್ಯರ್ಥಿಯೂ ಬಂದ. ಖಾಲಿ ಕೈಯಿಂದ ಆಗಮಿಸಿದ ಆತನನ್ನು ಆಚಾರ್ಯರು ತದೇಕಚಿತ್ತರಾಗಿ ದಿಟ್ಟಿಸಿದರು.

"ಆಚಾರ್ಯರು ಕ್ಷಮಿಸಬೇಕು. ರಸಾಯನವನ್ನು ತಯಾರಿಸಲು ನನ್ನಿಂದ ಆಗಲಿಲ್ಲ," ಎಂದು ತಲೆತಗ್ಗಿಸಿ ನಿಂತ.

"ಯಾಕೆ? ಏನು ತೊಂದರೆ?"

"ಆಚಾರ್ಯ, ನಾನಿಲ್ಲಿಂದ ಮನೆಗೆ ಮರಳುತ್ತಿರುವ ಸಂದರ್ಭದಲ್ಲಿ ರಸ್ತೆಯಲ್ಲೊಬ್ಬ ಅಸ್ವಸ್ಥ ಮುದುಕ ಕಂಡ. ಬಡತನ-ಅಸಹಾಯಕತೆಗಳಿಂದಾಗಿ ಇನ್ನಷ್ಟು ಜರ್ಜರಿತಗೊಂಡಿದ್ದ. ಈ ಎರಡು ದಿನ ನಾನು ಆತನ ಸೇವೆಯಲ್ಲೇ ತೊಡಗಿದ್ದೆ. ನಿಮ್ಮ ಆಣತಿಯಂತೆ ರಸಾಯನವನ್ನು ತಯಾರಿಸಲು ಆಗಲಿಲ್ಲ. ದಯವಿಟ್ಟು ನನಗೆ ಇನ್ನು ಎರಡು ದಿನಗಳ ಅವಕಾಶ ನೀಡಬೇಕೆಂದು ಕೋರಿಕೊಳ್ಳಲು ಬಂದಿರುವೆ," ಆತ ವಿವರಿಸಿದ.



ನಾಗಾರ್ಜುನರ ಮುಖ ಗಂಭೀರವಾಯಿತು. ಅನಂತರ ಮೊದಲ ಅಭ್ಯರ್ಥಿಯೆಡೆ ಹೊರಳಿ, "ಹೂಂ, ನೀನು ಹೊರಡಬಹುದು. ನಾನು ಅಭ್ಯರ್ಥಿಯನ್ನು ಆಯ್ದುಕೊಂಡಾಗಿದೆ. ಇವನೇ ಆ ಅಭ್ಯರ್ಥಿ. ರಸಾಯನ ಜೀವನ ರಕ್ಷೆಗಾಗಿಯೇ ಇರುವಂಥದು. ಒಂದು ವೇಳೆ ಅದನ್ನು ತಯಾರಿಸುವಾತ ಜೀವನ ರಕ್ಷೆಯ ಉದ್ದೇಶದಿಂದ ವಿಮುಖನಾದರೆ ಆತನನ್ನು 'ಯೋಗ್ಯ'ನೆಂದು ಭಾವಿಸುವುದಾದರೂ ಹೇಗೆ?"

ನಾಗಾರ್ಜುನಾಚಾರ್ಯರ ಈ ಮಾತು ಇಂದಿನ ಔಷಧಿ ತಯಾರಕರನ್ನು ಎಚ್ಚರಿಸೀತೆ?

• ಕಮಲಾಕಾಂತ



## ವಿದ್ಯಾರ್ಥಿ ಅಂಕಣ

# ವಿಚಿತ್ರ ನದಿಗಳು

ಅಲ್ಜೀರಿಯಾದಲ್ಲಿ ಕಪ್ಪು ನೀರಿನ ನದಿಯೊಂದಿದೆ. ಬಣ್ಣ ಮತ್ತು ಗುಣ ಧರ್ಮದಲ್ಲಿ ಆ ನೀರು ಮಸಿಯಂತೆಯೇ ಇದೆ. ಆ ನೀರಿನಲ್ಲಿ ಸೀಸ, ಕಬ್ಬಿಣದ ಆಕ್ಸಾಯಿಡ್‌ಗಳು ಸೇರಿಕೊಂಡಿವೆ. ಮಸಿಯನ್ನು ಮಾಡಲು ಈ ನೀರನ್ನೇ ಉಪಯೋಗಿಸುತ್ತಾರೆ. ಕೆಲವು ವೇಳೆ ಮಸಿಯ ಬದಲಾಗಿ ಈ ನೀರನ್ನೇ ಉಪಯೋಗಿಸುವಷ್ಟು ಆ ನೀರು ಕಪ್ಪಾಗಿದೆ.

ಲೆಬನಾನ್‌ನಲ್ಲಿರುವ 'ನಹರ್-ಎಲ್-ಆರೂಸ್' ಎಂಬ ನದಿ ತುಂಬಾ ವಿಚಿತ್ರವಾಗಿದೆ. ಈ ನದಿಯಲ್ಲಿ ವಾರದಲ್ಲಿ ಆರು ದಿನ ಮಾತ್ರ ನೀರಿರುತ್ತದೆ. ಆದರೆ ಏಳನೇ ದಿನ ನೀರೇ ಇರುವುದಿಲ್ಲ!

ಅರ್ಜೆಂಟಿನಾ ಮತ್ತು ಚಿಲಿ ದೇಶಗಳ ಗಡಿಯಲ್ಲಿರುವ ಒಂದು ನದಿಗೆ ನಿಂಬೆಹಣ್ಣಿನ ರಸದ ರುಚಿ ಇದೆ. ಈ ನದಿಯ ನೀರಿಗೆ ಸಕ್ಕರೆ ಬೆರೆಸಿದರೆ ಪಾನಕ ತಯಾರಾಗುತ್ತದೆ.

ಶರಬತ್‌ನಷ್ಟು ಸಿಹಿಯಾದ ನೀರಿರುವ ಒಂದು ನದಿ ಅಮೆರಿಕಾದ ನೆಬ್ರಾಸ್ಕಾ ರಾಜ್ಯದಲ್ಲಿದೆ. ಈ ನೀರು ಎಷ್ಟು ಸಿಹಿಯಾಗಿದೆಯೆಂದರೆ ಅದನ್ನು ಶೈತ್ಯೀಕರಿಸಿದರೆ ಸಕ್ಕರೆಯಂತಹ ಹರಳುಗಳು ದೊರೆಯುತ್ತವೆ.

'ಪೈಕ್ಸಾಗುಲಾ' ಎಂಬುದು 'ಮಿಸಿಸ್ಸಿಪ್ಪಿ'ಯ ಒಂದು ಉಪನದಿ. ಸಾಯಂಕಾಲವಾಗುತ್ತಲೇ ಈ ನದಿಯಿಂದ ಮಧುರ ಸಂಗೀತದ ಸ್ವರ ಕೇಳಿ ಬರುತ್ತದೆ. ಇಂದಿಗೂ ವಿಜ್ಞಾನಿಗಳಿಗೆ ಇದು ಬಿಡಿಸಲಾರದ ಸವಾಲಾಗಿಯೇ ಉಳಿದಿದೆ.

ಕೋಲಂಬಿಯಾದಲ್ಲಿ ಎಲರಿಯೋ ಮಿನೇಗರ್ ಎಂಬ ನದಿ ಒಂದು ಜ್ವಾಲಾಮುಖಿಯ ಬಳಿಯೇ ಹರಿಯುವುದರಿಂದ ಈ ನೀರಿನಲ್ಲಿ ಸಲ್ಫೂರಿಕ್ ಹಾಗೂ ಹೈಡ್ರೋಕ್ಲೋರಿಕ್ ಆಮ್ಲಗಳು ಸೇರಿಕೊಂಡಿವೆ. ಆದ್ದರಿಂದ ಈ ನೀರಿನಲ್ಲಿ ಮೀನುಗಳು ಮತ್ತು ಇತರ ಜಲಚರಗಳು ಬದುಕುವುದೇ ಇಲ್ಲ.

ಪೂರ್ವ ಆಫ್ರಿಕದಲ್ಲಿರುವ 'ಎಂಗಾರಿ ನೀವುಟ್' ಎಂಬ ನದಿಯ ನೀರು ತುಂಬಾ ಕಹಿಯಾಗಿದೆ. ಆದರೆ ಈ ನೀರನ್ನು ಪ್ರಾಣಿಗಳು ಕುಡಿದರೆ ಅವುಗಳ ಮೇಲೆ ದುಷ್ಪರಿಣಾಮಗಳೇನೂ ಆಗದು.

ಸಂಗ್ರಹ. ಎಚ್. ಆರ್. ವಸ್ತ್ರದ

# ಜ್ಞಾನನಿಧಿ




- ಭಯಾನಕ ಕಥಾವಸ್ತುವಿನಿಂದಾಗಿ 'ಎ' ಸರ್ಟಿಫಿಕೇಟ್ ಪಡೆದ 'ನಗೀನಾ'ವನ್ನೊಮ್ಮೆ ನೋಡುವ ಮನಸ್ಸಾಗಿ ನಟಿ ನೂತನ್ ಚಿತ್ರಮಂದಿರಕ್ಕೆ ಹೋದರೆ ಪ್ರಾಪ್ತ ವಯಸ್ಕಳಲ್ಲ ಎಂದು ಪ್ರವೇಶವನ್ನು ನಿರಾಕರಿಸಲಾಯಿತು. ಆದರೆ ಆ ಚಿತ್ರದಲ್ಲಿ ನಾಯಕಿಯಾಗಿ ನಟಿಸಿದ ವಳೇ ಈಕೆ ಎಂದು ಆ ಸಿನೆಮಾ ಗೃಹದವರಿಗಾದರೂ ಹೇಗೆತಾನೆ ಗೊತ್ತಾಗಬೇಕು? ಆಗ ನೂತನ್‌ಗೆ ಬರಿ ಹದಿನಾರು ವರ್ಷ. ಚಿತ್ರರಂಗಕ್ಕೆ ಅವಳನ್ನು ಪರಿಚಯಿಸಿ ತಾರಾ ಪಟ್ಟವನ್ನು ಗಟ್ಟಿಮಾಡಿದ ಚಿತ್ರವೇ 'ನಗೀನಾ.'
- 'ಅಫಸಾನಾ ಲಿಖ್ ರಹೀ ಹೂಂ' ಇಂದಿಗೂ ಸಂಗೀತ ಪ್ರಿಯರ ಮನಸ್ಸನ್ನು ಸೂರೆಗೊಳ್ಳುತ್ತಿರುವ ಹಾಡು. 'ದರ್ದ್' ಚಿತ್ರದಲ್ಲಿ ಅದನ್ನು ಹಾಡಿರುವವಳು ಉಮಾದೇವಿ. ಕಂಡವರಲ್ಲಿ ನಗೆಯುಕ್ಕಿಸುವ ಹಾಸ್ಯನಟಿ 'ಟುನ್‌ಟುನ್'ಳೇ ಈ ಉಮಾದೇವಿ ಎಂಬುದು ಎಷ್ಟು ಜನಕ್ಕೆ ಗೊತ್ತಿದೆ?
- ಶಂಕರ-ಜೈಕಿಶನ್ ಸಂಗೀತ ನಿರ್ದೇಶನದ 'ಚೋರಿ ಚೋರಿ' ಚಿತ್ರದ ಗೀತೆ 'ರಸಿಕ ಬಲಮಾ, ದಿಲ್‌ಕೋ ಲಗಾಯೆ' ಎಷ್ಟು ಸಲ ಕೇಳಿದರೂ ಮತ್ತೆ ಕೇಳಬೇಕೆನಿಸುವ ಹಾಡು. 'ಚಿತ್ರಜಗತ್ತಿನ ಮೊಗಲ್' ಎಂದೇ ಎನಿಸಿಕೊಂಡ ದಿವಂಗತ ಮೆಹಬೂಬರಿಗೂ ಹಾಗೆಯೇ ಆಯಿತು. ಅನಾರೋಗ್ಯದಿಂದ ಹಾಸಿಗೆಹಿಡಿದಿದ್ದ ಅವರು ಚಿತ್ರದಲ್ಲಿ ಆ ಹಾಡು ಹಾಡಿದ ಲತಾ ಮಂಗೇಶಕರರಿಂದಲೇ ಮತ್ತೊಮ್ಮೆ ಆ ಹಾಡನ್ನು ಕೇಳಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿ ಅವರಿಗೆ ಫೋನ್‌ಮಾಡಿದರು. ಮುಂದೆ ಒಂದು ವಾರದ ವರೆಗೂ ಪ್ರತಿದಿನ ಗೊತ್ತಾದ ವೇಳೆಗೆ ಸರಿಯಾಗಿ 'ಚಿತ್ರಜಗತ್ತಿನ ನೈಟಿಂಗೇಲ್' ಆ ಹಾಡನ್ನು ಫೋನ್ ಮೂಲಕ ಮೆಹಬೂಬರಿಗಾಗಿ ಹಾಡಿದರಂತೆ.
- ನಟನಾಗಿ ಮೆರೆದ ಕಿಶೋರ್‌ಕುಮಾರ್ ಹುಟ್ಟಿದಾಗ ಅವನ ಸ್ವರ ಎಷ್ಟು ಕರ್ಕಶವಾಗಿತ್ತೆಂದರೆ ಎಲ್ಲರೂ ಅವನನ್ನು 'ಬೇಸೂರ್' (ಅಪಸ್ವರ) ಎಂದೇ ಕರೆಯುತ್ತಿದ್ದರಂತೆ. ಹೀಗಾಗಿ ಮುಂದೊಂದು ದಿನ ಆತ ಚಿತ್ರ ಜಗತ್ತಿನ ಯಶಸ್ವಿ ಹಿನ್ನೆಲೆ ಗಾಯಕನಾಗಬಹುದೆಂಬು

ದನ್ನು ಯಾರಾದರೂ ಆಗ ಊಹಿಸುವುದು ಕೂಡ ಸಾಧ್ಯವಿರಲಿಲ್ಲ. ಆದರೆ ಆಕಸ್ಮಿಕ ಘಟನೆಯೊಂದು ಪವಾಡವನ್ನೇ ನಡೆಸಿತ್ತು.

ಕಿಶೋರ್ ಐದು ವರ್ಷದವನಿದ್ದಾಗ ಓಡಿಬಂದ ಭರದಲ್ಲಿ ತಾಯಿ ಗೌರೀದೇವಿ ತರಕಾರಿ ಹೆಚ್ಚುತ್ತಿದ್ದ ಚಾಕು ತಾಗಿ ಕಾಲಿನ ಬೆರಳಿಗೆ ಗಾಯವಾಯಿತು. ನೋವಿನಿಂದ ಎದೆಗೂಡು ಕಿತ್ತಿಬರುವಂತೆ ಕೂಗಿದ ಕಿಶೋರ. ಪ್ರತಿಸಲ ಕಾಲಿಗೆ ಬ್ಯಾಂಡೇಜ್ ಹಾಕುವಾಗಲಾಗಲಿ ತೆಗೆಯುವಾಗಲಾಗಲಿ ಆತ ದೊಡ್ಡದಾಗಿ ಅಳುತ್ತಲೇ ಇದ್ದ. ಒಂದು ತಿಂಗಳವರೆಗೂ ಮುಂದುವರೆದ ಅಳು

# ಜ್ಞಾನನಿಧಿ

'ಅಭ್ಯಾಸ'ವಾಯಿತು. ಅಷ್ಟೇ ಏಕೆ, ಮುಂದೆ ಜೀವನವಿಡೀ ಸಂಗೀತಾಭ್ಯಾಸ ಮಾಡಬೇಕಾದ ಪ್ರಮೇಯವೇ ಇಲ್ಲದಂಥ ವರವಾಗಿ ಆ ಅಳು ಮಾರ್ಪಟ್ಟಿತ್ತು. ಆ ಒಂದು ತಿಂಗಳ ಅವಧಿಯಲ್ಲೇ ಅಪ್ರಯತ್ನಿತವಾಗಿ ಕರ್ಕಶಸ್ವರ ಹೊರಟುಹೋಗಿತ್ತು. ಅದು ಅತ್ಯಂತ ವೈವಿಧ್ಯಮಯವಾದ ಕಂಠಶ್ರೀ ಹೊಂದಿದ ಹಿನ್ನೆಲೆ ಗಾಯಕನೆನ್ನಿಸಿಕೊಳ್ಳಲು ಆತನಿಗೆ ನೆರವಾಯಿತು.

• ಟಿ.ಎಸ್. ಲಲಿತ

# ಮಾನವ ದೇಹದಲ್ಲಿ ಏನೇನಿದೆ?

ಫ್ರೆಂಚ್ ಜೀವರಸಶಾಸ್ತ್ರಜ್ಞ ಗೇಬ್ರಿಯಲ್ ಬಂಟ್ರಾಡ್ ಸುಮಾರು ೧೦೦ ಕೆ.ಜಿ. ತೂಗುವ ಮಾನವದೇಹ ಈ ಕೆಳಕಂಡ ವಸ್ತುಗಳನ್ನು ಹೊಂದಿರುತ್ತದೆಯೆಂದು ಲೆಕ್ಕ ಹಾಕಿದ.

ಆಮ್ಲಜನಕ ೬೩ ಕೆ.ಜಿ.
ಇಂಗಾಲ ೧೯ ಕೆ.ಜಿ.
ಜಲಜನಕ ೯ ಕೆ.ಜಿ.
ಸಾರಜನಕ ೫ ಕೆ.ಜಿ.
ಕ್ಯಾಲ್ಸಿಯಂ ೧ ಕೆ.ಜಿ.
ರಂಜಕ ೭೦೦ ಗ್ರಾಂ.
ಗಂಧಕ ೬೪೦ ಗ್ರಾಂ.
ಸೋಡಿಯಂ ೨೬೦ ಗ್ರಾಂ.
ಪೊಟ್ಯಾಸಿಯಂ ೨೨೦ ಗ್ರಾಂ
ಕ್ಲೋರಿನ್ ೧೮೦ ಗ್ರಾಂ.
ಮ್ಯಾಗ್ನಿಶಿಯಂ ೪೦ ಗ್ರಾಂ
ಕಬ್ಬಿಣ ೩ ಗ್ರಾಂ
ಐಯೋಡಿನ್ ೦.೦೩ ಗ್ರಾಂ

ಫ್ಲೋರಿನ್, ಬ್ರೋಮಿನ್, ಮ್ಯಾಂಗನೀಸ್ ಮತ್ತು ತಾಮ್ರ ಇನ್ನೂ ಅಲ್ಪ ಪ್ರಮಾಣದಲ್ಲಿರುತ್ತದೆ. ರಾಸಾಯನಿಕವಾಗಿ ಚಟುವಟಿಕೆಯನ್ನು ತೋರದ ಬಂಗಾರ ಮತ್ತಿತರ ವಸ್ತುಗಳನ್ನೂ ದೇಹದಲ್ಲಿ ಕಾಣಬಹುದು.

• ಬಿ.ಕೆ. ವರದರಾಜ

ಜ್ಞಾನನಿಧಿ

# ಸಾವು ಹೀಗೂ ಬಂದದ್ದುಂಟು

**ಕ್ರಿ.** ಶ. ೧೨೧೦ರಲ್ಲಿ ಉತ್ತರ ಭಾರತದಲ್ಲಿ ಕುತುಬುದ್ದೀನ್ ಐಬಕ್ ಚೌಗಾನ್ (ಪೋಲೋ) ಆಡುವಾಗ ಕುದುರೆಯಿಂದ ಬಿದ್ದು ಸತ್ತ.

ಯಾದವೀ ಯುದ್ಧದಲ್ಲಿ ಸೋತ ರಜಿಯಾ ಸುಲ್ತಾನಾ ಪರಾರಿಯಾಗುವಾಗ ಒಂದು ಕಾಡಿನಲ್ಲಿ ಅವಳು ಹಾಗೂ ಅವಳು ವಿವಾಹವಾಗಿದ್ದ ಭಟಿಂಡಾದ ರಾಜ್ಯಪಾಲ ಅಲ್ತೂನಿಯಾ ನಿದ್ದೆ ಮಾಡುತ್ತಿದ್ದರು. ಆಗ ಕೆಲವು ಡಾಕೂಗಳು ಇವರನ್ನು ಕೊಂದುಹಾಕಿದರು.

ಅಲ್ಲಾವುದ್ದೀನನ ಚಿಕ್ಕ ತಮ್ಮ ಲುಗ್‌ಖಾನನು ಜಲಾಲುದ್ದೀನ್ ಖಿಲ್ಜಿಯನ್ನು ಕಡಾ ಎಂಬ ಸ್ಥಳಕ್ಕೆ ಆಮಂತ್ರಿಸಿದ. ಸುಲ್ತಾನನು ಬಂದಾಗ ಅವನ ಅಳಿಯ ಹಾಗೂ ತಮ್ಮನ ಮಗನಾದ ಆತ ಸುಲ್ತಾನನ ಸಮ್ಮುಖದಲ್ಲಿ ಬಗ್ಗಿ ನಿಂತು ಸಲಾಮ್ ಮಾಡಿದ. ಹಾಗೆ ಸಲಾಮ್ ಮಾಡುವಾಗ ತನ್ನ ಅನುಯಾಯಿ ಮಹಮ್ಮದ್ ಸಲೀಮನಿಗೆ ಸಂಕೇತ ನೀಡಿದ. ಅವನು ಸುಲ್ತಾನನಿಗೆ ಎರಡು ಸಲ ಹೊಡೆದ. ನಂತರ ಇನ್ನೊಬ್ಬ ಅನುಯಾಯಿ ಸುಲ್ತಾನನ ಕತ್ತನ್ನು ಕತ್ತರಿಸಿಹಾಕಿದ. ಜಲಾಲುದ್ದೀನ್ ಸತ್ತುಬಿದ್ದ.

ಸುಲ್ತಾನ್ ಗಿಯಾಸುದ್ದೀನ್ ತುಘಲಖ್ ಬಂಗಾಲದ ಮೇಲೆ ಆಕ್ರಮಣ ಮಾಡಿದ ನಂತರ ದಿಲ್ಲಿಗೆ ಹಿಂದಿರುಗಿ ಬರುತ್ತಿದ್ದ. ಮುಹಮ್ಮದ್ ತುಗಲಖ್ ಇವನ ಸ್ವಾಗತಕ್ಕಾಗಿ ತರಾತುರಿಯಲ್ಲಿ ಕಟ್ಟಿಗೆಗಳಿಂದ ಪೆಂಡಾಲ್ ತಯಾರಿಸಲು ಆದೇಶ ನೀಡಿದ. ಯುದ್ಧದಲ್ಲಿ ಗೆದ್ದ ಅಪಾರ ಸಂಪತ್ತನ್ನು ಆನೆಗಳ ಮೇಲೆ ಹೇರಿಕೊಂಡು ಈ ಪೆಂಡಾಲ್‌ಗಳ ಕೆಳಗೆ ಬಂದಾಗ ಈ ಪೆಂಡಾಲ್ ಮುರಿದು ಬಿತ್ತು. ಅದರ ಭಾರತಾಳಲಾರದೆ ಗಿಯಾಸುದ್ದೀನ್ ತುಗಲಖ್‌ನೂ ಸತ್ತುಬಿದ್ದ.

ಶೇರ್ ಷಾ ಸೂರಿ ಬುಂದೇಲ್‌ಖಂಡದ ಹೆಬ್ಬಾಗಿಲು ಎಂದು ಖ್ಯಾತವಾದ ಕೋಟೆಯನ್ನು ಗೆಲ್ಲಲು ಹೊರಟ. ಆಗ ಇದ್ದಕ್ಕಿದ್ದಂತೆ ಒಂದು ತೋಪು ಸಿಡಿದು ಗಾಯಗೊಂಡು ಸತ್ತುಹೋದ.

ಕ್ರಿ.ಶ. ೧೫೫೬ರಲ್ಲಿ ಹುಮಾಯೂನ್ ದಿಲ್ಲಿಯಲ್ಲಿ ತನ್ನ ಕೋಟೆಯಲ್ಲಿನ ಪುಸ್ತಕಾಲಯದ ಕಟ್ಟಡದ ಮೊದಲನೇ ಅಂತಸ್ತಿನಿಂದ ಕಾಲುಜಾರಿಬಿದ್ದು ಸತ್ತು ಹೋದ.

ಪಾಣಿಪತ್ ಯುದ್ಧದಲ್ಲಿ ಮೊಗಲರೊಂದಿಗೆ ಸಂಘರ್ಷವಾದಾಗ, ಅಫಘಾನಿಸ್ಥಾನದ ಸೇನೆಯ ಮುಂದಾಳು ಹೇಮೂವಿನ ಕಣ್ಣಿಗೆ ಒಂದು ಬಾಣ ಬಂದು ತಾಗಿತು. ಅದರಿಂದ ನಂಜಾಗಿ ಆತ ಸತ್ತುಹೋದ.

ಅಲಹಾಬಾದಿನ ಮೊಗಲರ ರಾಜ್ಯನಾಗಿದ್ದ ಅಸಫ್‌ಖಾನನೊಂದಿಗೆ ಯುದ್ಧ ಮಾಡುತ್ತಿದ್ದ ಗಢಕಟಂಗಾದ ರಾಣಿ ದುರ್ಗಾವತಿ, ಇನ್ನೇನು ಸೋಲು ಸಂಭವಿಸುತ್ತಿದೆ ಎಂದು ಕಂಡು ಬಂದಾಗ ತನ್ನ ಕಠಾರಿಯಿಂದ ತಾನೇ ಇರಿದುಕೊಂಡು ಯುದ್ಧ ಭೂಮಿಯಲ್ಲಿ ಸತ್ತಳು.

• ಟೇಕಲ್ ಗೋಪಾಲಕೃಷ್ಣ

ಜ್ಞಾನನಿಧಿ

# ಬರಲಿವೆ ಉರುವಲು ಕೋಶಗಳು

• ಜಿ. ಅನಂತನಾರಾಯಣ ಸ್ವಾಮಿ

ಜಗತ್ತಿನಾದ್ಯಂತ ವಾಹನಗಳಿಂದ ವಾಯುಮಂಡಲ ಕಲುಷಿತಗೊಳ್ಳುತ್ತಿರುವುದು ಸಾಮಾನ್ಯವಷ್ಟೆ. ಈ ವಾಯುಮಾಲಿನ್ಯವನ್ನು ತಡೆಗಟ್ಟಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಈ ದಿಸೆಯಲ್ಲಿ ಅಮೆರಿಕದ ವಿಜ್ಞಾನಿಗಳು 'ಉರುವಲು ಕೋಶ'ಗಳನ್ನು ರೂಪಿಸಿದ್ದಾರೆ. ಇವನ್ನು ಅವರು 'ಫ್ಯೂಯಲ್ ಶೆಲ್ಸ್' ಎಂದು ಕರೆದಿದ್ದಾರೆ. ಈ ಕೋಶಗಳಿಂದ ಯಾವುದೇ ಹಾನಿಕಾರಕ ಅನಿಲ ಬಿಡುಗಡೆಗೊಳ್ಳುವುದಿಲ್ಲ. ಇವನ್ನು ಲಾರಿ, ಬಸ್ಸು ಮತ್ತು ಕಾರುಗಳನ್ನು ನಡೆಸಲು ಉಪಯೋಗಿಸಬಹುದಾಗಿದ್ದು ಅನೇಕ ರೀತಿಯಲ್ಲಿ ಹೆಚ್ಚು ಅನುಕೂಲವೆನಿಸಿವೆ. ಇಂತಹ ಕೋಶಗಳನ್ನು ಹಿಂದೆ ಕೃತಕ ಉಪಗ್ರಹಗಳನ್ನು ಬಾಹ್ಯಾಕಾಶಕ್ಕೆ ಕಳಿಸುವಾಗ ಅಳವಡಿಸಲಾಗುತ್ತಿತ್ತು.

ಉರುವಲು ಕೋಶಗಳ ತಾಂತ್ರಿಕತೆ ಬಹಳ ಸರಳವಾಗಿದೆ. ಇದರಲ್ಲಿ ಉಪಯೋಗಿಸುವ ವಸ್ತುಗಳೆಂದರೆ ಜಲಜನಕ ಮತ್ತು ಆಮ್ಲಜನಕ. ಇವೆರಡರ ಘರ್ಷಣೆಯಿಂದ ಶಾಖ ಮತ್ತು ವಿದ್ಯುತ್ತನ್ನು ತಯಾರಿಸಿಕೊಳ್ಳಲಾಗುವುದು. ಅದೇ ಸಮಯದಲ್ಲಿ ಉತ್ಪತ್ತಿಯಾಗುವ ನೀರಾವಿ ವಾಯುಮಂಡಲವನ್ನು ಸೇರುವುದು. ನಮಗೆಲ್ಲ ಗೊತ್ತಿರುವ ಹಾಗೆ ಇದು ವಾಯುಮಂಡಲವನ್ನು ಯಾವ ರೀತಿಯಲ್ಲೂ ಮಲಿನಗೊಳಿಸುವುದಿಲ್ಲ. ಅಲ್ಲದೆ ಅದಕ್ಕೆ ಅಗತ್ಯವಾದ ಜಲಜನಕ ಮತ್ತು ಆಮ್ಲಜನಕಗಳು ಪ್ರಕೃತಿಯಲ್ಲಿ ಹೇರಳವಾಗಿ ದೊರೆಯುವುದರಿಂದ ಕೋಶಗಳ ಕಾರ್ಯನಿರ್ವಹಣೆಗೆ ಯಾವುದೇ ತೊಂದರೆ ಇರುವುದಿಲ್ಲ. ೧೯೬೪ರಲ್ಲಿಯೇ ಕೃತಕ ಉಪಗ್ರಹಗಳಲ್ಲಿ ಇಂತಹ ಉರುವಲುಕೋಶಗಳನ್ನು ಉಪಯೋಗಿಸಲಾಗಿತ್ತು. ೧೮೩೯ರಷ್ಟು ಹಿಂದೆಯೇ ಕಂಡುಹಿಡಿಯಲಾಗಿದ್ದರೂ ಅನೇಕ ವರ್ಷಗಳವರೆಗೆ ಕೇವಲ ಪ್ರಯೋಗಶಾಲೆಗೆ ಮಾತ್ರ ಈ ಕೋಶಗಳ ಉಪಯೋಗ ಸೀಮಿತವಾಗಿತ್ತು.

ಇತ್ತೀಚೆಗೆ ವಿಜ್ಞಾನಿಗಳು ನಾಲ್ಕು ರೀತಿಯ ಉರುವಲುಕೋಶಗಳನ್ನು ರಚಿಸಿದ್ದಾರೆ. ಇದರಲ್ಲಿ ಪ್ರತ್ಯಾಮ್ಲೀಯ ಮಾದರಿಯ ಕೋಶಗಳು 'ಅಪೋಲೋ' ಕಾರ್ಯಕ್ರಮಗಳಲ್ಲಿ ಶಕ್ತಿ ಮತ್ತು ನೀರನ್ನು ಒದಗಿಸಿದವು. ಆದರೆ ಇತ್ತೀಚೆಗೆ ವಿಜ್ಞಾನಿಗಳು ಪ್ರೋಟಾನ್ ಎಕ್ಸ್‌ಚೇಂಜ್ ಮೆಂಬ್ರೇನ್ ಎಂಬ ನವೀನ ರೀತಿಯ ಉರುವಲು ಕೋಶವನ್ನು ರೂಪಿಸಿದ್ದಾರೆ. ಇದರಲ್ಲಿ ಗಂಧಕಾಮ್ಲವನ್ನು ಘನ ಎಲೆಕ್ಟ್ರೋಲೈಟ್‌ನ್ನಾಗಿ ತೆಗೆದುಕೊಂಡು ಅದಕ್ಕೆ 'ಟೆಫ್ಲಾನ್' ಲೇಪಿಸಲಾಗುತ್ತದೆ. ಇಂಗಾಲದ ಋಣ ಮತ್ತು ಧನ ಧ್ರುವಗಳನ್ನು ಈ 'ಟೆಫ್ಲಾನ್'ಗೆ ಬಂಧಿಸಲಾಗುವುದು. ಈ ಧ್ರುವಗಳೆರಡರ ಮೇಲೂ ಪ್ಲಾಟಿನಂಅನ್ನು ವೇಗವರ್ಧಕವನ್ನಾಗಿ ಅಳವಡಿಸಲಾಗುತ್ತದೆ. ಒಂದು ಧ್ರುವಕ್ಕೆ ಜಲಜನಕವನ್ನೂ ಮತ್ತೊಂದಕ್ಕೆ ಆಮ್ಲಜನಕವನ್ನೂ ಒದ

# ಜ್ಞಾನನಿಧಿ

ಗಿಸಿದಲ್ಲಿ ವಿದ್ಯುತ್ತು ಉತ್ಪತ್ತಿಗೊಳ್ಳುವುದೆಂದು ಇದರ ಸಂಶೋಧಕರು ಹೇಳಿದ್ದಾರೆ. ಈ ಕೋಶವು ಕೇವಲ ಅರ್ಧ ಮಿಲಿಮೀಟರ್ ದಪ್ಪ ಇರುತ್ತದೆ. ಜಲಜನಕಕ್ಕೆ ಬದಲಾಗಿ ಮಿಥೈಲ್ ಆಲ್ಕೋಹಾಲನ್ನು ಉಪಯೋಗಿಸಬಹುದೆಂದೂ ವಿಜ್ಞಾನಿಗಳು ಹೇಳಿದ್ದಾರೆ. ಇದು ರಾಸಾಯನಿಕವಾಗಿ ವರ್ತಿಸಿ ಜಲಜನಕವನ್ನು ಬಿಡುಗಡೆಮಾಡುತ್ತದೆ. ಈ ಒಂದು ಸಣ್ಣ ಕೋಶವು ೨೫೦ ಆ್ಯಂಪಿಯರ್‌ಗಳಷ್ಟು ವಿದ್ಯುತ್ತನ್ನು ಉತ್ಪತ್ತಿ ಮಾಡಬಲ್ಲದು. ಇಂತಹ ಅನೇಕ ಕೋಶಗಳನ್ನು ಜೋಡಿಸಿಕೊಳ್ಳುವುದರಿಂದ ಸಾಕಷ್ಟು ವೋಲ್ಟೇಜ್ ಉಳ್ಳ ವಿದ್ಯುತ್ತನ್ನು ಪಡೆಯಬಹುದು. ಕೇವಲ ವಾಹನ ಚಲನೆಗೆ ಅಲ್ಲದೆ ಮನೆ ಬಳಕೆಗೆ ಬೇಕಾಗುವ ವಿದ್ಯುತ್ತನ್ನು ಪಡೆಯಲು ಕೂಡ ಈ ಕೋಶಗಳನ್ನು ಬಳಸಬಹುದು. ಒಂದು ಘನ ಅಡಿ ಪ್ರದೇಶದಲ್ಲಿನ ಈ ಕೋಶಗಳಿಂದ ೨೮ ಕಿಲೋವ್ಯಾಟ್‌ನಷ್ಟು ವಿದ್ಯುತ್ತನ್ನು ಪಡೆಯಬಹುದೆಂದು ಈ ಕೋಶದ ರೂಪಕರಾದ ಫೈರೋಜ್ ರಾಸುಲ್ ಹೇಳಿದ್ದಾರೆ. ಈ ಕೋಶಗಳ ಸಂಖ್ಯೆಯನ್ನು ಹೆಚ್ಚಿಸಿಕೊಂಡಲ್ಲಿ ೨೦೦ ಕಿ.ವ್ಯಾ. ವಿದ್ಯುತ್ತನ್ನು ಪಡೆದು ಆ ಮೂಲಕ ಬಸ್ಸುಗಳನ್ನು ನಾಲ್ಕು ನೂರು ಕಿಲೋಮೀಟರ್ ವರೆಗೂ ಓಡಿಸಬಹುದೆಂದು ಅವರು ತೋರಿಸಿಕೊಟ್ಟಿದ್ದಾರೆ. ಈ ಕೋಶಗಳನ್ನು ಕೇವಲ ಹನ್ನೊಂದು ನಿಮಿಷಗಳಲ್ಲಿ ಮತ್ತೆ 'ತುಂಬಿಸಿ'ಕೊಳ್ಳಬಹುದಾಗಿದೆ. (ಈಗ ಚಾಲ್ತಿಯಲ್ಲಿರುವ ಕೆಲವು ವಿದ್ಯುತ್ ಕೋಶಗಳನ್ನು ಪುನಶ್ಚೇತನಗೊಳಿಸಲು ಎಂಟು ಗಂಟೆ ಬೇಕು) ಈ ಕೋಶಗಳನ್ನು ಸುಲಭವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸಬಹುದು. ಲಾರಿ, ಬಸ್ ಮತ್ತು ಕಾರುಗಳಲ್ಲಿ ಕಡಿಮೆ ಜಾಗದಲ್ಲಿ ಅಳವಡಿಸಬಹುದು. ಶಬ್ದ ಮಾಲಿನ್ಯ ಸಹ ಈ ನವೀನ ಕೋಶಗಳಿಂದ ಉಂಟಾಗುವುದಿಲ್ಲ. ಇನ್ನೆರಡು ವರ್ಷಗಳಲ್ಲಿ ಶಿಕಾಗೋದ ಅನೇಕ ಬಸ್ಸುಗಳಲ್ಲಿ ಇಂತಹ ಕೋಶಗಳನ್ನು ಅಳವಡಿಸಿ, ಅಷ್ಟುಮಟ್ಟಿಗೆ ಪೆಟ್ರೋಲಿನ ವೆಚ್ಚವನ್ನು ಕಡಿಮೆಮಾಡಿಕೊಳ್ಳಲಾಗುವುದೆಂದು ಹೇಳಲಾಗಿದೆ. ಕ್ರಿ.ಶ. ೨೦೦೫ರ ವೇಳೆಗೆ ಮುಂದುವರೆದ ದೇಶಗಳಲ್ಲಿನ ಎಲ್ಲ ರೀತಿಯ ವಾಹನಗಳಲ್ಲಿ ಇಂಥ ಉರುವಲುಕೋಶಗಳನ್ನು ಕಾಣಬಹುದೆಂದು ವಿಜ್ಞಾನಿಗಳು ಹೇಳಿದ್ದಾರೆ. ಇದರಿಂದ ವಾಯು ಮಾಲಿನ್ಯ ಮತ್ತು ಶಬ್ದ ಮಾಲಿನ್ಯದ ಸಮಸ್ಯೆಗಳನ್ನು ಪರಿಹರಿಸಬಹುದಲ್ಲದೆ ಪೆಟ್ರೋಲ್ ಮೇಲಿನ ಒತ್ತಡವನ್ನು ಕಡಿಮೆಗೊಳಿಸಬಹುದು. ಆರ್ಥಿಕವಾಗಿಯೂ ಈ ಕೋಶಗಳು ಲಾಭದಾಯಕ. (ಆಧಾರ) ●

## ನಿಯಾನ್ ದೀಪದ ಮೀನುಗಳು

**ರಾ**ತ್ರಿ ಕಾಲದಲ್ಲಿ ಪಟ್ಟಣದ ಬೀದಿಗಳಲ್ಲಿ ಮಿನುಗುವ ನಿಯಾನ್ ದೀಪದ ಜಾಹಿರಾತು ನೋಡಿದ್ದೀರಲ್ಲವೆ? ಸೂರ್ಯಕಿರಣ ನೀರಮೇಲೆ ಬಿದ್ದಾಗ ದಕ್ಷಿಣ ಅಮೆರಿಕದ ನದಿಗಳಲ್ಲಿ ವಾಸಿಸುವ ಮೀನಿನ ಮೈಮೇಲಿನ ನೀಲಿ ಪಟ್ಟಿಗಳು ಕೂಡ ಹಾಗೆಯೇ ಹೊಳೆಯುತ್ತವೆ. ಆದ್ದರಿಂದ ಈ ಮೀನಿಗೆ ನೀಲ ನಿಯಾನ್ ಟೆಟ್ರ ಮೀನು ಎಂದು ಹೆಸರು. ನದಿಗಳ ಆಳ ಬಹಳವಾಗಿರುವುದರಿಂದ ಸೂರ್ಯ ರಶ್ಮಿ ಇಲ್ಲಿನ ನದಿಗಳ ತಳ ಮುಟ್ಟುವುದೇ ಇಲ್ಲ. ಹೀಗಾಗಿ ಸದಾ ಅಲ್ಲಿ ಕಾರ್ಗತ್ತಲೆ. ಕತ್ತಲೆಯ ವಾಸಕ್ಕೆ ಒಗ್ಗಿರುವ ಈ ಮೀನುಗಳು ಒಂದನ್ನೊಂದು ನೀಲಿ ಪಟ್ಟಿಯಿಂದ ಗುರುತಿಸುತ್ತವೆ.

ಕೆಂಪು ನಿಯಾನ್ ಮೀನುಗಳ ಮೈಮೇಲೆ ಸೂರ್ಯ ರಶ್ಮಿ ಬಿದ್ದರೆ ಕ್ರಿಸ್‌ಮಸ್ ಮರದ ಮೇಲಿನ ದೀಪಗಳಂತೆ ಪ್ರಜ್ವಲಿಸುತ್ತವೆ. ಕತ್ತಲ ಸಾಮ್ರಾಜ್ಯದ ನೀರಿನ ಮಧ್ಯೆ ದೀಪದ ಸರಮಾಲೆಯಂತೆ ಕಾಣಿಸುತ್ತವೆ.

● ಪ್ರಕಾಶ ಎಸ್. ಮನ್ನಂಗಿ

## ಜ್ಞಾನನಿಧಿ

### ಅತಿ ದೊಡ್ಡ ಸೇತುವೆ

ಅರಬ್ಬಿ ಸಮುದ್ರದಲ್ಲಿ ಬಹ್ರೇನ್ ಎಂಬ ಒಂದು ಪುಟ್ಟ ದೇಶವಿದೆ. ಇದು ಸೌದಿ ಅರೇಬಿಯ ಮತ್ತು ಕತಾರ ದೇಶಗಳ ಮಧ್ಯದಲ್ಲಿದೆ. ಈ ಪುಟ್ಟ ದೇಶದ ಕ್ಷೇತ್ರಫಲ ೬೩೦ ಚದರ ಕಿ.ಮಿ. ಮತ್ತು ಉದ್ದ ಕೇವಲ ೨೭ ಕಿ.ಮಿ. ಇಲ್ಲಿ ಆಧುನಿಕ ಯುಗದ ಒಂದು ವಿಸ್ಮಯ ಜರುಗಲಿದೆ. ಅದೇನೆಂದರೆ ೨೫ ಕಿ.ಮಿ. ಉದ್ದದ ಸೇತುವೆಯ ಮೂಲಕ ಬಹ್ರೇನನ್ನು ಸೌದಿ ಅರೇಬಿಯದೊಂದಿಗೆ ಜೋಡಿಸುವುದು. ಒಂದು ವೇಳೆ ಈ ಸೇತುವೆ ಪೂರ್ಣಗೊಂಡರೆ ಇದು ಪ್ರಪಂಚದಲ್ಲಿಯೇ ಅತ್ಯಂತ ಉದ್ದದ ಸೇತುವೆಯಾಗಿ ಪರಿಣಮಿಸಲಾಗುವದು. ಈ ಸೇತುವೆಯ ನಿರ್ಮಾಣ ೧೯೮೨ರಲ್ಲಿ ಆರಂಭಗೊಂಡಿತು. ಸೇತುವೆಯ ಪ್ರತಿಯೊಂದು ಮೀಟರಿನ ನಿರ್ಮಾಣ ವೆಚ್ಚ ಸುಮಾರು ೩೨,೦೦೦ ಡಾಲರುಗಳಂತೆ. ಈ ಸೇತುವೆ ನಿರ್ಮಾಣವಾಗುವದರಿಂದ ಬಹ್ರೇನಿನ ಸಂಪರ್ಕ ಭೂಮಾರ್ಗದ ಮೂಲಕವೂ ಕೊಲ್ಲಿಯ ಇತರ ದೇಶಗಳೊಂದಿಗೆ ಉಂಟಾಗುವುದು. ಇಲ್ಲಿಯೇ ಇನ್ನೊಂದು ಯೋಜನೆಯ ರೂಪರೇಷೆಗಳೂ ಸಿದ್ಧಗೊಳ್ಳುತ್ತಿವೆ. ಈ ಯೋಜನೆಯಂತೆ ೪೦ ಕಿ.ಮಿ. ಉದ್ದದ ಮತ್ತೊಂದು ಸೇತುವೆಯನ್ನು ನಿರ್ಮಿಸಿ ಬಹ್ರೇನನ್ನು ಕತಾರ್‌ನೊಂದಿಗೆ ಜೋಡಿಸುವದು. ಆದರೆ ಸೇತುವೆಗಳ ನಿರ್ಮಾಣದಿಂದ ಸಾಗರ ಪರ್ಯಾವರಣದ ಮೇಲೆ ಏನಾದರೂ ದುಷ್ಪರಿಣಾಮ ಉಂಟಾಗಬಹುದೆ? ಎನ್ನುವ ಬಗ್ಗೆಯೂ ವಿಜ್ಞಾನಿಗಳು ಅಭ್ಯಸಿಸುತ್ತಿದ್ದಾರೆ.

• **ಮುರಲೀಧರ ಕುಲಕರ್ಣಿ**

### ಅಳೆಯುವ ಯಂತ್ರ

ಉತ್ತರ ಪ್ರದೇಶದ ಜೋನ್‌ಪುರ ಜಿಲ್ಲೆಯಲ್ಲಿ ವಾಸಿಸುವ ಮಹಮ್ಮದ್ ಜಾವೇದ್ ಎಂಬ ಯುವಕ ಹೊಸ ವಿದ್ಯುತ್ ಯಂತ್ರವೊಂದನ್ನು ಕಂಡುಹಿಡಿದಿದ್ದಾನೆ. ಈ ಯಂತ್ರದ ಸಹಾಯದಿಂದ ನೀರಿನ ಆಳವನ್ನು ಅಳೆಯಬಹುದು. ಅಲಿಗಢ ವಿಶ್ವವಿದ್ಯಾಲಯದಿಂದ ಬಿ.ಕಾಂ. ಪದವಿ ಪಡೆದಿರುವ ಮಹಮ್ಮದ್ ಜಾವೇದ್ ಹತ್ತು ವರ್ಷಗಳ ಸತತ ಪ್ರಯತ್ನದ ಬಳಿಕ ಎರಡು ಪೆನ್ಸಿಲ್ ಶೆಲ್‌ಗಳಿಂದ ನಡೆಯುವ ಈ ಯಂತ್ರವನ್ನು ತಯಾರಿಸಿದ್ದಾನೆ. ಅದರ ಮೂಲಕ ಒಂದು ಸಣ್ಣ ಟ್ಯಾಂಕಿನಿಂದ ಹಿಡಿದು ಹರಿಯುವ ನದಿಯ ಆಳವನ್ನೂ ಕಡಿಮೆ ವೆಚ್ಚದಲ್ಲಿ ತಿಳಿದುಕೊಳ್ಳಬಹುದು. ಈ ಯಂತ್ರದ ಬೆಲೆ ೧೦೦೦ ರೂಪಾಯಿ ಮಾತ್ರ. ಏಕಮುಖ ವಿದ್ಯುತ್ ಪ್ರವಾಹದಿಂದ ನಡೆಯುವುದರಿಂದ ವಿದ್ಯುದಾಘಾತದ ಅಪಾಯವೂ ಇಲ್ಲ. ಇತರ ದ್ರವ ಪದಾರ್ಥಗಳಾದ ಹಾಲು, ಎಣ್ಣೆ, ರಸಾಯನಗಳ ಮಟ್ಟವನ್ನೂ ನಾವು ಸರಾಗವಾಗಿ ತಿಳಿದುಕೊಳ್ಳಬಹುದು. ಈ ಯಂತ್ರದ ಪೇಟೆಂಟ್ ಮಾಡಿಸುವಲ್ಲಿ ನಿರತರಾಗಿರುವ ಮಹಮ್ಮದ್ ಜಾವೇದ್ ಇದರಿಂದ ಸಮುದ್ರದಾಳವನ್ನೂ ಕಂಡುಹಿಡಿಯಬಹುದೆನ್ನುತ್ತಾರೆ. ಸರಳವಾದ ಈ ಉಪಕರಣದಿಂದ ಕುಳಿತಲ್ಲೇ ನೀರಿನಾಳ ತಿಳಿಯಬಹುದು.

('ಸನ್ಮಾರ್ಗ' ದಿಂದ)

## ಜ್ಞಾನನಿಧಿ

### ಹಣ್ಣುಗಳ ಗುಣ....

ಅನಾನಸ್ ಹಣ್ಣಿನ ರಸಕ್ಕೆ ಮಾರು ಹೋಗದವರು ಯಾರು?

ಅನಾನಸ್ ಹಣ್ಣಿನಲ್ಲಿ ಶೇಕಡಾ ೧೫ರಷ್ಟು ಸಕ್ಕರೆ, ಬ್ರೊಮೋಲಿನ್ ಎಂಬ ಕಿಣ್ವ, ಖನಿಜ ಹಾಗೂ ಆಮ್ಲಗಳು ಇವೆ. ಇವೇ ಅಲ್ಲದೆ ಅನೇಕ ಜೀವ ಸತ್ವಗಳೂ ಈ ಹಣ್ಣಿನಲ್ಲಿವೆ.

ಅನಾನಸ್‌ನಿಂದ ಬೇರ್ಪಡಿಸಿ ತೆಗೆದ ಮ್ಯಾನಿಟಾಲ್ ಎಂಬ ವಸ್ತುವು ಶ್ವಾಸಕೋಶ ಮತ್ತು ಗಂಟಲು ರೋಗಕ್ಕೆ ಉತ್ತಮವಾದ ಔಷಧಿಯಾಗಿದೆ.

ಉಷ್ಣ ಪ್ರಕೃತಿಯವರಿಗೆ ಈ ಹಣ್ಣು ಬಹಳ ಒಳ್ಳೆಯದು. ಗಂಟಲಿನ ರೋಗಗಳನ್ನೂ ಇದು ಶಮನಗೊಳಿಸುವುದು.

ಕಾಮಾಲೆರೋಗಕ್ಕೆ ದಿನಂಪ್ರತಿ ಎರಡು ಸಲ ಅನಾನಸ್ ಹಣ್ಣಿನ ಎರಡು ಹೋಳುಗಳನ್ನು ಜೇನುತುಪ್ಪದಲ್ಲಿ ಕಲಸಿ ತಿನ್ನುತ್ತ ಬಂದರೆ ಕ್ರಮೇಣವಾಗಿ ಗುಣದೊರೆಯುವುದು.

೧೯೭೭ರಲ್ಲಿ ಬ್ರೆಜಿಲ್‌ನಲ್ಲಿ ಬೆಳೆದುಬಂದ ಅನಾನಸ್ ಹಣ್ಣು ಸುಮಾರು ೧೩ ಕಿಲೋಗಳಷ್ಟು ತೂರುತ್ತಿತ್ತಂತೆ. ಇದೇ ದೊಡ್ಡ ಅನಾನಸ್ ಎನ್ನೋಣವೇ?

• ಡಿ. ಎಸ್. ಮಂಜುನಾಥ

## ಜೀವ ವಿಕಾಸದ ಮುಖ್ಯ ಹಂತಗಳು

ಬ್ಯಾಕ್ಟೀರಿಯದಂಥ ಮೂಲ ಜೀವಿಗಳು ಬಹುತೇಕ ೪೦೦ ಕೋಟಿ ವರ್ಷಗಳ ಹಿಂದೆ ಉತ್ಪತ್ತಿಯಾದವು.

೨೦೦ ಕೋಟಿ ವರ್ಷಗಳ ಹಿಂದೆ ಬಹುಕೋಶೀಯ ಪಾಚಿಗಳು ಉದಯಿಸಿದವು. ಅವು ಬಿಡುಗಡೆ ಮಾಡಿದ ಆಮ್ಲಜನಕದಿಂದ ನಿಧಾನವಾಗಿ ಇತರ ಜೀವಿಗಳು ಉದಯಿಸುವಂತಾಯಿತು.

ವಿಕಾಸಗೊಂಡ ಮೊದಲ ಕಶೇರುಕ (ಬೆನ್ನು ಮೂಳೆಯನ್ನು ಹೊಂದಿದವು)ಗಳೆಂದರೆ ಮೀನುಗಳು. ಅವು ೫೦ ಕೋಟಿ ವರ್ಷಗಳ ಹಿಂದೆ ಉದಯಿಸಿದವು.

ಭೂಮಿಯ ಮೇಲೆ ಸಸ್ಯಗಳು ೪೩ ಕೋಟಿ ವರ್ಷಗಳ ಹಿಂದೆ ಬೆಳೆಯಲು ಆರಂಭಿಸಿದವು.

ಭೂಮಿಯ ಮೇಲೆ ಉಭಯಚರಜೀವಿಗಳು ೩೭ ಕೋಟಿ ವರ್ಷಗಳ ಹಿಂದೆ ಉದ್ಭವಿಸಿದವು.

ದೊಡ್ಡ ಪ್ರಾಣಿಗಳು, ಸರೀಸೃಪಗಳು ೩೧ ಕೋಟಿ ವರ್ಷಗಳ ಹಿಂದೆ ಭೂಮಿಯ ಮೇಲೆ ವಿಕಾಸಗೊಂಡವು.

ಆರೂವರೆ ಕೋಟಿ ವರ್ಷಗಳ ಹಿಂದೆ ಪೆಡಂಭೂತಗಳು ನಿರ್ವಂಶವಾದವು. ಇದು ಸಸ್ತನಿಗಳ ಬೆಳವಣಿಗೆಗೆ ಕಾರಣವಾಯಿತು.

ವಾನರಗಳು ೨.೧ ಕೋಟಿ ವರ್ಷಗಳ ಹಿಂದೆ ಉದಯಿಸಿದವು.

ಆಧುನಿಕ ಮನುಷ್ಯ ೫೦,೦೦೦ ವರ್ಷಗಳ ಹಿಂದೆ ವಿಕಾಸಗೊಂಡ.

• ಶಿವಕುಮಾರ ಮುರಗೋಡ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಅಡಮುಟ್ಟ
(ಅ) ಹಳಸಿದ
(ಆ) ತಡೆದುಬಿದ್ದ
(ಇ) ಪ್ರಯತ್ನಶೀಲ
(ಈ) ಕೆಟ್ಟ ನಡತೆಯ

೨. ಅಡಕ
(ಅ) ಮೋಸ
(ಆ) ಆತಂಕ
(ಇ) ಹೊಂದಿಕೆ
(ಈ) ಅಂಗಡಿಯ ಕಟ್ಟೆ

೩. ಅಡಸಲ
(ಅ) ಅತಿಯಾಗಿ ಬೇಯುವುದು
(ಆ) ನೀರಿನ ಧುಮುಕುವಿಕೆ
(ಇ) ಬೇಲಿ
(ಈ) ಅಸಹ್ಯ

೪. ಎಡತರ
(ಅ) ದುರ್ಬಲ
(ಆ) ಮಧ್ಯಮತರ
(ಇ) ಹೆಡ್ಡ
(ಈ) ಎಡ ದಿಕ್ಕಿಗಿರುವ

೫. ಎಡತಾಕು
(ಅ) ಎಡಗಡೆಯಿಂದ ಆಕ್ರಮಿಸು
(ಆ) ಪುನಃ ಪುನಃ ಹೋಗಿ ಬಾ
(ಇ) ಮೋಸ ಮಾಡು
(ಈ) ನಡುವೆ ಬರಿ

೬. ಎಡವಟ್ಟು
(ಅ) ಎಡಬೆರಳು
(ಆ) ಕಾಲಿಗೆ ತಾಗಿಬೀಳು
(ಇ) ಮೂರ್ಖತನ
(ಈ) ಎದ್ದು ಬಿದ್ದು ಓಡು

೭. ವಿತಂದ್ರಿ
(ಅ) ತಂತಿಯಿಲ್ಲದಿರುವುದು
(ಆ) ವಿಧವೆ
(ಇ) ಸರಳತನ
(ಈ) ಎಚ್ಚರಿಕೆ

೮. ವಿಮಾತೆ
(ಅ) ಮಲತಾಯಿ
(ಆ) ಆಳತೆಯಿಲ್ಲದಿರುವಿಕೆ
(ಇ) ಹಾರಾಟ
(ಈ) ಮೂಕಿ

೯. ಸಮವಾಯ
(ಅ) ಸರಿಯಾದ ಅಡಿಗಲ್ಲು
(ಆ) ಸಮೂಹ
(ಇ) ಒಳ್ಳೇ ಉಪಾಯ
(ಈ) ಸುಂದರ ಮುಖ

೧೦. ಮೈದೆಗೆ
(ಅ) ಪ್ರತ್ಯಕ್ಷನಾಗು
(ಆ) ಎದ್ದು ನಿಲ್ಲು
(ಇ) [illegible]
(ಈ) ಹಿಂಜರಿ

೧೧. ಮೈಗರೆ
(ಅ) ಕ್ರೂರೆಯಾಗು
(ಆ) ಮೈಮೇಲೆ ನೀರುಹೊಯ್ಯು
(ಇ) ಶರೀರದ ಅಂಚು
(ಈ) ಶರೀರದ ಹಂಬಲ

೧೨. ಮನ್ವಂತರ
(ಅ) ಬಹಳ ಕಾಲ
(ಆ) ಅವಕಾಶ
(ಇ) ಯುಗ
(ಈ) ಬೇರೆ ಮನುಷ್ಯ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಅಡಮುಟ್ಟ

(ಈ) ಕೆಟ್ಟ ನಡತೆಯ, ಕೆಟ್ಟ ಬಾಳಿಯ, ದುರ್ವರ್ತನೆಯುಳ್ಳ ಮನುಷ್ಯ. ಉದಾ- ಒಳ್ಳೆಯ ಅಡಮುಟ್ಟ ಗಂಟುಬಿದ್ದನಲ್ಲಾ! (ಕನ್ನಡ.)

೨. ಅಡಕ

(ಇ) ಹೊಂದಿಕೆ, ಸರಿಹೋಗುವಿಕೆ, ಹಾಳತ; ಉದಾ- ಈ ಪುಸ್ತಕ ನನ್ನ ಕೈಗೆ ಅಡಕವಾಗಿದೆ. ಒತ್ತಿಕೂಡ್ರಿಸುವಿಕೆ; ಉದಾ- ಇಪ್ಪತ್ತು ಜನ ಕೂಡ್ರುವಲ್ಲಿ ನಲುವತ್ತು ಜನವನ್ನು ಅಡಕ ಮಾಡಿದರು. (ಕನ್ನಡ, ಅಡಗು ಧಾತುವಿನ ನಾಮಪದ ರೂಪ.)

೩. ಅಡಸಲ

(ಅ) ಅತಿಯಾಗಿ ಬೇಯುವುದು; ಉದಾ- ಅನ್ನ ಅಡಸಲವಾಗಿ ಹೋಯಿತು. ಹಸಿಬಿಸಿ (ಕನ್ನಡ-ಅಡು ಧಾತುವಿನಿಂದ.)

೪.ಎಡತರ

(ಅ) ಮಧ್ಯಮ ತರಹ, ಮಧ್ಯಮ ಗಾತ್ರದ; ಸಾಧಾರಣ ವರ್ಗದ. ಉದಾ- ಇದು ನನ್ನ ಎಡತರದ ಸೀರೆ ಅಂದರೆ ತೀರ ಬಲ ಬಾಳುವುದೂ ಅಲ್ಲ, ತೀರ ಕೀಳೂ ಅಲ್ಲದ ವಸ್ತ್ರ. (ಕನ್ನಡ.)

೫. ಎಡತಾಕು

(ಆ) ಪುನಃ ಪುನಃ ಹೋಗಿ ಬಾ, ಓಡಾಡು, ಉದಾ- ಅವನ ಮನೆಗೆ ಎಷ್ಟು ಸಲ ಎಡತಾಕಿದರೂ ಕೆಲಸ ಮಾಡಿ ಕೊಡಲಿಲ್ಲ. (ಕನ್ನಡ.)

೬. ಎಡವಟ್ಟು

(ಇ) ಮೂರ್ಖತನ, ದಡ್ಡತನ; ಉದ್ಧಟತನ. (ಕನ್ನಡ.)

೭. ವಿತಂದ್ರಿ

(ಈ) ಎಚ್ಚರಿಕೆ, ಜಾಗರೂಕತೆ; ಆಯಾಸವಿಲ್ಲದಿರುವಿಕೆ. ಉದಾ- ಸ್ವಾತಂತ್ರ್ಯವನ್ನುಳಿಸಿಕೊಳ್ಳಲು ಪ್ರಜೆಗಳು ವಿತಂದ್ರಿಯಿಂದ ಇರಬೇಕಾಗುತ್ತದೆ. (ಸಂ.ವಿ = ಇಲ್ಲ, ತಂದ್ರಿ = ತೂಕಡಿಕೆ.)

೮. ವಿಮಾತೆ

(ಅ) ಮಲತಾಯಿ, ಸವತಿ ತಾಯಿ. (ವಿ = ಇನ್ನೊಬ್ಬ, ಮಾತೆ = ತಾಯಿ.)

೯. ಸಮವಾಯ

(ಆ) ಸಮೂಹ; ಸೇರುವಿಕೆ; ಸಂಗ್ರಹ, ಕೂಟ; ಸಂದಣಿ; ಸಂಸ್ಥೆ; ವಸ್ತುಗಳು ಒಂದೇ ಎಂಬಂತೆ ಕೂಡುವ ಸ್ಥಿತಿ (ಹಾಲು-ನೀರು ಕೂಡಿದಂತೆ.) (ಸಂ.)

೧೦. ಮೈದೆಗೆ

(ಈ) ಹಿಂಜರಿ, ಹಿಮ್ಮೆಟ್ಟು, ದೂರವಿರು, ವಿಮುಖನಾಗು, ಆಲಸ್ಯತೋರು. ಉದಾ- ಕೆಲಸಕ್ಕೆ ಮೈದೆಗೆಯುವವರಿಗೆ ಯಾವುದೂ ಸಾಧಿಸದು. (ಕನ್ನಡ, ಮೈ + ತೆಗೆ.)

೧೧. ಮೈಗರೆ

(ಅ) ಕಣ್ಮರೆಯಾಗು, ಒಮ್ಮೆಲೇ ಕಾಣದೆ ಹೋಗು, ಅಂತರ್ಧಾನ ಹೊಂದು; ಅಡಗಿಕೊಳ್ಳು. (ಕನ್ನಡ, ಮೈ + ಕರೆ.)

೧೨. ಮನ್ವಂತರ

(ಇ) ಯುಗ, ೪೩,೨೦,೦೦೦ ವರ್ಷಗಳ ಅವಧಿ, ಒಬ್ಬ ಮನುವಿನ ಅವಧಿ ಮುಗಿದು ಇನ್ನೊಬ್ಬನ ಕಾಲ ಪ್ರಾರಂಭವಾಗುವುದು. ಹೊಸ ಪರಿಸ್ಥಿತಿ ತಲೆಯೆತ್ತುವ ಕಾಲ. ಉದಾ- ಬ್ರಿಟಿಶರ ಆಗ[illegible] ಇತಿ[illegible] ಮನ್ವಂತರ ಪ್ರಾರಂಭವಾಯಿತು. (ಸಂ. ಮನು + ಅಂತರ.)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

೬–೮ ಸರಿಯಿದ್ದರೆ ... ಸಾಧಾರಣ

೯–೧೦ ಸರಿಯಿದ್ದರೆ ... ಉತ್ತಮ

೧೧–೧೨ ಸರಿಯಿದ್ದರೆ ... ಅತ್ಯುತ್ತಮ

# ಲಘು ಶಸ್ತ್ರಚಿಕಿತ್ಸೆಯ ಆದ್ಯ ಪ್ರವರ್ತಕ



ಆಕೆಗೆ ಆಗ ಇಪ್ಪತ್ತೇಳು ವರ್ಷ. ಹೆಸರು ಕಾರನ್ ಹೆಕ್ಸ್‌ಟ್ ಜರ್ಮನಿಯ ಹ್ಯಾಂಬರ್ಗಿನವಳು. ಮದುವೆಯಾಗಿ ಐದು ವರ್ಷವಾದರೂ ಮಕ್ಕಳಾಗಿರಲಿಲ್ಲ. ಆಸ್ಪತ್ರೆಯಲ್ಲಿ ತಪಾಸಿಸಿದಾಗ ಮುಷ್ಟಿಯಾಕಾರದ ಗಡ್ಡೆ ಬೆಳೆದು ಡಿಂಭನಾಳಕ್ಕೆ ತಡೆಯನ್ನುಂಟುಮಾಡಿತ್ತು ಎನ್ನುವುದು ಗೊತ್ತಾಯಿತು. ಆ ಗಡ್ಡೆಯನ್ನು ತೆಗೆದು ಹಾಕಿದರೆ ಗರ್ಭಧಾರಣೆ ಸಾಧ್ಯ.

ಆದರೆ ಗಡ್ಡೆಯನ್ನು ತೆಗೆಯಬೇಕೆಂದರೆ ಮೊದಲು ರೋಗಿಯನ್ನು ಎಚ್ಚರದಪ್ಪಿಸಬೇಕು. ಅನಂತರ ಹೊಟ್ಟೆಯನ್ನು ಕೊಯ್ದು ಗಡ್ಡೆಯನ್ನು ಹೊರದೆಗೆಯಬೇಕು. ಇದಾದ ಬಳಿಕ ಕೊಯ್ದ ಭಾಗವನ್ನು ಹೊಲಿಯಬೇಕು. ಗಾಯ ಮಾಯುವವರೆಗೂ ರೋಗಿಗೆ ವಿಶ್ರಾಂತಿ ಅಗತ್ಯ. ಅಲ್ಲದೆ ಕೊಯ್ದ ಭಾಗದಲ್ಲಿ ಶಾಶ್ವತವಾದ ಕಲೆ ಉಳಿಯುವುದು. ಕಾರನ್ ಹೆಕ್ಸ್‌ಟಳಿಗೆ ಮಗು ಬೇಕಾಗಿತ್ತೇ ಹೊರತು ಇದಾವುದೂ ಬೇಕಾಗಿರಲಿಲ್ಲ. ಆಸ್ಪತ್ರೆಯ ಡಾಕ್ಟರರು ಆಕೆಗೆ ಒಂದು ದಿನಾಂಕವನ್ನು ಕೊಟ್ಟು

---

• ಡಾ. ಜೆ. ಜಿ. ದೇವಧರ್

ಆ ದಿನ ಡಾ. ಸೆಮ್ ಆಸ್ಪತ್ರೆಗೆ ಬರಲಿರುವರೆಂದೂ ತಾವು ಕಂಡುಹಿಡಿದ ಹೊಸ ವಿಧಾನದಿಂದ ಇದಾವುದರ ಜಂಜಾಟವೂ ಇಲ್ಲದಂತೆ ಆಪರೇ ಶನ್ ಮಾಡುವುದಾಗಿಯೂ ಹೇಳಿದರು.

ನಿಶ್ಚಿತ ದಿನದಂದು ಡಾ. ಸೆಮ್ ಅಂತರದ ರ್ಶಕದ ಸಹಾಯದಿಂದ ಪರೀಕ್ಷಿಸಿದಾಗ ಟಿ.ವಿ. ಪರದೆಯ ಮೇಲೆ ಮುಷ್ಟಿಯಾಕಾರದ ನೀರು ತುಂಬಿದ ಗಡ್ಡೆ ಕಂಡುಬಂದಿತು. ಅನಂತರ ಅವರು ಪೆನ್ಸಿಲ್ ತೂರಿ ಹೋಗುವಷ್ಟು ಚಿಕ್ಕ ಗೆರೆಗಳನ್ನು ಕಿಬ್ಬೊಟ್ಟೆಯ ಎರಡೂ ಬದಿಗೆ ಹಾಕಿ, ಶಸ್ತ್ರಚಿಕಿತ್ಸೆಯ ಸಲಕರಣೆಗಳನ್ನು ಆ ಮೂಲಕ ಹೊಟ್ಟೆಯೊಳಗೆ ಸೇರಿಸಿ, ಗಡ್ಡೆಯನ್ನು ಹಿಡಿದು ಹೊರಪದರನ್ನು ಕತ್ತರಿಸಿ, ಆ ನೀರು ತುಂಬಿದ ಗಡ್ಡೆಯನ್ನು ಬೇರ್ಪಡಿಸಿದರು. ಅನಂತರ ಅಲ್ಲಿ ಉಂಟಾದ ರಕ್ತಸ್ರಾವವನ್ನು ವಿದ್ಯುತ್ತಿನ ಶಾಖದಿಂದ ತಡೆಹಿಡಿದು ಕೋಣೆಯಲ್ಲಿನ ಎಲ್ಲರೂ ಶಸ್ತ್ರಕ್ರಿಯೆ ಯನ್ನು ಟಿ.ವಿ. ಪರದೆಯ ಮೂಲಕ ನೋಡುತ್ತಿ ರುವಂತೆಯೆ ಗಡ್ಡೆಯ ನೀರನ್ನೆಲ್ಲ ಹೊರದೆಗೆದು ಅನಂತರ ಚಪ್ಪಟೆಯಾದ ಚೀಲವನ್ನು ಕೊಳವೆಯ ಮೂಲಕ ಹೊರದೆಗೆದರು. ಒಂದು ಗಂಟೆಯಲ್ಲಿ ಶಸ್ತ್ರಕ್ರಿಯೆ ಸುಲಭವಾಗಿ ಮುಗಿಯಿತು. ಹೆಚ್ಚೇನೂ ನೋವು ಇಲ್ಲದೆ ಅದೇ ದಿನ ಕಾರನ್ ಹೆಕ್ಸ್‌ಟ್ ಆಸ್ಪತ್ರೆಯ ತುಂಬಾ ನಡೆದಾಡಿದಳು. ಮುಂದೆ ಒಂದು ತಿಂಗಳಿನಲ್ಲೆ ಶಸ್ತ್ರ ಚಿಕಿತ್ಸೆಗಾಗಿ ಕಿಬ್ಬೊಟ್ಟೆಯ ಮೇಲೆ ಹಾಕಿದ ಅರ್ಧ ಸೆಂಟೀಮೀಟರ್ ಉದ್ದದ (ಕಾಲಿಂಚಿಗೂ ಕಡಿಮೆ) ಗೆರೆಗಳೂ ಮಾಯವಾ ದವು. ಒಂದು ವರ್ಷದಲ್ಲೆ ಆಕೆ ಗರ್ಭವತಿಯಾಗಿ ಸುದೃಢವಾದ ಗಂಡು ಮಗುವನ್ನೂ ಪಡೆದಳು.

ಪ್ರೊ. ಸೆಮ್ ತಾವು ಕಂಡು ಹಿಡಿದ ಹೊಸ ವಿಧಾನದಿಂದಾಗಿ ಲಘು ಶಸ್ತ್ರಚಿಕಿತ್ಸಾಕ್ರಮದ (Minimum invasive surgery) ಅರ್ಥಾತ್ (MIS) ಜನಕರೆಂದೇ ಖ್ಯಾತರಾಗಿದ್ದಾರೆ. ಈ ಬಗೆಯ ಶಸ್ತ್ರಕ್ರಿಯೆಗೆ ಅಗತ್ಯವಾದ ಸಲಕರಣೆಗಳನ್ನು ನಿರ್ಮಿಸಿದ ಹೆಗ್ಗಳಿಕೆಯೂ ಅವರದು. ಪ್ರೊ. ಸೆಮ್ ಕಳೆದು ಇಪ್ಪತ್ತು ವರ್ಷಗಳಲ್ಲಿ ೨೫,೦೦೦ ಕ್ಕೂ ಮಿಕ್ಕಿ ಇಂತಹ ಶಸ್ತ್ರ ಚಿಕಿತ್ಸೆಗಳನ್ನು ನಡೆಸಿದ್ದಾರೆ. ಅಲ್ಲದೆ ಇಂದು ಜಗತ್ತಿನಾದ್ಯಂತ ಈ ವಿಧಾನ ಹೆಚ್ಚು ಜನಪ್ರಿಯವಾಗಿದ್ದರಿಂದ ಡಾ. ಸೆಮ್ ನಿರ್ಮಿಸಿದ ಬಹೂಪಯೋಗಿ ಸಲಕರಣೆಗಳನ್ನು ಬಳಸಿ ಅಪೆಂಡಿಕ್ಸ್, ಪಿತ್ತ ಕೋಶದ ಹರಳು, ಗಡ್ಡೆಗಳು, ಮೂತ್ರ ಪಿಂಡ ಹಾಗೂ ಮೂತ್ರನಾ ಳದ ಚಿಕಿತ್ಸೆ, ಹರ್ನಿಯಾ ಹಾಗೂ ಕೀಲುಗಳ ತೊಂದರೆಯನ್ನು ಸಹ ಲಘು ಶಸ್ತ್ರಕ್ರಿಯೆಯಿಂದ ವಾಸಿಮಾಡಲಾಗುತ್ತಿದೆ.

ಸಾಂಪ್ರದಾಯಕ ಶಸ್ತ್ರಚಿಕಿತ್ಸೆಯಲ್ಲಿ ರಕ್ತದ ಹಾನಿಯ ಪ್ರಮಾಣ ಹೆಚ್ಚು. ಶಸ್ತ್ರ ಚಿಕಿತ್ಸೆಯ ನಂತರ ದೀರ್ಘಕಾಲದ ವಿಶ್ರಾಂತಿ ಅಗತ್ಯ. ಶಸ್ತ್ರ ಕ್ರಿಯೆ ಅಪಾಯಕರವಾದ್ದರಿಂದ ಪ್ರಾಣಾಪಾಯದ ಭಯವೂ ಇದೆ. ಆದರೆ ಸೆಮ್ ಕಂಡು ಹಿಡಿದ ಹೊಸ ಪದ್ಧತಿಯ ಮಾತೇ ಬೇರೆ. ಅಧಿಕ ರಕ್ತಸ್ರಾ ವದ ಪ್ರಶ್ನೆಯೇ ಇಲ್ಲಿಲ್ಲ. ಹೆಚ್ಚು ಗಾಯವಾಗಲಿ ನೋವಾಗಲಿ ಆಗುವುದಿಲ್ಲ, ಶಸ್ತ್ರಚಿಕಿತ್ಸೆಯಾದ ಮರು ದಿನವೇ ರೋಗಿ ಮನೆಗೆ ಹೋಗುವಷ್ಟು ಆರಾಮಾಗಿರುತ್ತಾನೆ. ಕೆಲವೇ ದಿನಗಳಲ್ಲಿ ತನ್ನ ಮೊದಲಿನ ದೈನಂದಿನ ಕಾರ್ಯಗಳನ್ನು ಕೈಗೊಳ್ಳಲು ಯೋಗ್ಯನಾಗುತ್ತಾನೆ.

ಡಾ. ಸೆಮ್ ಅವರದು ಆಜಾನುಬಾಹು ವ್ಯಕ್ತಿತ್ವ. (ಎತ್ತರ ಆರು ಅಡಿ ಮೂರು ಇಂಚುಗ ಳಷ್ಟು). ಅವರು ಶಸ್ತ್ರ ಚಿಕಿತ್ಸಾಲಯದಲ್ಲಿ ಪ್ರವೇಶಿ ಸಿದರೆ ಅಲ್ಲಿದ್ದವರ ಮೈಯಲ್ಲೆಲ್ಲ ವಿದ್ಯುತ್ ಸಂಚಾ ರವಾದಂತಾಗುತ್ತದೆ. ಗಾಂಭೀರ್ಯ ಹಾಗೂ ಸ್ಫೂರ್ತಿಯ ಸೆಲೆಯೇ ಮೂರ್ತಿವೆತ್ತಂಥ ವ್ಯಕ್ತಿತ್ವ. ಆಸ್ಪತ್ರೆಯಲ್ಲಿ ಹತ್ತು ಹನ್ನೆರಡು ಗಂಟೆಗಳವರೆಗೆ ಕೆಲಸಮಾಡಿ ಮನೆಗೆ ಹೋದರೆ ಅಲ್ಲಿ ಸಂಗೀತ ಸುಧೆಯೊಡನೆ ಕಾರ್ಯಾಗಾರದಲ್ಲಿ ಮತ್ತೆ ಕೆಲಸಕ್ಕೆ ಆರಂಭ. ತಮಗೆ ಬೇಕಾದ ಸಲಕರಣೆಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ಹೀಗಾಗಿ ಹೊಸ ಹೊಸ ಸಾಧನಗಳು ಸೃಷ್ಟಿಗೊಳ್ಳುತ್ತಲೇ ಇರುತ್ತವೆ.

ಹೊಸದನ್ನು ಕಲಿಯಬೇಕು, ತನಗೆ ಬೇಕಾದ ದ್ದನ್ನು ತಾನೇ ತಯಾರಿಸಿಕೊಳ್ಳಬೇಕು ಎಂಬ ಛಲ ಬಾಲ್ಯದಿಂದಲೇ ಬಂದದ್ದು. ಅವರ ತಂದೆ ಒಬ್ಬ ಇಂಜನೀಯರ್. ಸೆಮ್ ಒಂಭತ್ತು ವರ್ಷದವರಿ ದ್ದಾಗ ಅವರ ತಂದೆ ಆಟಿಗೆಗಳನ್ನು ತಯಾರಿಸಿಕೊ ಳ್ಳಲು ಒಂದು ಲೇತ್‌ಮಶೀನನ್ನು ಕೊಡಿಸಿದ್ದರಂತೆ.

ಹನ್ನೊಂದನೆಯ ವಯಸ್ಸು ನಡೆಯುತ್ತಿದ್ದಾಗ ಅದನ್ನೇ ಉಪಯೋಗಿಸಿ ಆಟಿಗೆಯ ವಿಮಾನಕ್ಕೆ ಎಂಜಿನ್ನನ್ನು ನಿರ್ಮಿಸಿ ತಂದೆಗೆ ಆಶ್ಚರ್ಯವನ್ನುಂಟು ಮಾಡಿದರಂತೆ. ಆಟಿಗೆಗಳನ್ನು ಕೊಡಿಸು ಎಂದು ತಂದೆಯನ್ನು ಪೀಡಿಸದೆ ಫ್ಯಾಕ್ಟರಿಯ ನಿರುಪಯುಕ್ತ ವಸ್ತುಗಳಿಂದ ಅವುಗಳನ್ನು ನಿರ್ಮಿಸುವ ಹವ್ಯಾಸ ಸೆಮ್ ಅವರದಾಗಿತ್ತು.

ಎರಡನೆಯ ಮಹಾಯುದ್ಧದ ನಂತರ ಸೆಮ್ ವೈದ್ಯಕೀಯ ಶಿಕ್ಷಣ ಪಡೆದದ್ದು ಮ್ಯೂನಿಕ್ ವಿಶ್ವವಿದ್ಯಾಲಯದಲ್ಲಿ. ಅಲ್ಲಿನ ಜೀವರಸಾಯನ ವಿಭಾಗಕ್ಕೆ



ಅಂತರವಯವದ ಸರಿಯಾದ ಅಂದಾಜು ಹಿಡಿಯುವ ಯಶಸ್ವಿ ಯತ್ನದ ಪ್ರವರ್ತಕ ಡಾ. ಸೆಮ್ ತಮ್ಮ ಮಾದರಿಯೊಂದಿಗೆ.

ಅಗತ್ಯವಾದ ಉಪಕರಣಗಳನ್ನು ಸ್ವತಃ ತಯಾರಿಸಿ ಮಾರುವ ಮೂಲಕ ಶಿಕ್ಷಣದ ವೆಚ್ಚವನ್ನವರು ಹೊಂದಿಸಿಕೊಂಡರಷ್ಟೇ ಅಲ್ಲ, ಹೊಸ ಮಾದರಿಯ ಉಪಕರಣಗಳನ್ನೂ ನಿರ್ಮಿಸಿದರು. ೧೯೫೦ರಲ್ಲಿ ಉತ್ತಮ ದರ್ಜೆ ಪಡೆದು ವೈದ್ಯಕೀಯ ಪರೀಕ್ಷೆ ಪಾಸಾದರು. ಮುಂದೆ ಮೂರು ವರ್ಷಗಳ ನಂತರ ಅದೇ ವಿಶ್ವವಿದ್ಯಾಲಯದಲ್ಲಿ ಸ್ತ್ರೀ ರೋಗ ತಜ್ಞರೆಂದು ನೇಮಕಗೊಂಡರು.

ಆಸ್ಪತ್ರೆಯ ಜಂಜಾಟದಲ್ಲೂ ಸೆಮ್ ಅವರ ವೈದ್ಯಕೀಯ ಚಿಂತನೆ ಮುಂದುವರೆದೇ ಇತ್ತು. ಮೂವತ್ತೊಂದನೆಯ ವಯಸ್ಸಿನಲ್ಲಿ ಇಪ್ಪತ್ತಕ್ಕೂ ಹೆಚ್ಚಿನ ವೈದ್ಯಕೀಯ ಪ್ರಬಂಧಗಳನ್ನು ಪ್ರಕಟಿಸಿದ ಪರಿಣಾಮವಾಗಿ ಬಂಜೆತನದ ನಿವಾರಣೆಯ ಬಗೆಗೆ ತಜ್ಞರೆಂದು ಪರಿಗಣಿಸಲ್ಪಟ್ಟರು. ಹೀಗಾಗಿ ಕಿರಿಯ ವಯಸ್ಸಿನಲ್ಲೆ ಹಿರಿಯ ಪ್ರಾಧ್ಯಾಪಕರ ಹುದ್ದೆ ತಾನಾಗಿಯೆ ಅವರನ್ನು ಹುಡುಕಿಕೊಂಡು ಬಂತು.

ಶಸ್ತ್ರ ಚಿಕಿತ್ಸೆ ಯಶಸ್ವಿಯಾದರೂ ಗಾಯವಾದಲ್ಲಿ ಸೋಂಕು ತಗಲುವ ಸಾಧ್ಯತೆ ಇದ್ದೇ ಇದೆ. ಅಲ್ಲದೆ ಕೊಯ್ದ ಸ್ಥಳದಲ್ಲಿ ಶಾಶ್ವತವಾಗಿ ಕಲೆ ಉಳಿದು ಬಿಡುತ್ತದೆ. ಇದನ್ನು ಕೊನೆಗಾಣಿಸಲು ಸಾಧ್ಯವೇ? ಎಂಬ ವಿಚಾರವೇ ಪ್ರೊ. ಸೆಮ್ ಅವರನ್ನು ಅಂತರ್ದರ್ಶಿ ವಿಧಾನದತ್ತ ಕೊಂಡೊಯ್ದಿತು. ರೋಗಿಗಳ ಹೊಟ್ಟೆಯಲ್ಲಿ ಗಾಳಿ ಹಾಕಿ ಉಬ್ಬಿಸಿ ಅಂತರವಯವಗಳನ್ನು ಪರೀಕ್ಷಿಸುವ ಪ್ರಯತ್ನ ವೈದ್ಯಕೀಯ ವಲಯದಲ್ಲಿ ಆದಾಗಲೆ ನಡೆದಿತ್ತು. ಆದರೆ ಹೀಗೆ ಮಾಡುವಾಗ ಈ ಒತ್ತಡದ ಗಾಳಿ ರಕ್ತನಾಳದಲ್ಲಿ ಸೇರಿ ಏರ್ ಎಂಬೋಲಿಜ (ಗಾಳಿಯುಬ್ಬರ) ಆಗುವ ಭೀತಿಯಿತ್ತು.

ರಕ್ತದಲ್ಲಾಗಲಿ ದೇಹದ ಇತರ ಅವಯವಗಳಲ್ಲಾಗಲಿ ಹೆಚ್ಚು ಪ್ರಮಾಣದಲ್ಲಿ ಸಮ್ಮಿಳನಗೊಳ್ಳದಂತೆ ಇಂಗಾಲಾಮ್ಲವನ್ನು ಶರೀರದಲ್ಲಿ ಸೇರಿಸುವ ಹೊಸ ವಿಧಾನವನ್ನು ಪ್ರೊ. ಸೆಮ್ ಬಳಕೆಯಲ್ಲಿ ತಂದರಲ್ಲದೆ ಅದಕ್ಕೆ ಅಗತ್ಯವಾದ ಉಪಕರಣಗಳನ್ನೂ ನಿರ್ಮಿಸಿದರು. ಇದುವೆ ಈಗಿನ ಸ್ವಯಂಚಾಲಿತ ಗಾಳಿ ಹಾಕುವ ಸಲಕರಣೆಗಳ ಮೂಲ ವಿಧಾನ.

ಆದರೂ ಅವರ ಈ ವಿಧಾನ ಎಷ್ಟು ಮಟ್ಟಿಗೆ ಸೂಕ್ತವಾಗಿದೆ ಎನ್ನುವ ಸಂಶಯ ಅವರ ಮೇಲಧಿಕಾರಿಗಳಿಗೆ. ಆದ್ದರಿಂದ ಮೇಲಧಿಕಾರಿ ಪ್ರೊ. ಫೈಕಾಂಟ್ ಸರ್ ಅವರ ಎದುರಿನಲ್ಲೆ ಸೆಮ್ ತಮ್ಮ ಹೊಸ ವಿಧಾನದ ಪ್ರಾತ್ಯಕ್ಷಿಕೆಯನ್ನು ಮಾಡಿತೋರಿಸಿದಾಗ ಅವರಿಗೆ ಹೊಟ್ಟೆ ಸೀಳದೆ ರೋಗದ ಕಾರಣವನ್ನು ಕಂಡು ಹಿಡಿಯಲು ಸಾಧ್ಯ ಎನ್ನುವುದು ಖಚಿತವಾಯಿತು. ಆದರೂ ಸೆಮ್ ಅವರಿಗೆ ಸಿದ್ಧಿಸಿದ್ದು ಉಳಿದವರಿಗೂ ಸಿದ್ಧಿಸೀತೆ? ಎಂಬ ಸಂಶಯ. ಅಂತೂ ಈ ಕುರಿತು ಫೈಕಾಂಟ್ ಸರ್ ಬಹಳ ಯೋಚಿಸಿ, ಯಾರಾದರೂ ಈ ವಿಧಾನವನ್ನು ಬಳಸುವುದಿದ್ದರೆ ಸೆಮ್ ಅವರ ನೇತೃತ್ವದಲ್ಲಿಯೆ ಬಳಸಬೇಕೆಂದು ಫರ್ಮಾನನ್ನು ಹೊರಡಿಸಿದರು.

ಈಗ ಸಂಪ್ರದಾಯವಾದಿ ಶಸ್ತ್ರ ಚಿಕಿತ್ಸಕರಿಂದ ಇಬ್ಬರಿಗೂ ವಿರೋಧ ಬಂತು. ಆದರೆ ಇದಾವುದರ ಪರಿವೆಯೂ ಇಲ್ಲದೆ ಪ್ರೊ. ಸೆಮ್ ಸಂಶೋಧನೆಯಲ್ಲಿ ನಿರತರಾಗಿ ಹೊಸ ಹೊಸ ಉಪಕರಣಗಳನ್ನು ಸೃಷ್ಟಿಸಿದರು. ಇದ್ದ ಉಪಕರಣಗಳಲ್ಲೆ ಆಮೂಲಾಗ್ರ ಬದಲಾವಣೆಗಳನ್ನು ಮಾಡಿದರು. ಉದರದರ್ಶಕದ ತುದಿಯಲ್ಲಿನ ಬಲ್ಬ್ ಬಿಸಿಯಾಗುವುದನ್ನು ತಪ್ಪಿಸಲು ಅದನ್ನು ತೆಗೆದು ಗಾಜುನಾರಿನ ಸಹಾಯದಿಂದ ದೇಹದ ಹೊರಗಿನ ಬೆಳಕನ್ನು ಉದರದರ್ಶಕದಲ್ಲಿ ಬೀರುವ ಹೊಸ ಏರ್ಪಾಡನ್ನೂ ಮಾಡಿದರು.

ಡಾ. ಸೆಮ್ ೧೯೭೦ರಲ್ಲಿ ಕೀಲ್ ವಿಶ್ವವಿದ್ಯಾಲಯದ ನಿರ್ದೇಶಕರಾಗಿಯೂ ಸ್ತ್ರೀರೋಗ ವಿಭಾಗದ ಮುಖ್ಯಸ್ಥರಾಗಿಯೂ ನಿಯುಕ್ತರಾದರು. ಹೊಸ ಉಪಕರಣದ ಅನ್ವೇಷಣೆ, ಸಂಶೋಧನೆ ನಡೆದೇ ಇತ್ತು. ೧೯೭೭ರಲ್ಲಿ ಶಸ್ತ್ರ ಚಿಕಿತ್ಸೆಯಲ್ಲಿ ಅವರು ತಂದ ಮಹತ್ವದ ಬದಲಾವಣೆಯೆಂದರೆ ರೋಡರ್ ಸರಿಗೆ (Roderknot)ಯ ಅಳವಡಿಕೆ. ಅದನ್ನು ಉರುಳು ಗಂಟು ಎಂದು ಸುಲಭವಾಗಿ ಕನ್ನಡೀಕರಿಸಬಹುದು. ಈ ಸರಿಗೆ ಹೊರಗಿನಿಂದ ಹಾಕಲ್ಪಟ್ಟು ಒಳಗೆ ಜರುಗಿಸಲ್ಪಡುತ್ತದೆ. ಅಂತರ್ಯದಲ್ಲಿಯೆ ಹೊಲಿಗೆ ಹಾಕಿ ಗಂಟು ಹಾಕುವ ಕ್ಲಿಷ್ಟ ಕೆಲಸದ ಬದಲು ಈ ಸರಳ ವಿಧಾನ ಬಳಕೆಯಲ್ಲಿ ಬಂದದ್ದು ಅಂತರ್ದರ್ಶಿ ಚಿಕಿತ್ಸಾ ವಿಧಾನ ಮುನ್ನಡೆ

ಸಾಧಿಸಲು ಕಾರಣವಾಯಿತು

ಹೊಸ ವಿಧಾನವನ್ನು ಬಳಸಿ, ಹಲವಾರು ಶಸ್ತ್ರಚಿಕಿತ್ಸೆಗಳನ್ನು ಯಶಸ್ವಿಯಾಗಿ ನಡೆಸಿ, ಅದರ ಅನುಭವದ ಹಿನ್ನೆಲೆಯಲ್ಲಿ ಅಮೆರಿಕದ ವೈದ್ಯಕೀಯ ಸಮ್ಮೇಳನದಲ್ಲಿ ವಿಡಿಯೋ ಪ್ರಾತ್ಯಕ್ಷಿಕೆಯೊಡನೆ ವೈಜ್ಞಾನಿಕ ಪ್ರಬಂಧವನ್ನೇ ಡಾ. ಸೆಸಮ್ ಮಂಡಿಸಿದರು. ಇಷ್ಟಾದರೂ ಅಮೆರಿಕ ಹಾಗೂ ಜರ್ಮನಿಯ ವೈದ್ಯಕೀಯ ವಲಯದಲ್ಲಿ ಅವರ ಸಾಧನೆಯ ಬಗೆಗೆ ಸಂಶಯವಿತ್ತು. ಅಮೆರಿಕದ ಸ್ತ್ರೀರೋಗ ತಜ್ಞರ ಸಂಘಟನೆಯ ಅಧ್ಯಕ್ಷರಾದ ಡಾ. ಜಾನ್ ಬೆಹರ್‌ಮನ್ ೧೯೮೫ರ ಆಗಸ್ಟಿನಲ್ಲೊಂದು ದಿನ ಅಮೆರಿಕದಿಂದ ಸೀದಾ ಜರ್ಮನಿಗೆ ಬಂದಿಳಿದವರೇ ಡಾ. ಸೆಮ್ ಅವರ ಬಳಿಗೆ ಹೋಗಿ, "ನೀವು ಅಮೆರಿಕದಲ್ಲಿ ತೋರಿಸಿದ ಕ್ಯಾಸೆಟ್ಟುಗಳನ್ನು ನೋಡಿದ್ದೇವೆ. ಆದರೆ ಆಪರೇಶನ್ನನ್ನು ನಿಜವಾಗಿಯೂ ಹೇಗೆ ಮಾಡುತ್ತೀರಿ? ಎನ್ನುವುದನ್ನು ನೋಡಲು ಬಂದಿದ್ದೇನೆ," ಎಂದು ಹೇಳಿದರು. ತಾವು ತೋರಿಸಿದ್ದನ್ನೂ ಇವರು ನಂಬಲಿಲ್ಲವಲ್ಲಾ ಎಂದು



ಗರ್ಭಕೋಶದ ಲಘು ಶಸ್ತ್ರಕ್ರಿಯೆಯಲ್ಲಿ ನಿರತ ತಂಡ.

ಸೆಮ್‌ರವರಿಗೂ ಅವರ ಸಹೋದ್ಯೋಗಿಗಳಿಗೂ ಮುಜುಗರ. ಆದರೂ ಸೆಮ್ ಕ್ಷಣದಲ್ಲೇ ಸುಧಾರಿಸಿಕೊಂಡು, ಉತ್ಸಾಹದಿಂದ ಒಪ್ಪಿ, ಮರುದಿನವೇ ಅಂತರ್ದರ್ಶಿ ಶಸ್ತ್ರಕ್ರಿಯೆಯಿಂದ ರೋಗಪೀಡಿತ ಅಂಡಾಶಯ ಹಾಗೂ ಅಂಡನಾಳದ ಆಪರೇಶನ್ ಮಾಡಿತೋರಿಸಿದರು.

ಶಸ್ತ್ರಚಿಕಿತ್ಸೆಯ ಮೊದಲು ಆ ವಿಧಾನದ ಬಗೆಗೇ ಸಂಶಯಗ್ರಸ್ತರಾದ ಡಾ. ಬೆಹರ್‌ಮನ್ ಆಪರೇಶನ್ ಮುಗಿಯುವ ವೇಳೆಗೆ ಡಾ. ಸೆಮ್ ಅವರ ಆರಾಧಕರಾಗಿ ಮಾರ್ಪಾಡುಗೊಂಡಿದ್ದರು. ಅವರು ಅಮೇರಿಕಕ್ಕೆ ಹಿಂದಿರುಗಿದ ಐದು ತಿಂಗಳಲ್ಲೇ ಅಲ್ಲಿಗೆ ಬರಬೇಕೆಂಬ ಆಮಂತ್ರಣ ಸೆಮ್ ಅವರಿಗೆ ಬಂತು. ಸುಮಾರು ಇನ್ನೂರು ಜನ ಅಮೇರಿಕನ್ ತಜ್ಞರು ಸೆಮ್ ಅವರಿಂದ ತರಬೇತಿ ಪಡೆದರು. ಇದು ಅವರ ದೈವಗತಿಯನ್ನೇ ಬದಲಿಸಿತು ಎನ್ನಬಹುದು. ಜಗತ್ತಿನಾದ್ಯಂತ ಅವರ ಖ್ಯಾತಿ ಬೆಳಗತೊಡಗಿತು. ಆದರೆ ಅವರೊಂದಿಗೆ ವಿಧಿಯು ತನ್ನ ಅಟ್ಟಹಾಸಗೈದಿತ್ತು. ೨೮ ವರ್ಷಗಳ ಅವರ ಬಾಳ ಸಂಗಾತಿ ರೋಜ್‌ವಿತಾ ೧೯೮೬ರಲ್ಲಿ ಕ್ಯಾನ್ಸರಿನಿಂದ ವಿಧಿವಶರಾದರು. ಈ ಆಘಾತದಿಂದ ಚೇತರಿಸಿಕೊಳ್ಳಲು ಸೆಮ್ ಅವರಿಗೆ ಎರಡು ವರ್ಷಗಳೇ ಹಿಡಿದವು.

ಮತ್ತೆ ಅವರು ಸಂಶೋಧನೆಯಲ್ಲಿ ನಿರತರಾದರು. ಸಂಶೋಧನೆಯಲ್ಲಿ ಕಂಡುಕೊಂಡ ಹೊಸ ಹೊಸ ತಥ್ಯಗಳನ್ನು ಪ್ರಬಂಧಗಳ ಮೂಲಕ ಮಂಡಿಸತೊಡಗಿದರು. ೧೯೯೨ರ ಡಿಸೆಂಬರಿನಲ್ಲೊಮ್ಮೆ ಹಾಗೂ ೧೯೯೩ರ ಜನವರಿಯಲ್ಲಿ ಮತ್ತೊಮ್ಮೆ ಹೀಗೆ ಅವರನ್ನು ಎರಡು ಸಲ ಭೇಟಿಯಾಗುವ ಸಂದರ್ಭ ನನಗೆ ಒದಗಿ ಬಂದಿತ್ತು. ನಾನು ೧೯೯೨ರ ಸಪ್ಟಂಬರಿನಿಂದ ನವೆಂಬರ್‌ವರೆಗೆ ಫ್ರಾನ್ಸಿನ ಕ್ಲಿಮೊಫೆರಾ ವಿಶ್ವವಿದ್ಯಾಲಯದಲ್ಲಿ ಕಳೆದ ನಂತರ ಡಾ. ಸೆಮ್ ಅವರ ಆಮಂತ್ರಣದ ಮೇರೆಗೆ ಜರ್ಮನಿಗೆ ಹೋಗಿ ಆ ಹೊಸ ವಿಧಾನವನ್ನು ಕೈಗೂಡಿಸಿಕೊಂಡೆ.

ಈಗ ಡಾ. ಸೆಮ್ ಜಗತ್ಸಂಚಾರಿ. ಒಂದೇ ದಿನದಲ್ಲಿ ಕಂಕಾರ್ಡ್ ಜೆಟ್ ವಿಮಾನದ ಮೂಲಕ ಜಗತ್ತನ್ನು ಸುತ್ತುವರಿಯುವುದನ್ನು ನೋಡಿದ್ದೇನೆ. ಬೆಳಿಗ್ಗೆ ಜರ್ಮನಿಯ ಕೀಲ್‌ನಲ್ಲಿದ್ದರೆ ಅಮೇರಿಕಾದ ಇಂಟರ್‌ನ್ಯಾಷನಲ್ ಮೆಡಿಕಲ್ ಕಾಂಗ್ರೆಸ್ಸಿನಲ್ಲಿ ಭಾಷಣ ಮಾಡಲು ಸಾಯಂಕಾಲ ಆ ದೇಶ ವೇಳೆಯ ವ್ಯಯವಾಗಬಾರದೆಂದು ಧ್ವನ್ಯಾತೀತ ವೇಗದ ಜೆಟ್ ವಿಮಾನದಲ್ಲಿ ಪ್ರಯಾಣ. ಮರುದಿನ ಬೆಳಗಿನಿಂದ ಮಧ್ಯಾಹ್ನದ ವರೆಗೆ ತಮ್ಮ ಹೊಸ ವಿಧಾನಗಳಿಂದ ಆಪರೇಶನ್ನುಗಳನ್ನು ಮಾಡಿ ತೋರಿಸಿ ಮಧ್ಯಾಹ್ನ ಮತ್ತೆ ಜರ್ಮನಿಗೆ ಉಡ್ಡಾಣ. ವಿಮಾನ ಸಾಯಂಕಾಲ ತಾಯ್ನಾಡನ್ನು ತಲುಪಿದಾಗ ಕೀಲ್‌ನಲ್ಲಿರುವ ತಮ್ಮ ಆಸ್ಪತ್ರೆಗೆ ಭೆಟ್ಟಿಕೊಟ್ಟು ನಂತರವೇ ಮನೆಗೆ ಹಿಂದಿರುಗುವುದನ್ನು ನಾನು ಎಷ್ಟೋ ಸಲ ನೋಡಿದ್ದೇನೆ. ಎಲ್ಲರೊಂದಿಗೂ ಆತ್ಮೀಯತೆ; ಎಲ್ಲರಲ್ಲಿಯೂ ಅಂತಃಕರಣ ಗರ್ವ ಲವಲೇಶವೂ ಇಲ್ಲ. "ನಮ್ಮಲ್ಲಿ ಐಷಾರಾಮಿ ದೋಣಿ (Luxury yacht) ಇದ್ದದ್ದು ನೆನಪಿದೆಯಲ್ಲಾ, ನಾಳೆ ತಪ್ಪದೆ ಬಾ," ಎಂಬ ಪ್ರೀತಿಯ ಕರೆ. ಮರುದಿನ ಆಪರೇಶನ್ ಮುಗಿಸಿ ಮನೆಗೆ ಹೋಗುವಾಗ, "ಸಾಯಂಕಾಲ ಬಾ, ಮರೆಯಬೇಡ," ಎಂಬ ಕಿವಿಮಾತು ಬೇರೆ. ಅವರ ಸಹೃದಯತೆ, ಆತ್ಮೀಯತೆಯಲ್ಲಿ ನಾವೇ ಕರಗಿ ನೀರಾಗಬೇಕು.

ಅವರ ಚಿಕಿತ್ಸಾಲಯವೆಂದರೆ ಅಂತಾರಾಷ್ಟ್ರೀಯ ವೈದ್ಯರ ಮೇಳವಿದ್ದಂತೆ. ನಾನು ಅಲ್ಲಿದ್ದಾಗ ಚೀನ, ಆಫ್ರಿಕ, ಅರಬ್ ದೇಶಗಳು, ಯುರೋಪಿಯನ್ ದೇಶಗಳು, ಕೆನಡಾ, ಆಸ್ಟ್ರೇಲಿಯಾ ಹೀಗೆ ಬೇರೆ ಬೇರೆ ದೇಶಗಳಿಂದ ಸುಮಾರು [illegible] ಜನ ತರಬೇತಿ ಪಡೆಯಲು ಬಂದಿದ್ದರು. ಲಘು ಶಸ್ತ್ರಚಿಕಿತ್ಸಾಕ್ರಮ (MIS)ದ ಮೇಲೆ ಅವರು ಬರೆದ ಪುಸ್ತಕಗಳಾಗಲಿ ವಿಡಿಯೋ ಪ್ರಾತ್ಯಕ್ಷಿಕೆಗಳಾಗಲಿ ಬಹುತರವಾಗಿ ವೈದ್ಯರಿಗೆಲ್ಲ ಇಂದು ಒಂದು ರೀತಿಯಲ್ಲಿ ವೇದವಾಕ್ಯಗಳೇ ಆಗಿವೆ. ಜರ್ಮನಿ, ಅಮೇರಿಕ ಹಾಗೂ ಯುರೋಪದ ಅನೇಕ ಶಸ್ತ್ರಚಿಕಿತ್ಸೆಯ ಉಪಕರಣಗಳನ್ನು ತಯಾರಿಸುವ ಕಂಪನಿಗಳು ಸೆಮ್ ಅವರ ಅನುಮತಿ ಪಡೆದು ಅವರ ಹೆಸರಿನಲ್ಲೇ ಅವನ್ನು ನಿರ್ಮಿಸುತ್ತಿವೆ.

ಸೆಮ್ ಅವರಿಗೆ ಜಗತ್ತಿನ ಮೂಲೆ ಮೂಲೆಗಳಿಂದಲೂ ಪ್ರಶಸ್ತಿಗಳು ಹರಿದು ಬರುತ್ತಿರುವಾಗ

ಜರ್ಮನಿಗೂ ಸುಮ್ಮನೆ ಕೂಡಲಾಗಲಿಲ್ಲ. ೧೯೮೧ರಲ್ಲಿ ಅದು ವರ್ಷದ ಅತ್ಯಂತ ಪ್ರತಿಭಾನ್ವಿತ ಡಾಕ್ಟರರೆಂಬ ಗೌರವ ನೀಡಿ ತನ್ನ ಹಿರಿಮೆಯನ್ನೇ ಹೆಚ್ಚಿಸಿಕೊಂಡಿತು. ಇದೆಲ್ಲಕ್ಕಿಂತ ಅವರಿಗೆ ಹೆಚ್ಚಿನ ಸಮಾಧಾನ ತಂದುಕೊಟ್ಟದ್ದು ಹಿಂದೆ ಟೀಕೆ ಮಾಡುತ್ತಿದ್ದ ಹೆಸರಾಂತ ಸರ್ಜನರೇ ಒಬ್ಬೊಬ್ಬರಾಗಿ ಇವರನ್ನು ಮನ್ನಿಸತೊಡಗಿದ್ದು. ಕೆಲವರು ಹಿಂದೆ ತಾವು ಮಾಡಿದ ಟೀಕೆಗಾಗಿ ಕ್ಷಮೆ ಕೇಳಿದ್ದೂ ಇದೆ. ವಾಸ್ತವವಾಗಿ ಸೆಮ್ ಅವರ ಈ ಆವಿಷ್ಕಾರಗಳು ತಕ್ಕ ಸಮಯದಲ್ಲಿ ಮುಂಬರದಿದ್ದರೆ ಬಹುಶಃ ಈ ಅಂತರ್ದರ್ಶಿ ಶಸ್ತ್ರಚಿಕಿತ್ಸಾ ವಿಧಾನ ಒಂದು ದಶಕದಷ್ಟು ಹಿಂದೆ ಬೀಳುತ್ತಿತ್ತೆಂದು ಇಂದು ಅನೇಕ ತಜ್ಞ ವೈದ್ಯರು ಒಪ್ಪಿಕೊಳ್ಳುತ್ತಾರೆ.

ಒಮ್ಮೊಮ್ಮೆ ಗರ್ಭಕೋಶದ ಮೇಲೆ ಮಾಂಸದ ಗಡ್ಡೆಗಳು ಬೆಳೆಯುವುದುಂಟು. ಇವು ಕ್ಯಾನ್ಸರ್‌ಗಂಟುಗಳು ಅಲ್ಲವಾದರೂ ಮೂತ್ರಕೋಶ, ದೊಡ್ಡ ಕರುಳು ಅಥವಾ ಜನನೇಂದ್ರಿಯದ ಮೇಲೆ ಒತ್ತಡ ಹಾಕಿ ನಾನಾ ವಿಧದ ತೊಂದರೆಯನ್ನುಂಟು ಮಾಡುವುದರಿಂದ ಅವುಗಳ ನಿರ್ಮೂಲನೆಗೆ ಎಷ್ಟೋಸಲ ಗರ್ಭವನ್ನೇ ತೆರೆಯಬೇಕಾಗುತ್ತದೆ. ಸಾಂಪ್ರದಾಯಿಕ ವಿಧಾನದಿಂದ ಆಪರೇಶನ್ ಮಾಡಿದರೆ ವ್ಯಾಧಿಗ್ರಸ್ತರಾದವರು ಪೂರ್ಣವಾಗಿ ಗುಣಮುಖರಾಗಲು ೨-೩ ತಿಂಗಳ ಉಪಚಾರವೇ ಬೇಕು. ಡಾ. ಸೆಮ್ ತಿರುಗಣೆಯಂತಹ ಒಂದು ಕೊಳವೆಯ ಅಡಿ ಚಕ್ರಾಕಾರದ ಗರಗಸದಿಂದ ಗರ್ಭಕೋಶವನ್ನು ಹೆಚ್ಚು ಗಾಸಿಗೊಳಿಸದೇ ಈ ಗಡ್ಡೆಗಳನ್ನು ಆಂತರ್ಯದಲ್ಲಿಯೆ ಕೊರೆದು ತೆಗೆಯುವ ಸುಲಭೋಪಾಯ ಕಂಡುಹಿಡಿದಿದ್ದಾರೆ. ಅಲ್ಲದೆ ಗರ್ಭಕೋಶದ ನಿರ್ಮೂಲನೆಯಲ್ಲಿ ಇವರು ಬಳಕೆಗೆ ತಂದ ಮೂರು ವಿಧಾನಗಳು ಇಂದು ಜಗತ್ತಿನಾದ್ಯಂತ ಮಾನ್ಯತೆ ಪಡೆಯುತ್ತಿವೆ.

ಪ್ರಖ್ಯಾತಿಯ ಪರಾಕಾಷ್ಠೆಯಲ್ಲಿದ್ದರೂ ಸೆಮ್ ಸೌಜನ್ಯವನ್ನು ಕಳೆದುಕೊಂಡಿಲ್ಲ; ಯಾವಾಗಲೂ ಹಸನ್ಮುಖಿ. ತಡೆಬಿಡದ ಚಟುವಟಿಕೆಗಳ ಮಧ್ಯದಲ್ಲಿಯೂ ದೋಣಿಯಲ್ಲಿ ಪಯಣಿಸುವ, ವಿಮಾನವನ್ನು ಚಲಾಯಿಸುವ ಹವ್ಯಾಸವನ್ನು ಬಿಟ್ಟುಕೊಟ್ಟಿಲ್ಲ. ಆಸ್ಪತ್ರೆಯ ಕೆಲಸ ಮುಗಿಸಿ ಮನೆಗೆ ಹೋದಾಗ ಮನೆಯಲ್ಲಿಯೆ ಸ್ಥಾಪಿಸಿಕೊಂಡಿರುವ ಕಾರ್ಯಾಗಾರದಲ್ಲಿ ತೊಡಗಿಕೊಳ್ಳುತ್ತಾರೆ. ಹೆಚ್ಚುತ್ತಿರುವ ವಯಸ್ಸು ಅದಕ್ಕೆಂದೂ ಅಡ್ಡ ಬಂದಿಲ್ಲ. ಬಹುಶಃ ಅವರು ಹೊಸ ಸಾಧನಗಳ ನಿರ್ಮಾಣದಲ್ಲಿ ದಣಿವನ್ನು ನಿವಾರಿಸಿಕೊಳ್ಳುತ್ತಾರೆ; ಸಾರ್ಥಕ್ಯವನ್ನೂ ಕಾಣುತ್ತಾರೆ. ತಮ್ಮ ಕೆಲಸವನ್ನು ಸದಾ ಸುಧಾರಿಸಿಕೊಳ್ಳುವುದಲ್ಲದೆ ರೋಗಿಯ ಹಿತಚಿಂತನೆಯನ್ನೂ ಮಾಡುತ್ತಿರುವುದು ಡಾಕ್ಟರರ ಕೆಲಸ ಎಂದವರು ಹೇಳುತ್ತಾರೆ.

ನುಡಿದಂತೆ ನಡೆಯುವ ಡಾ. ಕರ್ಟ್ ಸೆಮ್ ವೈದ್ಯ ಜಗತ್ತಿಗೆ ಹೊಸ ಆಯಾಮವನ್ನೇ ತೋರಿಸಿದ್ದಾರೆ.

●

## ವೈಕುಂಠ ಸಮಾರಾಧನೆ

**ಈ** ಘಟನೆ ನಡೆದು ಏಳೆಂಟು ವರ್ಷಗಳೇ ಆದುವು. ನಮ್ಮ ಊರಿನ ಒಂದು ಅನುಕೂಲಸ್ಥ ಮನೆಯ ವೃದ್ಧ ಯಜಮಾನ ಮೃತಪಟ್ಟ. ಆಗ ಮನೆಯ ಜನ ಆತನ ವೈಕುಂಠ ಸಮಾರಾಧನೆಯನ್ನು ಅದ್ದೂರಿಯಾಗಿ ಆಚರಿಸಿದರು. ನೂರಾರು ಮಂದಿ ಉಂಡು ತೃಪ್ತಿಪಟ್ಟರು. (ಅಲ್ಲಿನ ಮುದಿ ಅತ್ತೆ ತನ್ನ ಸೊಸೆಯನ್ನು ಯಾವಾಗಲೂ ನಾನಾ ರೀತಿಯಲ್ಲಿ ಪೀಡಿಸುತ್ತಿದ್ದಳು ಎಂತ ಕಾಣುತ್ತೆ.)

ಮೂರನೆಯ ದಿನ ಸೊಸೆಯ ಅಣ್ಣ ತನ್ನ ತಂಗಿಯನ್ನು ಕುರಿತು "ವೈಕುಂಠ ಸಮಾರಾಧನೆ ತುಂಬಾ ಚೆನ್ನಾಗಿ ನೆರವೇರಿತು" ಎಂದಾಗ, ಅಣ್ಣಾ ಅಲ್ಲಿ ನೋಡು, (ಅತ್ತೆ ಅಲ್ಲಿಯೇ ಕುಳಿತಿದ್ದಳು) ಇನ್ನೂ ಒಂದು ವೈಕುಂಠ ಸಮಾರಾಧನೆ ಮಾಡುವಷ್ಟು ಸಾಮಾನು ಉಳಿದಿದೆ" ಎನ್ನಬೇಕೆ.

● ಕೆ. ಶ್ರೀನಿವಾಸ

# ಮದನಕಾಮನ ಕಥೆಗಳು

## ೨

ಸ್ತ್ರೀ-ಪುರುಷರ ವೈವಾಹಿಕ ಜೀವನದಲ್ಲಿ ಪ್ರಥಮ ರಾತ್ರಿಯಂತಹ ಅಪೂರ್ವ ಅನುಭವ ಬೇರೊಂದಿರಲಾರದು. ವಿವಾಹಕ್ಕೆ ಮೊದಲು ಒಬ್ಬರೊಬ್ಬರ ಪರಿಚಯವೇ ಇರದಿರುತ್ತಿದ್ದ ಹಿಂದಿನ ಕಾಲದಲ್ಲಂತೂ ಈ ಮಾತು ಇಂದಿಗಿಂತಲೂ ಹೆಚ್ಚು ನಿಜವಾಗಿತ್ತು. ಯಾಕೆಂದರೆ ಒಬ್ಬರನ್ನೊಬ್ಬರು ಅರಿತುಕೊಳ್ಳುವುದಿರಲಿ ಅವರ ಪರಸ್ಪರ ಪರಿಚಯವು ಕೂಡ ಆಗಲೇ ಮೊದಲ ಬಾರಿ ಆಗಬೇಕಿರುತ್ತಿತ್ತು. ವಿವಾಹವಿಚ್ಛೇದನೆಯ ಕಲ್ಪನೆ ಕೂಡ ಇರದಿದ್ದ ಆ ಕಾಲದಲ್ಲಿ ಮದುಮಕ್ಕಳಿಗೆ ತಮ್ಮ ವೈವಾಹಿಕ ಕರ್ತವ್ಯಗಳು ಮಾತ್ರ ಮಹತ್ವದವಾಗಿ ಹಕ್ಕುಗಳು ಗೌಣವಾಗಿರುತ್ತಿದ್ದವು. ಅಂತೆಯೆ ಮದುಮಕ್ಕಳಿಬ್ಬರೂ ಆ ಅಮೃತಗಳಿಗೆಯ ಬರವನ್ನು ಅತ್ಯಾತುರದಿಂದ ಎದುರು ನೋಡುತ್ತಿದ್ದರು.

ಆದರೆ ಭೀಮಪುರಿಯ ರಾಜಕುವರಿಯರು ಇಂತಹ ಅಮೃತಗಳಿಗೆಯಲ್ಲಿ ತಮ್ಮ 'ಪತಿ' ಗಾಢವಾಗಿ ನಿದ್ರಿಸುತ್ತಿರುವುದನ್ನು ಕಂಡು ತುಂಬ ನಿರಾಶರಾದರು. ಆದರೂ ಅವನ ಬಗ್ಗೆ ಅವರಿಗೆ ಅನ್ಯಥಾ ಕಲ್ಪನೆಗಳು ಸುಳಿಯಲಿಲ್ಲ. ಅವನು ಆಯಾಸದಿಂದ ಎಚ್ಚರವಾಗುವುದಕ್ಕಾಗಿ ಕಾಯ್ದರು. ನಿದ್ರೆ ಹೋಗಿರಬಹುದೆಂದು ಬಗೆದು ಅವರು ಶಾಂತಚಿತ್ತದಿಂದ ಆದರೂ ಅವನು ಎಚ್ಚರಗೊಳ್ಳದಿರಲು ಕ್ಷಣಿಕ ನಿರಾಸೆಯ ಪರಿಯನ್ನು ಹರಿದೊಗೆದವಳು ಹಿರಿಯ ರಾಜಕುಮಾರಿ. ಅವಳು ಧೈರ್ಯತಂದುಕೊಂಡು ಚಾತುರ್ಯನ ತೀರ ಹತ್ತಿರ ಹೋಗಿ ಬಾಗಿದಾಗ ಅವನ ಮೈಯೆಲ್ಲ ಬೆವರು ಸುರಿಯುತ್ತಿದ್ದುದನ್ನು ಕಂಡಳು. ತಟ್ಟನೆ ತನ್ನ ಸೀರೆಯ ಸೆರಗಿನ ಚುಂಗಿನಿಂದ ಅವನ ಹಣೆಯ ಮೇಲಿನ ಬೆವರು ಹನಿಗಳನ್ನೊರೆಸಿ ಅವನ ನಿಲುವಂಗಿಯ ಬಿರಡಿಗಳನ್ನು ಬಿಚ್ಚಿದಳು. ತನ್ನ ಕೈ ತಗುಲಿದೊಡನೆಯೆ ಚಾತುರ್ಯನ ಮೈಯೆಲ್ಲ ನಡುಗಿದುದನ್ನು ಕಂಡ ಅವಳು ತಟ್ಟನೆ ಹಿಂದೆಗೆದಳು. ಅವನು ಅಸ್ವಸ್ಥನಾಗಿರುವುದನ್ನು ಕಂಡು ಅವಳ ಅಂತಃಕರಣವೇ ಕಲಕಿಹೋಯಿತು. ತಾನಾಗಿಯೇ ಅವಳ ಕೈ ಹತ್ತಿರದಲ್ಲಿದ್ದ ಕೊಳಲನ್ನೆತ್ತಿಕೊಂಡಿತು. ಚಾತುರ್ಯ ಮಲಗಿದ್ದ ಮಂಚದ ಕಾಲಕಡೆಯ ತುದಿಗೆ ಹೋಗಿ ಕುಳಿತು ತನ್ನ ಹೃದಯದ ದುಗುಡವನ್ನೇ ಮುರಲಿಯ ಧ್ವನಿಯ ಮೂಲಕ ತರಂಗ ತರಂಗಗಳಾಗಿ ತೇಲಿಬಿಟ್ಟಳು. ಚಾತುರ್ಯ ಅಸ್ವಸ್ಥನಂತೆ ಮಲಗಿದಲ್ಲೇ ಅತ್ತಿತ್ತ ಹೊರಳಾಡಹತ್ತಿದನು. ಆ ಕ್ಷಣದಲ್ಲಿ ಹೆಣ್ಣಿಗೆ ಸಹಜವಾದುದನ್ನೇ ಆಕೆಯೂ ಮಾಡಲೆಳಸಿ ಎದ್ದು ಬಂದು ಅವನೆದೆಯ ಮೇಲೆ ಮೃದುವಾಗಿ ತನ್ನ ಕೈಯಿರಿಸಿದಳು. ಚಾತುರ್ಯ ತಟ್ಟನೆ ಎದ್ದು ಕುಳಿತ. ಅವಳು ಎದ್ದು ನಿಂತು ಮುಖ ಕೆಳಗೆ ಹಾಕಿದಳಾದರೂ ಗೆಲುವಿನ ಕಿರುನಗೆ ಅವಳ ತುಟಿಗಳ ನಡುವೆ ಸುಳಿದಾಡುತ್ತಿತ್ತು. ಚಾತುರ್ಯನ ಎದೆ ಜೋರಿನಿಂದ ಬಡಿದುಕೊಳ್ಳತೊಡಗಿತು. ಅವಳು ಕಡೆಗಣ್ಣಿನೋಟದಿಂದ ಅವನನ್ನೇ ನೋಡುತ್ತಿದ್ದಳು.

ಎರಡು ಕ್ಷಣ ಗಾಢವಾದ ಮೌನವನ್ನು ಮುರಿಯುವುದಕ್ಕೆ ಯಾರಿಗೂ ಧೈರ್ಯವಾಗಲಿಲ್ಲ. ಕೊನೆಗೆ ರಾಜಕುಮಾರಿಯೇ ಮುಂದಾಗಿ, "ದಿನದ ಘಟನೆಗಳಿಂದಾಗಿ ತಮಗೆ ತುಂಬ ಆಯಾಸವಾದಂತೆ ಕಾಣುತ್ತಿದೆಯಲ್ಲ" ಎಂದು ಒಳದನಿಯಲ್ಲಿಯೆ ಉಸುರಿದಳು.

"ಅಂ.... ಹೌದು; ತುಸು ಮಟ್ಟಿಗೆ.... ಹೌದು."

ಚಾತುರ್ಯ ಮಾತಾಡಿದುದರಿಂದ ಅವಳಿಗಿನ್ನೂ ಧೈರ್ಯ ಬಂತು. ಹಣ್ಣುಗಳ ಹಾಗೂ ಸಿಹಿತಿಂಡಿಗಳ ತಟ್ಟೆಯನ್ನು ಅವನೆದುರು ತಂದಿಟ್ಟು ಪಾತ್ರೆಗೆ ಹಾಲು ಬಾಗಿಸುತ್ತ, "ಇವುಗಳಿಂದ ತಮ್ಮ ಆಯಾಸ ನೀಗಬಹುದಷ್ಟೇ?" ಎಂದು ನಯವಾಗಿ

ಮನವೊಲಿಸುವವಳಂತೆ ಹೇಳಿದಳು.

ಅವಳಿಂದ ದೂರದೂರವೇ ಇರುತ್ತ ಚಾತುರ್ಯ ಅವುಗಳಲ್ಲಿ ತನಗೆ ಬೇಕಾದುದನ್ನು ತಿನ್ನುತ್ತ ನಿಸ್ಸಂಕೋಚವಾಗಿ ಹರಟಲಾರಂಭಿಸಿದನು. ಆದರೆ ಅಗ್ನಿಸಾಕ್ಷಿಯಾಗಿ ತನ್ನನ್ನು ವರಿಸಿದ ತನ್ನನ್ನು ಪತಿಯೆಂದೇ ಭಾವಿಸಿರುವ ರಾಜಕುಮಾರಿಯನ್ನು ದೂರವಿಡಲು ಅವನಿಗೆಂತು ಸಾಧ್ಯ? ರಾಜಕುಮಾರಿ ತನ್ನೊಡನೆ ಸಲುಗೆ ಬೆಳೆಸಲು ಪೂರ್ಣ ನಿರ್ಧಾರವನ್ನೇ ಕೈಕೊಂಡಿರುವುದನ್ನು ಮನಗಂಡ ಚಾತುರ್ಯನ ಎದೆ ಮುಂದಾಗಲಿರುವುದನ್ನು ನೆನೆದು ನಡುಗಿತು. ತನ್ನನ್ನೇ ಪತಿಯೆಂದು ನಂಬಿರುವ ಈ ಹಿರಿಯ ರಾಜಕುಮಾರಿ ನಿಜವಾ

# ಪ್ರಥಮ ರಾತ್ರಿಯ ಬದಲು ಕಥಾ ಕಾಲಕ್ಷೇಪ....

ಗಿಯೂ ತನ್ನ ಮಿತ್ರ ಮದನಕಾಮನ ಹೆಂಡತಿಯಾಗಬೇಕಿರುವಾಗ ತನ್ನಿಂದ ಅಚಾತುರ್ಯ ಘಟಿಸದಂತೆ ಎಚ್ಚರವಹಿಸುವುದು ಹೇಗೆಂಬುದು ಅವನಿಗೆ ತಿಳಿಯದಂತಾಯಿತು. ಕೊನೆಗವನು ಸುಳ್ಳು ಮಾತುಗಳಿಂದಲೇ ಅವಳನ್ನು ದೂರವಿಡಲು ಪ್ರಯತ್ನಿಸುವುದಕ್ಕಿಂತ ಅವಳ ವಿಷಯೇಚ್ಛೆಯ ದಾರಿಯನ್ನೇ ಬದಲಿಸಿ ಅದನ್ನು ಶಮನ ಮಾಡಲು ನಿರ್ಧರಿಸಿ ಅತ್ಯಂತ ನಿರಪಾಯಕಾರಿಯಾದ ಮಾರ್ಗವನ್ನು ಅನುಸರಿಸಿದನು. ಅಂತೆಯೆ ಮೋಜಿನ, ಕಾಲ್ಪನಿಕ ಕತೆಗಳನ್ನು ಹೇಳಿ ಅವಳ ಆಸ್ಥೆಯನ್ನು ಆ ಕಡೆಗೆ ತಿರುಗಿಸಬೇಕೆಂದೆಣಿಸಿ, ಅವನು "ರಾಜಕುಮಾರಿ, ಮಲಗುವ ಮೊದಲು ಒಳ್ಳೆಯ ಕತೆಗಳನ್ನು ಕೇಳಿದರೆ ನಿದ್ರೆಯೂ ಸುಖಮಯವಾಗಿರುವುದಲ್ಲದೆ ಮರುದಿನ ಎದ್ದಾಗಲೂ ಆಲಸ್ಯವೆನಿಸುವುದಿಲ್ಲ. ನನ್ನ ಮಟ್ಟಿಗಂತೂ ಇದು ಬಹು ಉತ್ತಮ ಅನುಭವವೆನಿಸಿಬಿಟ್ಟಿದೆ. ಈ ಪರಿಪಾಠವನ್ನು ನೀನೂ ಇಟ್ಟುಕೊಳ್ಳುವುದು ಯೋಗ್ಯವೆಂದು ನನಗನಿಸುತ್ತದೆ. ನೀನೇನ್ನುವಿ?" ಎಂದು ವಿಚಾರಿಸಿದನು.

ಅದಕ್ಕೊಪ್ಪಿ ರಾಜಕುಮಾರಿ ಅವನ ಬದಿಗೆ ಆಸನವೊಂದರಲ್ಲಿ ಕುಳಿತುಕೊಂಡಾಗ ಚಾತುರ್ಯನಿಗೆ ಹಾಯೆನಿಸಿತು. ಯಾರನ್ನು ಮನವೊಲಿಸುವ ಕಲೆಯನ್ನು ಹುಟ್ಟಿನಿಂದಲೇ ಪಡೆದ ಬುದ್ಧಿ ಚಾತುರ್ಯ ಕತೆ ಹೇಳಲಾರಂಭಿಸಿದ. ಅವನ ಧ್ವನಿಗೇ ಮರುಳಾದ ರಾಜಕುಮಾರಿ ಮಂತ್ರ ಮುಗ್ಧಳಂತೆ ತನ್ನ ಹೃದಯವನ್ನೇ ಕಿವಿಯಾಗಿಸಿಕೊಂಡು ಆಲಿಸತೊಡಗಿದಳು.

ಹಿಂದೊಮ್ಮೆ ಧರ್ಮಪುರಿಯೆಂಬ ಮಹಾನಗರಿಯನ್ನು ಧರ್ಮನಂದ ಎಂಬ ಅರಸು ಆಳುತ್ತಿದ್ದನು. ಅವನ ಆಳಿಕೆ ದೇವತೆಗಳೂ ಅಸೂಯೆಪಡುವಷ್ಟು ಉತ್ತಮವಾಗಿತ್ತು. ಪ್ರಜೆಗಳನ್ನು ಸುಖದಲ್ಲಿಟ್ಟ ಅವನಿಗೆ ಯಾವ ಕೊರತೆಯೂ ಇರದಿದ್ದರೂ ಅನೇಕ ವರುಷಗಳ ವರೆಗೆ ಮಕ್ಕಳಾಗಿರದಿರುವುದು ಮಾತ್ರ ಅವನ ವೈಯಕ್ತಿಕ ಜೀವನದಲ್ಲಿ ಕಹಿ ಬೆರೆಸಿತ್ತು. ಸಕಲ ಶಾಸ್ತ್ರಗಳನ್ನು ಬಲ್ಲ ಅವನು ಹಿರಿಯರ ಉಪದೇಶದಂತೆ ಇನ್ನು ಹೆಚ್ಚು ಸತ್ಕಾರ್ಯಗಳನ್ನು ಮಾಡತೊಡಗಿದನು. ಅರಸನ ಕೃತಿಯಿಂದ ಸಂತುಷ್ಟನಾದ ದೇವನು ಕೊನೆಗೊಮ್ಮೆ ಅವನ ಇಚ್ಛೆಯನ್ನು ಈಡೇರಿಸಿದನು. ಸುಮುಹೂರ್ತದಲ್ಲಿ ಅವನು ಗಂಡು ಮಗುವೊಂದರ ತಂದೆಯಾದನು.

ಆದರೆ ತನ್ನ ಅಭೀಷ್ಟ ಈಡೇರಿಸಿದ ಮಾತ್ರಕ್ಕೆ ಧರ್ಮನಂದನು ತನ್ನ ಧರ್ಮ ಕಾರ್ಯಗಳನ್ನು ನಿಲ್ಲಿ

ಸಲಿಲ್ಲವಷ್ಟೇ ಅಲ್ಲ ಧರ್ಮದಲ್ಲಿ ಶ್ರದ್ಧೆ ಇನ್ನೂ ಹೆಚ್ಚಾಯಿತು. ಮೂರು ವರುಷಗಳ ನಂತರ ಸುದೈವದಿಂದ ಅವನಿಗೆ ಮತ್ತೊಂದು ಗಂಡು ಮಗುವಾಯಿತು. ಇಬ್ಬರನ್ನೂ ಅರಸನು ತನ್ನ ಕಣ್ಣುಗಳಂತೆ ಬೆಳೆಸಿದನು.

ಧರ್ಮನಂದನ ವೈಯಕ್ತಿಕ ಜೀವನ ಸುಖ-ಶಾಂತಿಗಳಿಂದ ಸಮೃದ್ಧವಾದ ಅರಸು, ಪ್ರಜೆಗಳಿಬ್ಬರೂ ಸರಾಗವಾಗಿ ಬಾಳುತ್ತಿರುವಾಗಲೇ ಒಂದು ದಿನ ತೀರ ಅನಿರೀಕ್ಷಿತವಾಗಿಯೇ ಅರಸನ ಜೀವನ ಚಕ್ರದಲ್ಲಿ ಒಂದು ವಿಷಘಟ್ಟವು ಆರಂಭವಾಯಿತು. ಒಮ್ಮೆಲೆ ನೆರೆಹೊರೆಯ ಚಿಕ್ಕಪುಟ್ಟ ರಾಜರೆಲ್ಲ ಒಂದುಗೂಡಿ ಒಂದು ರಾತ್ರಿ ಸೈನ್ಯ ಸಮೇತವಾಗಿ ಧರ್ಮಪುರಿಯನ್ನು ಹೊಕ್ಕು ಹಾಳು ಗೈದು ವಶಪಡಿಸಿಕೊಂಡರು. ಧರ್ಮನಂದನ ಸೌಖ್ಯ ಹಾಗೂ ವೈಭವಗಳಿಂದ ಅಸೂಯೆಗೊಂಡಿದ್ದ ಈ ರಾಜರು ಧರ್ಮನಂದ ಅವನ ಹೆಂಡತಿ ಮಕ್ಕಳನ್ನು ನಿರ್ಗತಿಕರನ್ನಾಗಿ ಮಾಡಿ ಹೊರಗಟ್ಟಿಬಿಟ್ಟರು. ಧರ್ಮಪುರಿಯಿಂದ ಹೊರಬಿದ್ದಾಗ ಬಿಡಿಕಾಸು ಅವರ ಬಳಿ ಇರಲಿಲ್ಲ. ಉಪಜೀವನಕ್ಕಾಗಿ ಭಿಕ್ಷಾಟನವೊಂದೇ ಅವರಿಗುಳಿದಿತ್ತು.

ದಿನಗಳುರುಳಿದಂತೆ ಭಿಕ್ಷಾವೃತ್ತಿ ಅವರಿಗೆ ಮೈಗೂಡಿಕೊಂಡುಬಿಟ್ಟಿತಾದರೂ ಧರ್ಮನಂದನ ಗುಣ ಹಾಗೂ ಮನಸ್ಸುಗಳಲ್ಲಿ ಯಾವ ವ್ಯತ್ಯಾಸವೂ ಆಗಲಿಲ್ಲ. ನಾಳೆಗೇನು ಎಂಬ ಚಿಂತೆ ಅವನನ್ನೆಂದೂ ಕಾಡಲಿಲ್ಲ. ಹೀಗೆಯೇ ಒಂದು ದಿನ ಕುಳಿತಾಗ ಅವನು ತನ್ನ ಮಕ್ಕಳಿಬ್ಬರ ಭವಿಷ್ಯತ್ತನ್ನು ಕುರಿತು ಆಲೋಚಿಸಲಾರಂಭಿಸಿದ. "ನನ್ನ ಜೀವನವನ್ನು ನಾನು ಭಿಕ್ಷಾಟನೆಯಲ್ಲಿಯೇ ಕಳೆದರೂ ನಡೆಯುವುದು. ಆದರೆ ನನ್ನ ಪುತ್ರರಿಬ್ಬರೂ ದಾರಿ ತಪ್ಪಿದರೆ ಮಾತ್ರ ಅವರನ್ನು ಹಾಳು ಮಾಡಿದ ಹೊಣೆ ನನ್ನದಾಗುವುದು. ಏನಾದರೂ ಮಾಡಿ ಅವರಿಗೆ ವಿದ್ಯೆ ಕಲಿಸಿದರೇನೇ ನನ್ನ ಕರ್ತವ್ಯ ಪೂರ್ಣವಾಗುವದು ಎಂದು ತನ್ನೊಳಗೆ ಅಂದುಕೊಂಡು ಧರ್ಮಾರ್ಥವಾಗಿ ಬಾಲಕರಿಗೆ ವಿದ್ಯೆ ನೀಡಬಲ್ಲ ಗುರುವಿನ ಶೋಧದಲ್ಲಿ ಅಂದಿನಿಂದಲೇ ತೊಡಗಿದನು. ಅಂಥವರಾರೂ ಸಿಗದಾಗಲು ಕೆಲವು ಬಾಲಕರಿಗೆ ಪಾಠ ಹೇಳಿಕೊಡುತ್ತಿದ್ದ ಬ್ರಾಹ್ಮಣನಲ್ಲಿ ತೆರಳಿ ಅವನಿಗೆ ಸಾಷ್ಟಾಂಗವೆರಗಿದನು.

"ಪೂಜ್ಯರೆ, ಭಿಕ್ಷೆಯಿಂದಲೇ ಜೀವಿಸುತ್ತಿರುವ ನಾನು ಕಡು ಬಡವ. ನನ್ನ ಮಕ್ಕಳಿಬ್ಬರನ್ನೂ ಶಿಷ್ಯರೆಂದು ತಾವು ಸ್ವೀಕರಿಸುವದಾದರೆ ನಾನು ಕೃತಾರ್ಥನಾಗುವೆ. ಈ ಇಬ್ಬರಲ್ಲಿ ಒಬ್ಬ ಬಾಲಕನನ್ನೇ ನಾನು ತಮಗೆ ಗುರುದಕ್ಷಿಣೆಯೆಂದರ್ಪಿಸುವೆ. ನನ್ನಲ್ಲಿ ಬೆಲೆಬಾಳುವಂತಹ ಬೇರಾವ ವಸ್ತುವು ಇರುವುದಿಲ್ಲ" ಎಂದು ದೈನ್ಯದಿಂದ ಪ್ರಾರ್ಥಿಸಿದನು.

ಬ್ರಾಹ್ಮಣ ವಿದ್ವಾಂಸನು ಬಾಲಕರಿಬ್ಬರನ್ನೂ ಒಮ್ಮೆ ನೋಡಿ, ಅವರು ಸುಲಕ್ಷಣವಾಗಿರುವುದನ್ನು ಕಂಡು ಈತನ ಮಾತಿಗೊಪ್ಪಿದನು.

ಅದರಿಂದ ನಂದ ದಂಪತಿಗೆ ಸಮಾಧಾನದ ನಿಟ್ಟುಸಿರು ಬಿಡುವಂತಾಯಿತು. ಆದರೂ ಮಕ್ಕಳನ್ನು ಈ ರೀತಿ ಬಿಟ್ಟು ಹೋಗಬೇಕಾದಾಗ ಅವರಿಗೆ ಆದ ದುಃಖವೆಷ್ಟು ಎಂಬುದನ್ನು ಊಹಿಸಿಯೇ ತಿಳಿಯಬೇಕು. ಅವರು ಹಿಂದೊಮ್ಮೆ ಅರಸು-ಅರಸಿಯರಾಗಿದ್ದರೆಂಬುದನ್ನು ನೆನೆದರೆ ಅವರ ದುಃಖದ ಆಳವೆಷ್ಟೆಂಬುದರ ಕಲ್ಪನೆ ಬರಬಹುದು.

ಬಾಲಕರಿಬ್ಬರನ್ನೂ ತನ್ನ ಆಶ್ರಮದಲ್ಲಿಯೇ ಇರಿಸಿಕೊಂಡ ಬ್ರಾಹ್ಮಣಗುರುವು ಅವರಿಬ್ಬರ ಭವಿಷ್ಯತ್ತನ್ನು ಬೇರೆಬೇರೆಯಾಗಿಯೇ ರೂಪಿಸಲು ನಿರ್ಧರಿಸಿದನು. ಹಿರಿಯ ಹುಡುಗನನ್ನು ತನ್ನ ಗೋಶಾಲೆಯನ್ನು ನೋಡಿಕೊಳ್ಳಬೇಕೆಂದು ನಿಯಮಿಸಿದನು. ಆಕಳುಗಳನ್ನು ಮೇಯಿಸುವುದು, ಮೈ ತೊಳೆಯುವುದು, ಅಡವಿಗೆ ಹೊಡೆದುಕೊಂಡು ಹೋಗುವುದು ಮುಂತಾದ ಕೆಲಸಗಳು ಅವನ ಪಾಲಿಗೆ ಬಂದು ಇತರ ವಿದ್ಯೆಯೆಂಬುದು ಅವನಿಗೆ ಸೊನ್ನೆಯೇ ಆಯಿತು. ಆದರೆ ಗುರುವು ಚಿಕ್ಕವನಿಗೆ ಮಾತ್ರ ಪೂರ್ಣ ಮನಸ್ಸುಕೊಟ್ಟು ವೇದ, ಶಾಸ್ತ್ರ ಹಾಗೂ ಹಲವಾರು ವಿದ್ಯೆಗಳನ್ನು ಹೇಳಿಕೊಟ್ಟು ಅವನು ಅವುಗಳಲ್ಲೆಲ್ಲ ಪಾರಂಗತನಾಗುವಂತೆ ಮಾಡಿದನು. ಗಾಳಿಯಲ್ಲಿ ತೇಲಾಡುವುದು, ದೇಹಾಂತರ ಹೊಂದುವುದು, ಕಬ್ಬಿಣದಿಂದ ಬಂಗಾರ ತಯಾರಿಸುವುದು ಮುಂತಾದವು ಚಿಕ್ಕವನು ಕಲಿತ ವಿದ್ಯೆಗಳಲ್ಲಿ ಹಲವು ಮಾತ್ರ.

ವಿದ್ಯಾಪಾರಂಗತನಾದ ಚಿಕ್ಕವನಿಗೆ, ಗುರುವು ವಿದ್ಯೆಗಳನ್ನೆಲ್ಲ ತನಗೆಯೇ ಹೇಳಿಕೊಡುತ್ತಿರುವುದು ಹಾಗು ತನ್ನಣ್ಣನನ್ನು ಸಂಪೂರ್ಣ ಅಲಕ್ಷಿಸಿಗುವುದು ಮೊದಮೊದಲು ಸೋಜಿಗವಾಗಿಯೇ ಕಂಡಿತಾದರೂ ಅನಂತರ ಸಾವಕಾಶವಾಗಿ ಅದರ ನಿಗೂಢ ಅರ್ಥವಾಗಹತ್ತಿತು. ಗುರುವು ತನ್ನನ್ನು ದಕ್ಷಿಣೆಯೆಂದಿಟ್ಟುಕೊಂಡು ಅಣ್ಣನನ್ನು ತಂದೆ-ತಾಯಿಗಳಿಗೆ ಮರಳಿ ಒಪ್ಪಿಸುವನು ಆಗ ಏನೂ ವಿದ್ಯೆಬಾರದ ಅಣ್ಣನನ್ನು ಕಟ್ಟಿಕೊಂಡು ತಂದೆ ತಾಯಿಗಳು ಮತ್ತೆ ಭಿಕ್ಷಾಟನದಲ್ಲಿಯೇ ಜೀವನ ಕಳೆಯಬೇಕಾಗುವುದಲ್ಲ ಎಂದು ಪರಿತಪಿಸಿದನು. ಅಂತೆಯೆ ಈ ವಿಚಾರವಾಗಿ ಅವರಿಗೆ ಮೊದಲೇ ಎಚ್ಚರಿಕೆ ಕೊಡುವದೆಂದು ನಿರ್ಧರಿಸಿದನು.

ಆದರೆ ತಂದೆ-ತಾಯಿಗಳು ಎಲ್ಲಿರುವರೆಂ





“ಗುಂಪಲ್ಲಿ ಯಾರೋ ‘ಹೊಸ ನಮೂನೆ ಸೀರೆ ಬಂದಿದೆ’ ಅಂತ ಕೂಗಿದ್ರು ಅಷ್ಟೆ. ಓಡೋಕ್ಕೆ ಶುರುಮಾಡಿಬಿಟ್ಳೆ.”

ಬುದು ಅವನಿಗೆ ಗೊತ್ತಿರಲಿಲ್ಲ. ಅದನ್ನು ಗುರುತಿಸಲೋಸುಗ ಅವನು ತಾನು ಕಲಿತ ವಿದ್ಯೆಯೊಂದರ ಮೂಲಕ ದಿವ್ಯದೃಷ್ಟಿಯನ್ನು ಪಡೆದಾಗ ದೂರದ ಹಳ್ಳಿಯೊಂದರಲ್ಲಿ ಭಿಕ್ಷಾ ಪಾತ್ರೆಯಲ್ಲಿಯೆ ದೊರೆತುದನ್ನು ಮಾತ್ರ ಉಂಡು, ದೇವಾಲಯವೊಂದರಲ್ಲಿರುತ್ತಿರುವುದನ್ನು ಕಂಡನು. ಬಿಕ್ಕೆ ಬೇಡುವುದಿನ್ನೂ ಅವರಿಗೆ ತಪ್ಪಲಿಲ್ಲವಲ್ಲ ಎಂದವನಿಗೆ ಬಹಳ ದುಃಖವಾಯಿತು. ಅವರನ್ನು ಕಷ್ಟದಿಂದ ದೂರ ಮಾಡುವುದು ತನ್ನ ಕರ್ತವ್ಯವೆಂದು ಬಗೆದನು. ಆದರೆ ಗುರುವಿಗೆ ಗೊತ್ತಾಗದಂತೆ ಒಂದೇ ರಾತ್ರಿಯಲ್ಲಿ ಅವರ ಹತ್ತಿರ ಹೋಗಿಬರುವುದೆಂತೆಂಬ ಸಮಸ್ಯೆ ಅವನನ್ನು ಕಾಡತೊಡಗಿತು. ಕೊನೆಗೊಂದು ಉಪಾಯ ಹೊಳೆಯಿತು. ತನ್ನ ವಿದ್ಯೆಯ ಬಲದಿಂದ ಆ ರಾತ್ರಿಯೆ ಗರುಡಪಕ್ಷಿಯಾಗಿ ರೂಪಾಂತರ ಹೊಂದಿ ತನ್ನ ತಂದೆ-ತಾಯಿಗಳು ಇರುವಲ್ಲಿಗೆ ಹಾರಿಹೋದನು. ಅಲ್ಲಿ ಮರಳಿ ಮಾನವ ರೂಪ ಧಾರಣ ಮಾಡಿ ಅವರನ್ನೆಬ್ಬಿಸಿದಾಗ ಅವನು ತಮ್ಮ ಮಗನೇ ಎಂದವರಿಗೆ ಒಮ್ಮೆಲೇ ನಂಬುವುದಾಗಲಿಲ್ಲ-ಅಷ್ಟೊಂದು ಬೆಳೆದಿದ್ದನವನು! ತಮ್ಮ ಮಗ ವಿದ್ಯಾ ಸಂಪನ್ನನಾಗಿರುವುದನ್ನು ಅರಿತು ಅವರಿಬ್ಬರೂ ಸಂತಸದಿಂದ ನಲಿದರು. ಕೊನೆಗೆ ಅವನು ತನ್ನ ಗುರು ಮಾಡಿರುವ ಯೋಜನೆಯನ್ನು ಸಾದ್ಯಂತವಾಗಿ ವಿವರಿಸಿ ಅವರಿಬ್ಬರೂ ಆಶ್ರಮಕ್ಕೆ ಬರಬೇಕೆಂದೂ ತನ್ನಣ್ಣನನ್ನೇ ಗುರುವಿಗೆ ದಕ್ಷಿಣೆಯೆಂದಿತ್ತು ತನ್ನನ್ನು ಉಳಿಸಿಕೊಂಡರೆ ಪ್ರಯೋಜನವಾಗುವುದೆಂಬುದನ್ನೂ ಅವರಿಗೆ ಮನಗಾಣಿಸಿಕೊಟ್ಟನು. ಅವರದಕ್ಕೊಪ್ಪಿದ ನಂತರ ಅವರಿಗೆ ನಮಸ್ಕರಿಸಿ ಮತ್ತೆ ಗರುಡನ ರೂಪ ತಳೆದು ಬೆಳಗಾಗುವುದರೊಳಗೆ ಆಶ್ರಮಕ್ಕೆ ಮರಳಿದನು.

ಕೆಲದಿನಗಳ ನಂತರ ಧರ್ಮನಂದ ತನ್ನ ಹೆಂಡತಿಯೊಡನೆ ಆಶ್ರಮಕ್ಕೆ ಬಂದನು. ಅವರು ಮುನ್ಸೂಚನೆಯೀಯದೆ ಬಂದುದರಿಂದ ಗುರುವು ದಿಕ್ಕೆಟ್ಟನು. ದನಗಳೊಂದಿಗೆ ಅಡವಿಗೆ ಹೋಗಿದ್ದ ಅವರ ಹಿರಿಯ ಮಗನನ್ನು ಲಗುಬಗೆಯಿಂದ ಮರಳಿ ಕರೆಸಿ ಎಣ್ಣೆ ಹಚ್ಚಿ ಸ್ನಾನ ಮಾಡಿಸಿ ತನ್ನ ವರ್ಗದಲ್ಲಿ ಮುಂದಿನ ಸಾಲಿನಲ್ಲಿ ಮೊದಲಿಗನಾಗಿ ಕೂಡಿಸಿದನು. ಚಿಕ್ಕವನನ್ನು, ಕೈ ಕಾಲುಗಳಿಗೆ ಸರಪಳಿ ಕಟ್ಟಿ ಕಟ್ಟಕಡೆಗೆ ಮೂಲೆಯಲ್ಲಿ ನಿಲ್ಲಿಸಿದನು. ಆನಂತರ ನಂದ ದಂಪತಿಯನ್ನು ವರ್ಗದೊಳಕ್ಕೆ ಕರೆದು ತಂದು ಅವರ ಹಿರಿಯ ಮಗ ಸಕಲ ವಿದ್ಯಾಪಾರಂಗತನಾಗಿರುವನೆಂದೂ ಕಿರಿಯನು ಏನೂ ಕಲಿಯದ ತುಂಟನಾಗಿದ್ದಾನೆಂದೂ ಹೇಳಿದಾಗ ಅವನ ಕುತಂತ್ರದ ಅರಿವು ಅವರಿಗಾಯಿತು.

ಆಗ ಧರ್ಮನಂದ ಕೃತ್ರಿಮ ಆನಂದ ವ್ಯಕ್ತಪಡಿಸಿದನಲ್ಲದೆ, “ತಮಗೆ ನಾನು ತುಂಬ ಕೃತಜ್ಞನಾಗಿದ್ದೇನೆ. ತಮಗೆ ಹೆಚ್ಚು ಜಾಣನಾದವನನ್ನೇ ಗುರುದಕ್ಷಿಣೆಯೆಂದು ಕೊಡುವುದು ನಮ್ಮ ಕರ್ತವ್ಯ. ಅಂತೆಯೆ ನಮ್ಮ ಹಿರಿಯ ಮಗನನ್ನು ತಾವು ದಯವಿಟ್ಟು ಸ್ವೀಕರಿಸಬೇಕು,” ಎಂದು ಅತ್ಯಂತ ನಮ್ರಸ್ವರದಲ್ಲಿ ಬಿನ್ನವಿಸಿಕೊಂಡು ತನ್ನ ಕಿರಿಯ ಮಗನನ್ನು ಹತ್ತಿರೆಳೆದುಕೊಂಡನು.

ತನ್ನ ಯೋಜನೆ ತಲೆಕೆಳಗಾಯಿತಲ್ಲವೆಂದು ಗುರು ತುಟಿ ಕಚ್ಚಿದನಾದರೂ ಅವನಿಗೇನನ್ನೂ ಮಾಡಲು ಬರುವಂತಿರಲಿಲ್ಲ. ‘ತಾನೊಂದು ಬಗೆದರೆ ದೈವವೊಂದು ಬಗೆಯಿತು’ ಎಂದುಕೊಂಡು ಹಿರಿಯವನನ್ನು ಮತ್ತೆ ಅಡವಿಗಟ್ಟಿದನು.

ತಮ್ಮ ಕಿರಿಯ ಮಗನೊಂದಿಗೆ ಧರ್ಮನಂದ

ಸಂತೋಷದಿಂದ ಆವನು ಹೇಳಿದ ಬೆಲೆ ಕೊಟ್ಟು ಹಾಗು ಅವರ ಹೆಂಡತಿ ಆಶ್ರಮದಿಂದ ಹೊರ ಬಿದ್ದು ಬೇರೂರಿಗೆ ನಡೆದರು. ಬಿಕ್ಕೆ ಬೇಡದೆ ಹೊಟ್ಟೆಗೆ ಗತಿಯಿಲ್ಲದುದನ್ನು ಕಂಡು ಮಗನು ತಂದೆಯನ್ನು ಕುರಿತು, "ಅಪ್ಪಾ ಇನ್ನು ನಾವು ಬಿಕ್ಕೆ ಬೇಡುವುದು ಸಾಕು. ನನ್ನ ವಿದ್ಯೆಯನ್ನು ಉಪಯೋಗಿಸಿಕೊಂಡು ನಾವು ಹಣ ಗಳಿಸಿ ಮರ್ಯಾದೆಯಿಂದ ಬಾಳಬಹುದು," ಎಂದು ಹೇಳಿ ಆ ಊರಿನ ಅರಸನಿಗೆ ಹುಂಜಗಳ ಮೇಲೆ ಪ್ರೀತಿ ಬಹಳ ವೆಂದೂ ಅಂತೆಯೇ ತಾನು ಶ್ರೇಷ್ಠ ಹುಂಜದ ರೂಪ ತಳೆಯುವುದಾಗಿಯೂ ತಂದೆಯು ೧೦೦ ಚಿನ್ನದ ಮೊಹರುಗಳಿಗೆ ತನ್ನನ್ನು ಮಾರಬೇಕೆಂದೂ ಹೇಳಿದನು. ಅದಕ್ಕೆ ಧರ್ಮನಂದ ಒಮ್ಮೆಲೆ ಒಪ್ಪದಿದ್ದರೂ ಕೊನೆಗೆ ಹೂಂಗುಟ್ಟಬೇಕಾಯಿತು.

ಯೋಜನೆಯಂತೆಯೆ ಮಗನು ಹುಂಜದ ರೂಪ ತಳೆದ ನಂತರ ನಂದನು ಅರಮನೆಯೆಡೆ ಗೊಯ್ದಾಗ ಅರಸ ಅದನ್ನು ಕಂಡು ತುಂಬ ಕೊಂಡುಕೊಂಡನು. ಒಡನೆಯೆ ಅರಮನೆಯ ಕೋಳಿ ಸಾಕಣೆಯ ವಿಭಾಗದ ಮುಖ್ಯಸ್ಥನನ್ನು ಕರೆದು ಅದನ್ನವನೆಡೆಗೆ ಕೊಟ್ಟನು. ಈ ಮೇಲ್ದರಗತಿಯ ಹುಂಜಕ್ಕಾಗಿಯೇ ವಿಶೇಷವಾದ ಪಂಜರವನ್ನು ನಿರ್ಮಿಸಿ ಅದರಲ್ಲಿರಿಸಲಾಯಿತು.

ಮರುದಿನ ಮುಂಜಾನೆ ಅರಸನು ಹೊಸ ಹುಂಜವನ್ನು ತಾರೆಂದು ಸೇವಕರಿಗೆ ಆಜ್ಞಾಪಿಸಿದನು. ಆದರೆ ಪಂಜರದಲ್ಲಿ ಅದು ಇಲ್ಲದುದನ್ನು ಕಂಡು ಅವರೆಲ್ಲ ದಿಗ್ಭ್ರಾಂತರಾದರು.

(ಮುಂದಿನ ಸಂಚಿಕೆ ನೋಡಿ)

## ಉಳಿವವರು

ಗುರು ಹಲ್ಯವಿಗೆ ಯಾರೋ ಕೇಳಿದರು, "ನಿಮ್ಮನ್ನು ಭೇಟಿಯಾಗಲು ಬಂದವರು ಎಂತಹ ನಡತೆಯವರೆಂದು ತೀರ್ಮಾನಿಸಲು ನೀವು ನಿಮ್ಮ ವರ್ತನೆಯಲ್ಲಿ ಏನಾದರೂ ಬದಲಾವಣೆ ಮಾಡಿಕೊಳ್ಳುತ್ತಿದ್ದೀರಾ?"

ಗುರು ಹಲ್ಯವಿ ಉತ್ತರಿಸಿದರು: "ನಾನು ಸಾಮಾನ್ಯವಾಗಿ ಬಹಳ ವಿನಯದಿಂದ ವರ್ತಿಸುತ್ತಿದ್ದೆ. ನನ್ನ ವಿನಯವನ್ನು ಕಂಡು ಸಿಡುಕಿನಿಂದಲೋ, ಅಹಂಕಾರದಿಂದಲೋ ಮಾತನಾಡುವವರನ್ನು ನಾನು ಆದಷ್ಟು ಬೇಗ ದೂರ ಇಟ್ಟೆ. ನನ್ನ ಸೌಮ್ಯತೆ ಮತ್ತು ವಿನಯವನ್ನು ಕಂಡು ನನ್ನನ್ನು ಗೌರವಿಸತೊಡಗಿದವರನ್ನು ಕೂಡಲೇ ತೊರೆದೆ."

• ಮುನಿಯಾಲ್ ಗಣೇಶ್ ಶೆಣೈ

## ಹೃದಯವಂತಿಕೆ

ಮಾಧವ ಪೈಗಳು ಆಗಿನ್ನೂ ಪ್ರಸಿದ್ಧಿಗೆ ಬಂದಿರಲಿಲ್ಲ. ಡಾಕ್ಟರಾಗಿ ಪ್ರಾಕ್ಟೀಸ್ ಮಾಡುತ್ತಿದ್ದರು. ಅವರೊಮ್ಮೆ ಒಬ್ಬ ಬಡವಳ ಹೆರಿಗೆಯನ್ನು ಮಾಡಿಸಿದರು. ಕೊನೆಯಲ್ಲಿ "ಈ ಸೀರೆಯನ್ನು ಬದಲಾಯಿಸಿ ಬೇರೆ ಉಟ್ಟುಕೋಮ್ಮ" ಎಂದಾಗ ಆಕೆ "ಬೇರೆ ಎಲ್ಲಿದೆ ನನ್ನ ಹತ್ತಿರ? ನನಗಿರುವುದು ಇದೊಂದೇ ಸೀರೆ, ನನ್ನ ದೇವರೇ," ಎಂದಳು. ಮಾಧವ ಪೈಗಳ ಕಣ್ಣಿನಿಂದ ಧಾರಾಕಾರವಾಗಿ ನೀರು ಸುರಿಯಿತು. ಅವರು ತಾವೇ ಅಂಗಡಿಗೆ ಹೋಗಿ ಎರಡು ಹೊಸ ಸೀರೆಗಳನ್ನು ತಂದು ಕೊಟ್ಟರು. ಕುಗ್ರಾಮವಾಗಿದ್ದ ಮಣಿಪಾಲದಲ್ಲಿ ಕಸ್ತೂರಿ ಬಾ ಆಸ್ಪತ್ರೆಯನ್ನು ಸ್ಥಾಪಿಸಿ ಅದನ್ನು ವೈದ್ಯಕೀಯ ಕೇಂದ್ರವನ್ನಾಗಿ ಮಾಡಿದ ಕೀರ್ತಿ ತೋನ್ಸೆ ಮಾಧವ ಅನಂತ ಪೈ ಅವರದ್ದು.

• ಡಿ. ಗುಂಡೂರಾವ್

೨೭

# "ನೀ ಇರು" ಎನ್ನುವ ನೀರು

ಮಕ್ಕಳು ತಮ್ಮ ವಿನೋದಕ್ಕಾಗಿ ಕಲ್ಪಿಸಿಕೊಳ್ಳುವ ಹವ್ಯಾಸಗಳಲ್ಲಿ ಅಂತಾಕ್ಷರಗಳ ವಿಹಾರ, ಹಾಡಿನ ಬಂಡಿಯ ಸವಾರಿ, ಇತ್ಯಾದಿ. ಮಗುವೊಂದು ಇನ್ನೊಂದಕ್ಕೆ ಸೂಚಿಸುತ್ತದೆ, "ಕುಬೇರನಿಗೆ ನೀರು ಬೇಕು" ಅಹುದು. ಸಮಸ್ತ ಧನಕ್ಕೆ ಅಧಿಪತಿಯಾದ ಕುಬೇರನೇ ಆಗಲಿ, ಕಡುಬಡತನದ ಕುಚೇಲನೇ ಆಗಲಿ ಯಾರಾದರೇನಂತೆ? ನೀರು ಬೇಕೇ ಬೇಕು. ಮಗುವಿನ ಉದ್ದೇಶ ಇದಲ್ಲ, ತಾನು ಉಚ್ಚರಿಸಿದ ವಾಕ್ಯವನ್ನು ತಿರುವುಮುರುವು ಆಗಿ ಓದಿದರೂ ಅದೇ ಅರ್ಥ ಬರುತ್ತದಲ್ಲ. ಅದುವೆ ಅದರ ಸ್ವಾರಸ್ಯ. ಪ್ರಸ್ತುತ ವಾಕ್ಯದಲ್ಲಿನ 'ರ–ರು' ಹಾಗೂ 'ನಿ–ನೀ' ಅಕ್ಷರಗಳ ವ್ಯತ್ಯಾಸ ಮಗುವಿಗೆ ಗೌಣ. ರಾಷ್ಟ್ರದ ಸಮೂಹಮಾಧ್ಯಮಗಳಲ್ಲಿಯೆ ಅಲ್ಪಪ್ರಾಣ, ಮಹಾಪ್ರಾಣಗಳು ಗತಪ್ರಾಣವಾಗುತ್ತಿರುವಾಗ (ಉದಾ– ಭಾರತ ಬಾರತವಾದಂತೆ, ಧನದ ಅಭಾವ ದನದ ಅಭಾವ ಆದಂತೆ) ಹಾಗೆಯೇ ಹ್ರಸ್ವ ದೀರ್ಘಗಳು ಸ್ಥಾನಪಲ್ಲಟಕ್ಕೆ ಗುರಿಯಾಗುತ್ತಿರುವಾಗ ಮಕ್ಕಳ ಮೋಜಿನ ಈ ಆಟದಲ್ಲಿನ ಅಂತರ ಅದೆಂಥದು?

ಹಸಿವೆಯಂತೆ ನೀರಡಿಕೆ ಕೂಡ ಪ್ರತಿಯೊಂದು ಜೀವಿಯ ದೈನಂದಿನ ಅನುಭವ. ನೀರಡಿಸಿದವಗೆ ನೀರು ಕುಡಿದಾಗಲೇ ಸಮಾಧಾನ. "ನೀರಡಿಸಿರ್ದ ಹೊತ್ತಾಜ್ಯ ದೊರಕಿ ಫಲವೇನು?" ಎಂದು ಕವಿ ರಾಘವಾಂಕ ಉಸುರುವಂತೆ, ತಿಳಿಯಾದ ತುಪ್ಪ ತರಲಾರದ ತಣಿವನ್ನು ತಣ್ಣನೆಯ ನೀರು ತರುತ್ತದೆ. ನೀರು ಕುಡಿಯುವುದು ಪ್ರಕೃತಿ ಸಿದ್ಧವಾದ ಸಹಜ ಧರ್ಮ ಆದರೆ ಇನ್ನೊಬ್ಬನಿಗೆ "ನೀರು ಕುಡಿಸುವುದು" ಎಂದರೆ ವಿಕೃತಿಯ ದ್ಯೋತಕ, ವಂಚಿಸುವ ಹವ್ಯಾಸ.

ನೀರಿನ ಮಹತಿಯನ್ನು ಅರಿತ ಪ್ರಾಚೀನರು ಕೆರೆ, ಸರೋವರ, ಹೊಳೆ, ಹಳ್ಳಗಳಂತಹ ನೀರಿನ ಸಾಮೀಪ್ಯವನ್ನು ಗಮನಿಸಿಯೇ ಗ್ರಾಮಗಳನ್ನು ಕಟ್ಟಿಕೊಂಡರು. ತಪೋವನಗಳು ನೆಲಸುವಂತೆ ಮಾಡಿದರು. ಪುಣ್ಯಕ್ಷೇತ್ರಗಳಲ್ಲಿ ತಲೆ ಎತ್ತಿ ನಿಂತುದು ಸಹ ಜಲಾಶಯಗಳ ಸನಿಹದಲ್ಲಿಯೇ.

ಪಂಚಮಹಾಭೂತಗಳಲ್ಲಿ ಒಂದಾದ ನೀರು, ಎಷ್ಟು ಪ್ರಾಚೀನವೋ ಅಷ್ಟೇ ಪ್ರಾಣಿಗಳ ಧಾರಣೆಯ ದೃಷ್ಟಿಯಿಂದ ಪ್ರಮುಖವಾದುದು. "ಪಾನೀಯ, ಪ್ರಾಣಿನಾಂ ಪ್ರಾಣಾಃ." ನೀರಿಲ್ಲದಿದ್ದರೆ ಸಸ್ಯಾದಿಗಳು ಒಣಗುತ್ತವೆ. ಪಶುಪಕ್ಷಿಗಳು ಸಾಯುತ್ತವೆ. ಮಾನವರು ನೀರಿಗಾಗಿ ಬಾಯಿ ಬಾಯಿ ಬಿಡುವಂತಾಗುತ್ತದೆ. ವಾಂತಿ ಭೇದಿಯಂತಹ ತೊಂದರೆ ಉಲ್ಬಣಿಸಿ, ರೋಗಿಯ ಶರೀರದಿಂದ ನೀರೆಲ್ಲ ಬಸಿದು ಹೋಗಿ, ಅವನಿಗೊದಗುವ ನಿರ್ಜಲೀಕರಣದಿಂದ ಸಾವಿಗೆ ಔತಣ. ಈ ಮಾತು ನೀರಿಗೂ ಪ್ರಾಣಕ್ಕೂ ಇರುವ ನಿಕಟ ಸಂಬಂಧಕ್ಕೆ ಹಿಡಿದ ಕೈ ಕನ್ನಡಿ. "ನಹಿ ತೋಯಾದ್ ವಿನಾ ವೃತ್ತಿಃ ಸ್ವಸ್ಥಸ್ಯ, ವ್ಯಾಧಿ ತಸ್ಯವಾ" (ಜೀವಿ ಆರೋಗ್ಯವಂತನೆ ಆಗಲಿ, ರೋಗಪೀಡಿತನೆ ಆಗಿರಲಿ, ನೀರಿಲ್ಲದೆ ಖಂಡಿತ ಬದುಕಲಾರ.) ಈ ಅಂಶವನ್ನು ಗಮನದಲ್ಲಿರಿಸಿಯೇ "ಜೀವನ" ಎಂಬುದು ನೀರು ಎಂಬ ಪದಕ್ಕೆ ಪರ್ಯಾಯವಾಗಿರಲು ಸಾಕು. ಅಲ್ಲದೆ ಅದರ ಸಾಮಾನ್ಯ ಅರ್ಥವಾದ ಬದುಕು ಬಾಳು ಎಂಬುದು ನೀರಿನೊಂದಿಗೆ

ಅದೆಷ್ಟು ಹಾಸುಹೊಕ್ಕಾಗಿ ಸೇರಿಕೊಂಡಿದೆ ಎಂಬುದರ ಪ್ರತೀಕವೂ ಸೈ.

ನೀರಿನದು ಪ್ರವಾಹರೂಪ. ಅವಿರತವಾಗಿ ಹರಿಯುವ ಗುಣ ಅದರದು. ಬೆಟ್ಟದ ಮೇಲಿಂದ ಜಿನುಗಿದ ಜಲಬಿಂದುವಿನೊಂದಿಗೆ, ಇನ್ನೊಂದು, ಮಗದೊಂದು ಮತ್ತೊಂದು ಸೇರಿ, ''ಹನಿ ಹನಿ ಕೂಡಿದರೆ ಹಳ್ಳ'' ಎನ್ನುವಂತೆ, ತೊರೆಯಾಗಿ, ಝರಿಯಾಗಿ, ಹಳ್ಳವಾಗಿ, ಹೊಳೆಯಾಗಿ, ಕಡಲದಾಳವನ್ನು ಸೇರುವತನಕ ಒಂದಿನಿತು ನಿಮಿಷಕೂಡ ವಿರಮಿಸದೇ ಹರಿಯುತ್ತಲೇ ಇರುವುದು. ''ನವ ಮಾಸದೃತಂ ಗರ್ಭಂ, ಭಾಸ್ಕರಸ್ಯ ಗಭಸ್ತಿಭಿಃ ರಸಂ ಪೀತ್ವಾ ಸಮುದ್ರಾಣಾಂ ದ್ಯೌಃ ಪ್ರಸೂತೇ ರಸಾಯನಮ್'' (''ಆಕಾಶರೂಪದ ವನಿತೆ ಸೂರ್ಯ ಕಿರಣಗಳ ನೆರವಿನಿಂದ ಸಾಗರ ಜಲವೆಂಬ ರಸವನ್ನು ಸೇವಿಸಿ, ಕಾರ್ತಿಕದಿಂದ ಆಷಾಢದ ವರೆಗಿನ ಒಂಬತ್ತು ತಿಂಗಳಕಾಲ ಗರ್ಭವನ್ನು ಧರಿಸಿ, ಮೇಘ ಜಲವೆಂಬ ರಸಾಯನವನ್ನು ಪ್ರಸವಿಸುತ್ತಾಳೆ'') ಎಂಬಲ್ಲಿ ವಿಶ್ವದಲ್ಲಿ ನಿತ್ಯವೂ ತಿರುಗುವ ಜಲಚಕ್ರವನ್ನು ಕಾವ್ಯಮಯವಾಗಿ ಬಣ್ಣಿಸಲಾಗಿದೆ.

ಹರಿಯುವುದು ನೀರಿನ ಒಂದು ಗುಣವಾದರೆ, ಕೊಳೆಯನ್ನು ತೊಳೆಯುವುದು ಅದರ ಇನ್ನೊಂದು ಮಹತ್ತರ ಕಾರ್ಯ. ''ಅದ್ಭಿರ್ಗಾತ್ರಾಣಿ ಶುದ್ಧಂತಿ....'' ನಮ್ಮ ಅಂಗಾಂಗಗಳನ್ನೆಲ್ಲ ಹಸನುಗೊಳಿಸುವುದು ನೀರು; ಸ್ನೋ ಕ್ರೀಮ್ ಪೌಡರ್‌ಗಳಂತಹ ಸೌಂದರ್ಯವರ್ಧಕಗಳಲ್ಲ.

ನಿಂತ ನೀರು, ಮಲಿತ ನೀರು ನಿಸರ್ಗ ನಿಯಮಕ್ಕೆ ಹೊರತು. ರಾಜಕೀಯವಾಗಿ, ಧಾರ್ಮಿಕವಾಗಿ ವಿಚಾರಧಾರೆ ಕುಂಠಿತವಾದಾಗಲೆಲ್ಲ ಅದನ್ನು ನಿಂತ ನೀರಿಗೆ ಹೋಲಿಸುವ ರೂಢಿ. ''ನೀರಿನಲ್ಲಿ ಹೋಮ'' ಮಾಡುವುದೆಂದರೆ ವ್ಯರ್ಥಪರಿಶ್ರಮ ಎಂಬ ಅರ್ಥ ಧ್ವನಿತ. ಅದನ್ನೆ ''ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತಾಯಿತು'' ಎನ್ನುವುದು ಜಾನಪದರ ಜಾಣ್ನುಡಿ. ''ಸದ್ಭಿಸ್ತು ಲೀಲಯಾ ಪ್ರೋಕ್ತಂ ಶಿಲಾಲಿಖಿತಮಕ್ಷರಂ ಅಸದ್ಭಿಃ ಶಪಥೇನೋಕ್ತಂ ಜಲೆ ಲಿಖಿತಮಕ್ಷರಂ'' (ಸಜ್ಜನರು ಸಹಜವಾಗಿ ಹೇಳಿದ ನುಡಿ ಕಲ್ಲುಬಂಡೆಯಲ್ಲಿ ಕೊರೆದ ಅಕ್ಷರದಂತೆ ಶಾಶ್ವತ, ತ್ರಿಕಾಲಾಬಾಧಿತ. ಆದರೆ ದುರ್ಜನರು ಆಣೆ ಮಾಡಿ ಉಚ್ಚರಿಸಿದ ಮಾತು ನೀರಿನಲ್ಲಿ ಬರೆದ ಅಕ್ಷರದಂತೆ ತತ್‌ಕ್ಷಣದಲ್ಲಿ ಅಳಿಸಿಹೋಗುವಂಥದು.)

ಶರೀರ ರಚನೆಯ ಹಾಗೂ ಪೋಷಣೆಯ ವಿಷಯದಲ್ಲಿ ಪ್ರಧಾನ ಪಾತ್ರವಹಿಸುವ ನೀರು, ಧೈರ್ಯ, ಸಾಹಸಾದಿಗಳ ಸಂಕೇತ ಕೂಡ. ಅಷ್ಟೊಂದು ದಿಟ್ಟತನ ತೋರದ ವ್ಯಕ್ತಿಯನ್ನು ಕುರಿತು ''ಆತ ಉದ್ದ ನೀರಿಗೆ ಹೋಗುವವನಲ್ಲ'' ಎಂದು ಉದ್ಗರಿಸುತ್ತೇವೆ. ಬಗೆಬಗೆಯ ಅನುಭವ ಪಡೆದವನು ''ಏಳು ಕೆರೆಯ ನೀರು ಕುಡಿದವ'' ಎಂದೆನಿಸಿಕೊಳ್ಳುತ್ತಾನೆ. ಏನಾದರೊಂದು ಅನಾಹುತ ಸಂಭವಿಸಿದಾಗ ಭಯಾನಕ ನೋಟವನ್ನು ಕಂಡು ಹೌಹಾರಿದಾಗ ''ಎದೆಯೊಡೆದು ನೀರಾಯಿತು'' ಎನ್ನುತ್ತೇವೆ. ಎದುರಾಳಿಯನ್ನು ಫಜೀತಿಪಡುವಂತೆ ಮಾಡಿದಾಗ ''ಆತನ ಮುಖದ ಮೇಲಿನ ನೀರಿಳಿಸಿಬಿಟ್ಟೆ'' ಎಂದು ಆತ್ಮಪೌರುಷವನ್ನು ಕೊಚ್ಚಿಕೊಳ್ಳುವುದು ಸರ್ವಸಾಮಾನ್ಯ. ನೀರಿನ ನೆಲೆ, ಕುದುರೆಯ ನೆಲೆ, ಹೆಣ್ಣಿನ ನೆಲೆ, ಇವು ಯಾರ ಅರಿವಿನ ಅಳವಿಗೆ ನಿಲುಕದಂಥವು ಎಂದು ಬಣ್ಣಿಸಲಾಗುತ್ತದೆ.

ಕೈಗಡವೆಂದೋ, ಸಾಲವೆಂದೋ ಕೊಟ್ಟ ಹಣ ಮರಳಿ ಬರುವ ಸಂಭವ ಕಾಣದಿದ್ದಾಗ ಅದರ ವಿಷಯದಲ್ಲಿ ''ನೀರು ಬಿಟ್ಟಂತೆಯೆ'' ಎಂದು ನಿಟ್ಟುಸಿರು ಬಿಡುತ್ತೇವೆ. ಇದರಲ್ಲಿ ತನಗೆ ನ್ಯಾಯವಾಗಿ ಸಲ್ಲಬೇಕಾದ ಹಣ ಕಳೆದು ಹೋಯಿತಲ್ಲ ಎಂಬ ಆಂತರಿಕ ಕಳವಳದ ಧ್ವನಿ ಅಡಕವಾಗಿದೆ. ಇದಕ್ಕೆ ವಿರುದ್ಧವಾಗಿ ದಾನವನ್ನು ಕೊಡುವ ಕಾಲಕ್ಕೆ ''ಇದಂ ನ ಮಮ'' ಎಂಬ ಉಚ್ಚಾರದೊಂದಿಗೆ ಬಿಟ್ಟ ನೀರು ತ್ಯಾಗ ಬುದ್ಧಿಯ ಪ್ರತೀಕವೆನಿಸುತ್ತದೆ.

ತೋರಿಕೆಗೆ ನೀರು ಒಂದು ಅಖಂಡವಸ್ತು. ಆದರೆ ಅದರಲ್ಲಿ ಜಲಜನಕ, ಮತ್ತು ಪ್ರಾಣವಾಯು ಎಂಬ ಘಟಕಗಳು ಸಮ್ಮಿಲಿತ. ಅದರಂತೆಯೇ ನೀರು ಎಂಬುದು ಒಂದು ಪದವೆನಿಸಿದರೂ ಅದರ ಜನೋಪಯೋಗಿ ಸ್ವರೂಪವನ್ನು ನೆನೆದು ''ನೀ+ಇರು'' ಸೇರಿ ಈ ಪದ ರಚಿತವಾಯಿತೆಂದರೆ ತಪ್ಪಾಗಲಿಕ್ಕಿಲ್ಲ. ಪಂಚಮಹಾಭೂತಗಳಲ್ಲಿ ಒಂದಾದ 'ನಾನು' ಇರುವಂತೆ ಪಂಚಮಹಾಭೂತಾತ್ಮಕನಾದ ನೀನು ಕೂಡ 'ಇರು' ಎನ್ನುತ್ತದೆಯೋ ಏನೋ ಈ ನೀರು!

• ಪ್ರೊ. ಶ್ರೀನಿವಾಸ ತೋಫಖಾನೆ

ಕಾನೂನು

# 'ಕಳಸೂತ್ರ' ಅಂದರೇನು?

ಅದನ್ನು ಕಂಡು ಹಿಡಿದ ಮೇಲೆ ಅಪರಾಧಿಗಳನ್ನು ಪತ್ತೆ ಹಚ್ಚುವ ಕೆಲಸ ಸುಲಭ

• ಕೆ. ಎಸ್. ಕುಲಕರ್ಣಿ

ಎಲ್ಲ ಅಪರಾಧಿಗಳೂ ಎಲ್ಲ ಬಗೆಯ ಅಪರಾಧಗಳನ್ನೂ ಮಾಡುವುದಿಲ್ಲ. ಹಾಗೆಯೆ ಎಲ್ಲ ಕಳ್ಳರೂ ಎಲ್ಲಬಗೆಯ ಕಳ್ಳತನವನ್ನೂ ಮಾಡುವುದಿಲ್ಲ. ಒಬ್ಬೊಬ್ಬರೂ ಆಯ್ದುಕೊಂಡಿರುವ ವಿಧಾನ ಬೇರೆಯೆ ತೆರನಾದದ್ದು. ಇದಕ್ಕೆ ಪೊಲೀಸರ ಪರಿಭಾಷೆಯಲ್ಲಿ 'ಕಳಸೂತ್ರ' ಎಂದು ಹೆಸರು. ಕಳ್ಳತನ ನಡೆದ ಬಗ್ಗೆ ದೂರು ಬಂದ ನಂತರ ಈ ತಸ್ಕರ ವಿಧಾನವನ್ನು ಅರ್ಥಾತ್ 'ಕಳಸೂತ್ರ'ವನ್ನು ಕಂಡು ಹಿಡಿಯುವುದು ಪೊಲೀಸರಿಗೆ ಅತ್ಯಂತ ಮಹತ್ವದ್ದು. ಇದಾದ ನಂತರ ಪೊಲೀಸರ ಕಾರ್ಯ ಸುಗಮ. ಆದ್ದರಿಂದ ಪೊಲೀಸರು ಅಪರಾಧ ನಡೆದ ಸ್ಥಳಕ್ಕೆ ಭೇಟಿಯಿತ್ತು, ಸ್ಥಳವನ್ನು ಕೂಲಂಕಷವಾಗಿ ಪರಿಶೀಲಿಸಿ ಅಪರಾಧಕ್ಕೊಳಗಾದ ವ್ಯಕ್ತಿಗಳನ್ನು ಚಿಕಿತ್ಸಕ ರೀತಿಯಿಂದ ವಿಚಾರಿಸಿ, ಕಳ್ಳರ ಕಳಸೂತ್ರವನ್ನು ಕಂಡು ಹಿಡಿದು ಅನಂತರ ಅಪರಾಧಿಗಳ ಶೋಧನೆಯ ಕಾರ್ಯವನ್ನು ಪ್ರಾರಂಭಿಸುವರು.

ಅಪರಾಧಿಗಳು ಅವಲಂಬಿಸುವ ತಸ್ಕರ ವಿಧಾನಕ್ಕೆ ಅವರ ವೃತ್ತಿಯೇ ಆಧಾರ. ಉದಾಹರಣೆಗೆ ಮನೆಗೆ ಸುಣ್ಣ ಬಳಿಯುವವರಾಗಲಿ ಮಾಳಿಗೆಗೆ ಹಂಚು ಹೊದಿಸುವವರಾಗಲಿ ಹಂಚುತೆಗೆದು ಮನೆಯಲ್ಲಿ ಇಳಿದು ಕಳುವು ಮಾಡುವುದು ಬಹಳ. ಸುಣ್ಣ ಬಳಿಯುವವರು ಆ ಕಾರ್ಯವನ್ನು ಮಾಡುವಾಗ ಯಾವ ಯಾವ ಕೋಣೆಯಲ್ಲಿ ಯಾವ ಯಾವ ಬೆಲೆ ಬಾಳುವ ವಸ್ತುಗಳಿವೆ ಎನ್ನುವುದನ್ನು ಮನದಟ್ಟು ಮಾಡಿಕೊಂಡು, ಯಾವ ಯಾವ ಸಮಯದಲ್ಲಿ ಜನ ಮನೆಯಲ್ಲಿ ಇರುತ್ತಾರೆ ಅಥವಾ ಇರುವುದಿಲ್ಲ ಎನ್ನುವುದನ್ನು ನಿರೀಕ್ಷಿಸಿ, ಅಪರಾಧದ ರೂಪುರೇಷೆಯನ್ನು ತಯಾರಿಸಿಕೊಳ್ಳುವರು. ಹೇಗೂ ಈ ಬಗೆಯ ಕಳ್ಳತನಕ್ಕೆ ಬೇಕಾದ ನಿಚ್ಚಣಿಕೆ ಹಾಗೂ ಇತರ ಸಲಕರಣೆಗಳು ಅವರ ಬಳಿ ಇದ್ದೇ ಇರುವವು. ಇಂತಹ ಅಪರಾಧವನ್ನೆಸಗುವ ವ್ಯಕ್ತಿಗಳ ಯಾದಿಯನ್ನು ಪೊಲೀಸರು ವಿವರಸಹಿತವಾಗಿ ಇಟ್ಟಿರುತ್ತಾರೆ. ಈ ಬಗೆಯ ದೂರು ಬಂದಕೂಡಲೇ ಪೊಲೀಸರು ಅಪರಾಧ ನಡೆದ ಸ್ಥಳಕ್ಕೆ ಭೇಟಿಯಿತ್ತು, ಸ್ಥಳವನ್ನು ಪರೀಕ್ಷಿಸಿ, ದೂರು ನೀಡಿದವರಿಂದ ಅಗತ್ಯದ ವಿವರಗಳನ್ನು

ಪಡೆದು, ಅವರಲ್ಲಿ ಸುಣ್ಣ ಬಳಿಯಲು ಇಲ್ಲವೆ ಹಂಚುಹೊದಿಸಲು ಯಾರಾದರೂ ಬಂದಿದ್ದರೆ ಮನೆಯಲ್ಲಿದ್ದವರಿಂದ ಆ ಕುರಿತು ವಿವರಗಳನ್ನು ಪಡೆದು ಆ ಕಾರ್ಮಿಕನನ್ನು ಪೊಲೀಸ್ ಸ್ಟೇಶನ್ನಿಗೆ ಕರೆಸುತ್ತಾರೆ. ಬಳಿಕ ಅವನು ಅಪರಾಧದ ಪ್ರವೃತ್ತಿಯವನಿದ್ದಾನೋ ಹೇಗೆ? ಎಂಬುದನ್ನು ತಿಳಿದುಕೊಂಡು, ಅಪರಾಧ ನಡೆದ ಸಮಯದಲ್ಲಿ ಆತ ಎಲ್ಲಿದ್ದನೆಂಬ ಬಗ್ಗೆ ವಿವರಪಡೆದು, ಅದು ನಿಜವೋ ಹೇಗೆ? ಎಂಬುದನ್ನು ಪರೀಕ್ಷಿಸುತ್ತಾರೆ. ಅನಂತರ ಆತನ ಖುಲಾಸೆಪಡೆದುಕೊಂಡು, ಸಂಶಯ ಉತ್ಪನ್ನವಾದೊಡನೆಯೆ ಆತನನ್ನು ಪೊಲೀಸ್ ಸ್ಟೇಶನ್ನಿಗೆ ಕರೆತಂದು, ತಮ್ಮ ಪದ್ಧತಿಯ ಪ್ರಕಾರ ಚಮಕಶಿಮಾಡಿ, ಸೆರೆ ಹಿಡಿದು, ಕಳವಾದ ವಸ್ತುಗಳನ್ನು (ಕೋರ್ಟಿನ ಭಾಷೆಯಲ್ಲಿ ಇದಕ್ಕೆ ಮುದ್ದೇಮಾಲು ಎನ್ನುತ್ತಾರೆ) ವಶಪಡಿಸಿಕೊಂಡು ಆತನ ಮೇಲೆ ಮೊಕದ್ದಮೆ ಹೂಡುವರು. ಅದಕ್ಕೆ ಮೊದಲು ತಮ್ಮ ಠಾಣೆಯಲ್ಲಿ ಆತನ ಬಗೆಗಿನ ವಿವರಗಳನ್ನೆಲ್ಲ ದಾಖಲಿಸುವರು. ನ್ಯಾಯಾಲಯದಲ್ಲಿ ಅವನಿಗೆ ಶಿಕ್ಷೆಯಾದ ನಂತರ ಕಳವು ಮಾಡಲು ಆತ ಬಳಸಿದ ವಿಧಾನ ಅರ್ಥಾತ್ ಕಳಸೂತ್ರ, ಆತನ ಬೆರಳಮುದ್ರೆ, ಫೋಟೋ ಇತ್ಯಾದಿಗಳನ್ನು ದಾಖಲಿಸಿ ಕಾಯ್ದಿರಿಸುವರು.

ಮಾಳಿಗೆಯ ಹಂಚು ಸರಿಸಿ ಕಳವು ಮಾಡುವವರಿಗೆ ಗೋಡೆಯಲ್ಲಿ ಕನ್ನಹಾಕಿ, ಮನೆಯಲ್ಲಿ ಇಳಿದು ಕಳವು ಮಾಡಲು ಸಾಮಾನ್ಯವಾಗಿ ಸಾಧ್ಯವಾಗುವುದಿಲ್ಲ. ಗೌಂಡಿಗಳಿಗೆ ಈ ಕಸಬು ಕರಗತವಾದದ್ದು. ಆದ್ದರಿಂದ ಕನ್ನ ಹಾಕಿ ಕಳವು ಮಾಡಿದ ದೂರು ಬಂದಾಗ ಪೊಲೀಸರು ತಮ್ಮಲ್ಲಿರುವ ದಾಖಲೆಗಳನ್ನು ಪರಿಶೀಲಿಸಿ ಈ ಬಗೆಯ ಅಪರಾಧದ ಹಿನ್ನೆಲೆಯುಳ್ಳ ಗೌಂಡಿಗಳನ್ನು ಹಿಡಿದು ತರುವರು. ಹಾಗೆಯೆ, ಕೀಲಿ ಮುರಿಯುವ ಕಲೆ ಕೀಲಿಗಳನ್ನು ರಿಪೇರಿ ಮಾಡುವವರಿಗೆ ಕರಗತವಾಗಿರುತ್ತದೆ. ಹೊರಬಾಗಿಲಿನ ಕೊಂಡಿ, ಚಿಲಕಗಳನ್ನು ಕತ್ತರಿಸಿ ಕಳವು ಮಾಡುವ ಕಸಬು ಹ್ಯಾಕ್‌ಸಾ ಬ್ಲೇಡನ್ನು ಉಪಯೋಗಿಸಿ ನಳ ರಿಪೇರಿ ಮಾಡುವವರಿಗೆ ಕರಗತವಾದದ್ದು. ಬಾಗಿಲಿನ ನಟ್‌ಬೋಲ್ಟುಗಳನ್ನು ತಿರುಗಿಸಿ, ಮನೆಯೊಳಗೆ ಹೊಕ್ಕು ಕಳವು ಮಾಡುವುದನ್ನು ಬಡಿಗವೃತ್ತಿಯಲ್ಲಿರುವ ಕಳ್ಳನೇ ಬಲ್ಲ. ಅದೇ ಪ್ರಕಾರ, ಮೋಟಾರುಗಳ ಬಿಡಿಭಾಗಗಳನ್ನಾಗಲಿ ಸೈಕಲ್ಲುಗಳ ಬಿಡಿಭಾಗಗಳನ್ನಾಗಲಿ ಕಳವು ಮಾಡುವುದು ಮೋಟಾರ್ ಅಥವಾ ಸೈಕಲ್ಲಿನ ರಿಪೇರಿಗಾರನಿಗೆ ಸುಲಭವಾದದ್ದು. ಮೋಟಾರ್ ಕಾರಿನಲ್ಲಿಯ ಸ್ಟೀರಿಯೋ ಟೇಪ್‌ರಿಕಾರ್ಡ್‌ರುಗಳ ಕಳವು ಮಾಡುವ ತಂಡ ಬೇರೆಯೇ ಇರುತ್ತದೆ. ಆದರೆ ಈ ತರಹದ ಉದ್ಯೋಗ ಮಾಡುವವರೆಲ್ಲರೂ ಕಳ್ಳರೆಂದು ತಿಳಿದರೆ ಅವರಿಗೂ ಅವರ ವೃತ್ತಿಗೂ ಅನ್ಯಾಯಮಾಡಿದಂತಾಗುವುದು. ನೂರರಲ್ಲಿ ಒಬ್ಬರೋ ಇಬ್ಬರೋ ಇಂತಹ ಕಳ್ಳರಿರಬಹುದು ಅಷ್ಟೆ.

ಪುಣೆ, ಮುಂಬಯಿಯಂತಹ ದೊಡ್ಡ ಶಹರಗಳಲ್ಲಿ ಹೆಂಗಸರ ಕೊರಳಿನಲ್ಲಿಯ ಸರವನ್ನಾಗಲಿ ಮಂಗಲಸೂತ್ರವನ್ನಾಗಲಿ ಕಿತ್ತುಕೊಳ್ಳುವವರ ತಂಡ ಬೇರೆಯೇ ಇದೆ. ಬೆಳಗಿನ ಸಮಯದಲ್ಲಿ ಮನೆಯ ಮುಂದೆ ಜಲಸಿಂಚನ ಮಾಡಿ ರಂಗೋಲಿ ಹಾಕುವ ಹೆಣ್ಣುಮಕ್ಕಳ ಕೊರಳಲ್ಲಿನ ಸರವನ್ನೋ ಮಂಗಲಸೂತ್ರವನ್ನೋ ಕಿತ್ತುಕೊಂಡು ಮೋಟರ್‌ಸೈಕಲ್ ಅಥವಾ ಸ್ಕೂಟರ್‌ನಿಂದ ಓಡಿ ಹೋಗುವ ತಂಡವಿದೆ. ಲೋಕಲ್ ಟ್ರೇನಿನಲ್ಲಿ ನಿತ್ಯ ಪ್ರವಾಸಿಸುವ ಅಥವಾ ನಸುಕಿನಲ್ಲಿ ವಾಕಿಂಗಿಗೆ ಹೊರಟಿರುವ ಇಲ್ಲವೆ ನಸುಗತ್ತಲೆಯಾದ ನಂತರ ಜನರು ವಿರಳವಾಗಿ ಸಂಚರಿಸುವ ಸಮಯದಲ್ಲಿ ಹೊಂಚುಹಾಕಿ ಹೆಂಗಸರ ಸರವನ್ನು ಕಿತ್ತುಕೊಳ್ಳುವದರಲ್ಲಿ ಕೈಚಳಕ ಸಾಧಿಸಿದ ಕಳ್ಳರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಪೊಲೀಸ್ ಸ್ಟೇಶನ್ನಿನಲ್ಲಿಯ ಅಧಿಕಾರಿಗಳು ದೂರು ಬಂದ ನಂತರ ತಮ್ಮ ಠಾಣೆಯ ವ್ಯಾಪ್ತಿಯಲ್ಲಿ ಬರುವ ಅಪರಾಧಿಗಳ ಯಾದಿಯನ್ನು ತೆಗೆದು ಪರಿಶೀಲಿಸುವರಲ್ಲದೆ ಇತರ ಪೊಲೀಸ್ ಠಾಣೆಗಳಿಗೂ ಆ ಕುರಿತು ಮಾಹಿತಿ ಕಳಿಸುತ್ತಾರೆ. ಅನಂತರ ಈ ಮೊದಲು ಹೇಳಿದಂತೆ ದಾಖಲೆಯನ್ನು ಪರಿಶೀಲಿಸಿ ಕಳಸೂತ್ರದ ಆಧಾರದ ಮೇಲೆ ಆರೋಪಿಗಳನ್ನು ಪತ್ತೆಹಚ್ಚುವ ಕೆಲಸವನ್ನು ಪೊಲೀಸರು ಪ್ರಾರಂಭಿಸುತ್ತಾರೆ. ಸಂಶಯಬಂದ ಆರೋಪಿಗಳನ್ನು ಬಂಧಿಸಿ ತಮ್ಮ ವಿಶಿಷ್ಟ ಪದ್ಧತಿಯಿಂದ

ತನಿಖೆಯನ್ನು ಶುರುಮಾಡುತ್ತಾರೆ. ಅಪರಾಧಿಗಳ ಬಗ್ಗೆ ಸಂಶಯ ಬಲವಾದೊಡನೆ ತಮ್ಮ ಅಸ್ತ್ರವಾದ ಮೂರನೆಯ ವರ್ಗದ ಪದ್ಧತಿಯನ್ನು ಉಪಯೋಗಿಸಿ, ಹಣ್ಣು ಹಣ್ಣುಮಾಡಿ, ಕಳವಿನ ಅಥವಾ ತತ್ಸಂಬಂಧಿ ಇತರ ಅಪರಾಧದ ಬಗೆಗೆ ಕಬೂಲಿ ಜವಾಬು ಪಡೆದು ಕಳವಾದ ವಸ್ತುವನ್ನು ವಶಪಡಿಸಿಕೊಳ್ಳುವರು. ಹೀಗೆ ಮುದ್ದೇ ಮಾಲನ್ನು ಹಸ್ತಗತ ಮಾಡಿಕೊಂಡರೆಂದರೆ ನೂರಕ್ಕೆ ಎಪ್ಪತ್ತೈದರಷ್ಟು ಪೊಲೀಸರ ಕೆಲಸ ಯಶಸ್ವಿಯಾದಂತೆಯೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಅನೇಕ ಹೊಸ ಹೊಸ ಉಪಕರಣಗಳಿಂದ ತನಿಖೆ ಮಾಡುವುದು ಸಾಧ್ಯವಾಗಹತ್ತಿದೆ. ಆರೋಪಿಗಳಿಂದ ನಿಜ ಹೇಳಿಸಲು, ಕಬೂಲಿ ಮುಖೋದ್ಗತ ಜವಾಬು ಪಡೆಯಲು ಇಂಜೆಕ್ಷನ್ ಕೂಡ ಬಂದಿದೆ. ಇಷ್ಟಾದರೂ ಆರೋಪಿಗಳಿಂದ ಸತ್ಯ ಹೊರಡಿಸುವುದು ಕಷ್ಟ. ಆದ್ದರಿಂದಲೇ ಪೊಲೀಸರ ಬಳಿಯಿರುವ ಮುಖ್ಯ ಅಸ್ತ್ರವೆಂದರೆ ಮೂರನೆಯ ವರ್ಗದ ಪದ್ಧತಿ ಅರ್ಥಾತ್ ಥರ್ಡ್ ಡಿಗ್ರಿ ಮೆಥೆಡ್.

ಅಪರಾಧಿಗಳನ್ನು ಕಂಡು ಹಿಡಿಯುವಲ್ಲಿ ಕಳಸೂತ್ರದ ಮಹತ್ವ ಎಷ್ಟು? ಎಂಬುದರ ಬಗ್ಗೆ ನಾನು ಪುಣೆಯಲ್ಲಿ ಚೀಫ್ ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟನಾಗಿದ್ದಾಗ ಬಂದ ಒಂದು ಅನುಭವವನ್ನು ನಿವೇದಿಸಿದರೆ ಸ್ಪಷ್ಟವಾಗುವುದು.

ಒಂದು ದಿನ ಮುಂಜಾನೆ ಒಂಭತ್ತು ಗಂಟೆಯ ಸುಮಾರಿಗೆ ಫೌಜದಾರನೊಬ್ಬ ನನ್ನ ಮನೆಗೆ ಬಂದು, "ಸಾಹೇಬರೆ, ಅಗ್ರಸೇನ್ ಭವನದಲ್ಲಿ ಚಾತುರ್ಮಾಸ್ಯಕ್ಕಾಗಿ ಇಳಿದುಕೊಂಡ ದ್ವಾರಕಾಪೀಠದ ಜಗದ್ಗುರುಗಳ ಬೆಲೆಯುಳ್ಳ ವಸ್ತುಗಳನ್ನು ನಿನ್ನೆ ರಾತ್ರಿ ಕಳವು ಮಾಡಲಾಗಿದೆ. ಚಂದ್ರಮೌಳೀಶ್ವರ ದೇವರ ಚಿನ್ನದ ಮುಕುಟ, ಬೆಳ್ಳಿಯ ಪ್ರಭಾವಳಿ, ಬೆಳ್ಳಿಯ ತಾಬಾಣ, ತಂಬಿಗೆ, ವಾಟಗ, ತೀರ್ಥದ ಸೌಟು ಇತ್ಯಾದಿ ಹತ್ತು ಸಾವಿರ ರೂಪಾಯಿಗಳಿಗೂ ಮೇಲ್ಪಟ್ಟ ವಸ್ತುಗಳು ಅಪಹರಿಸಲ್ಪಟ್ಟಿವೆ. ಸ್ವಾಮಿಗಳು ಅತ್ಯಂತ ಮಹತ್ವದ ವ್ಯಕ್ತಿಗಳು (VVIP.) ಈ ಸಮಯದಲ್ಲಿ ನಮ್ಮ ಸೀನಿಯರ್ ಇನ್‌ಸ್ಪೆಕ್ಟರ್ ಕೂಡ ಊರಲ್ಲಿ ಇಲ್ಲ. ಹೀಗಾಗಿ ನನಗೆ ಬಹಳೇ ಹೆದರಿಕೆಯಾಗಿದೆ. ಅಪರಾಧದ ಪ್ರಥಮ

**ಸತ್ಯ**

ಸಾಕ್ಷರರಲ್ಲಿ ಕೆಲವರಾದರೂ
ರಾಕ್ಷಸರಾಗುತ್ತಾರೆ
ಎನ್ನುವುದು
ಅಕ್ಷರಶಃ ಸತ್ಯ!

● ಸಿ.ಪಿ.ಕೆ

ಮಾಹಿತಿ ವರದಿ (First information report) ತಂದಿದ್ದೇನೆ. ದಯವಿಟ್ಟು ಹೇಗಾದರೂ ಮಾಡಿ ನನ್ನನ್ನು ಸಂಭಾಳಿಸಿರಿ," ಇತ್ಯಾದಿಯಾಗಿ ಬೇಡಿಕೊಂಡ. ನಾನು ಆತ ತಂದ ವರದಿಯನ್ನು ಓದಿ ನೋಡಿ, ಆ ಫೌಜದಾರನಿಗೆ, "ನಿಮ್ಮ ಇತರ ವರಿಷ್ಠ ಅಧಿಕಾರಿಗಳ ಮಾರ್ಗದರ್ಶನದಲ್ಲಿ ಕೂಡಲೇ ಈ ತರಹದ ಅಪರಾಧಗಳ ಕಳಸೂತ್ರವನ್ನು ಕಂಡುಹಿಡಿದು ತನಿಖೆಯನ್ನು ಶುರು ಮಾಡಿರಿ. ಕಳವಾದ ಬೆಳ್ಳಿ-ಬಂಗಾರ ಒಮ್ಮೆ ಚಿನಿವಾಲರ ಕೈ ಸೇರಿ ಕರಗಿಸಲ್ಪಟ್ಟರೆ ಅಪರಾಧವನ್ನು ಸಿದ್ಧಪಡಿಸುವುದು ದುಸ್ತರವಾಗುತ್ತದೆ," ಎಂದು ಹೇಳಿ ಕಳಿಸಿದೆ.

ಅದೇ ದಿನ ರಾತ್ರಿ ಎಂಟು ಗಂಟೆಗೆ ಅದೇ ಫೌಜದಾರನು ಆರೋಪಿಯೊಬ್ಬನನ್ನು ನನ್ನ ಮುಂದೆ ಹಾಜರುಪಡಿಸಿ, "ಸಾಹೇಬರೆ, ತಮ್ಮ ಆಶೀರ್ವಾದದಿಂದ ಎಲ್ಲ ಮುದ್ದೇಮಾಲು ಸಹಿತ ಆರೋಪಿಯನ್ನು ತಮ್ಮ ಮುಂದೆ ಹಾಜರುಪಡಿಸಿದ್ದೇನೆ. ಏಳು ದಿನಗಳವರೆಗೆ ಇವನನ್ನು ಪೊಲೀಸ್ ಕಸ್ಟಡಿಗೆ ಒಪ್ಪಿಸಬೇಕು," ಎಂದು ಕೇಳಿಕೊಂಡ. ಆತ ಹಾಜರುಪಡಿಸಿದ ತನಿಖೆಯ ವರದಿ (Crime Diary)ಯನ್ನು ನೋಡಿ ಆರು ದಿನಗಳ ಪೊಲೀಸ್ ಕಸ್ಟಡಿ ಮಂಜೂರು ಮಾಡಿದೆ. ಮ್ಯಾಜಿಸ್ಟ್ರೇಟರ ಬಂಗಲೆಯಲ್ಲೂ ಒಂದು ಆಫೀಸು ಇರುತ್ತದೆ. ಅವರು ದಿನದ ಇಪ್ಪತ್ತುನಾಲ್ಕು ಗಂಟೆಯೂ ಸೇವೆಯಲ್ಲಿರುವ ಅಧಿಕಾರಿಗಳು!

ಮರುದಿನ ನನ್ನ ಕೋರ್ಟ್ ಚೆಂಬರಿನಲ್ಲಿ ಆ ಫೌಜದಾರನು ಇನ್‌ಸ್ಪೆಕ್ಟರ್ ಹಾಗೂ ಪೊಲೀಸ್ ಪ್ರಾಸಿಕ್ಯೂಟರರನ್ನು ಕರೆದುಕೊಂಡು ಬಂದು ಈ ಅಪರಾಧದ ಬಗ್ಗೆ ಹೇಗೆ ತನಿಖೆ ನಡೆಸಿದರೆಂಬು

ದನ್ನು ವಿವರಿಸಿದರು. ಕಲ್ಯಾಣಮಂಟಪ ಹಾಗೂ ಇತರ ಧಾರ್ಮಿಕ ಕಾರ್ಯಾಲಯಗಳಲ್ಲಿ ಅಪರಾಧಗೈಯುವ ವ್ಯಕ್ತಿಗಳ ಯಾದಿ ಪೊಲೀಸ್ ಸ್ಟೇಶನ್ನಿನಲ್ಲಿದ್ದು ಅದನ್ನು ಪರಿಶೀಲಿಸಿದಾಗ ಈ ವ್ಯಕ್ತಿಯ ಮೇಲೆ ಸಂಶಯ ಬಂದಿದ್ದರಿಂದ ಅವನನ್ನು ಹಿಡಿದರು. ವಾಸ್ತವವಾಗಿ ಆತ ಆ ದಿನ ಸಂಜೆ ಜಗದ್ಗುರು ಶಂಕರಾಚಾರ್ಯರ ಪೂಜೆನೋಡಲು ಹಾಗೂ ಆಶೀರ್ವಚನ ಪಡೆಯ ಅಗ್ರಸೇನ ಭವನದಲ್ಲಿ ಸೇರಿದ್ದ ಭಕ್ತರಲ್ಲಿ ಒಬ್ಬನಾಗಿ ಕುಳಿತುಕೊಂಡಿದ್ದ. ಅವೆರಡೂ ಕಾರ್ಯಕ್ರಮಗಳಾದ ನಂತರ ರಾತ್ರಿ ಸುಮಾರು ಹನ್ನೊಂದು ಗಂಟೆಯವರೆಗೆ ಭಕ್ತರಿಂದ ಸಂಗೀತ ಸೇವೆ ನಡೆಯಿತು. ಅದು ಮುಗಿಯುವುದಕ್ಕಿಂತ ತುಸು ಮೊದಲು ಅಪ್ಪನಿತ ಕಲ್ಯಾಣ ಮಂಟಪದ ಶೌಚಾಲಯದಲ್ಲಿ ಹೋಗಿ ಕುಳಿತ. ಕಾರ್ಯಕ್ರಮ ಮುಗಿದು ಭಕ್ತರೆಲ್ಲ ಚೆದುರಿ, ಸಭಾಂಗಣ ಖಾಲಿಯಾದ ಮೇಲೆ ಆತ ಬೆಳ್ಳಿ ಬಂಗಾರದ ಆ ವಸ್ತುಗಳನ್ನು ಎತ್ತಿಕೊಂಡು ಮೆಲ್ಲಗೆ ಅಲ್ಲಿಂದ ಕಾಲ್ತೆಗೆದ. ವೃತ್ತಿಯಿಂದ ಅವನು ಚಿನಿವಾಲನಿದ್ದು ಹಿಂದೊಮ್ಮೆ ಈ ತರಹದ ಅಪರಾಧವು ಅವನಿಂದ ಸಂಭವಿಸಿ ಪೊಲೀಸು ಠಾಣೆಯಲ್ಲಿ ದಾಖಲಿಸಲ್ಪಟ್ಟಿತ್ತು. ಸಂಶಯದಿಂದ ಹಿಡಿದು, ಅವನನ್ನು ಆ ಕುರಿತು ವಿಚಾರಿಸಿದಾಗ (ಪೊಲೀಸರು ತಮ್ಮ ಮೂರನೆಯ ವರ್ಗದ ಪದ್ಧತಿಯ ಬಗ್ಗೆ ಮ್ಯಾಜಿಸ್ಟ್ರೇಟರ ಮುಂದೆ ಎಂದೂ ಹೇಳುವುದಿಲ್ಲ) ಆತ ಕಳವು ಮಾಡಿದ್ದನ್ನು ಒಪ್ಪಿಕೊಂಡ. ಮರುದಿನ ತಾನು ಕಳವು ಮಾಡಿದ ಮಾಲನ್ನೆಲ್ಲ ಆತ ಕರಗಿಸುವವನಿದ್ದ. ಅಷ್ಟರಲ್ಲಿಯೆ ಅವನನ್ನು ಸೆರೆಹಿಡಿಯಲಾಯಿತು. ಈ ಎಲ್ಲ ಮುದ್ದೇಮಾಲನ್ನು ಅವನು ಒಡ್ಡರವಾಡಿಯ ಹಿಂದಿನ ಗಿಡಗಳ ಝುಡುಪಿನ ಸ್ಥಳದಲ್ಲಿ ಬೆಳಿಗ್ಗೆ ನಾಲ್ಕು ಗಂಟೆಗೇ ಹೂತಿಟ್ಟಿದ್ದ. ಅದನ್ನು ಒಪ್ಪಿಕೊಂಡು ಮುದ್ದೇಮಾಲನ್ನು ತಮ್ಮ ಮುಂದೆ ಹಾಜರುಪಡಿಸಿದ್ದನ್ನು ಪೊಲೀಸರು ನನಗೆ ವಿವರಿಸಿದರು.

ಈ ಪ್ರಕಾರ ಅಪರಾಧಿಗಳು ಅಪರಾಧಕ್ಕಾಗಿ ತಮಗೆ ಅವಿತವಾದ ವಿಶಿಷ್ಟ ಪದ್ಧತಿಯನ್ನು ಅವಲಂಬಿಸುವರು. ಅದೇ ಅವರ ಕಳಸೂತ್ರ. ಮೇಲೆ ಹೇಳಿದ ಪ್ರಕರಣದಲ್ಲಿ ನಾನು ಆರೋಪಿಗೆ ಐದು ವರ್ಷಗಳ ಸಶ್ರಮ ಶಿಕ್ಷೆ ಹಾಗೂ ದಂಡ ವಿಧಿಸಿದೆ.

ಆ ಕಳಸೂತ್ರವನ್ನು ಕಂಡುಹಿಡಿದವನೇ ಚಾಣಾಕ್ಷ ಪೊಲೀಸನು. ಕಳ್ಳನನ್ನು ಹಿಡಿಯುವುದರಲ್ಲಿ ಇನ್ನಷ್ಟು ತಡವಾಗಿದ್ದರೆ ಆತ ಖಂಡಿತವಾಗಿಯೂ ತಾನು ಕದ್ದಿದ್ದನ್ನು ಕರಗಿಸಿಬಿಡುತ್ತಿದ್ದ. ಇಂತಹ ಪ್ರಸಂಗದಲ್ಲಿ ಆರೋಪವನ್ನು ಸಿದ್ಧಪಡಿಸುವುದು ಬಹಳ ಕಷ್ಟ. ಒಮ್ಮೊಮ್ಮೆ ಹೀಗೆ ಕಳವು ಮಾಡಿದ ಚಿನಿವಾಲರು ಈ ಕರಗಿಸಿದ ಬೆಳ್ಳಿ-ಬಂಗಾರ ತಮ್ಮದೇ ಎಂದು ಸಾಧಿಸಿದಲ್ಲಿ ಹಾಗೂ ಪೊಲೀಸರು ಅಪರಾಧವನ್ನು ಸಿದ್ಧಪಡಿಸದಿದ್ದಲ್ಲಿ ಆರೋಪಿಗಳನ್ನು ಗೌರವಯುತವಾಗಿ ಬಿಡುವ ಹೊರತು ಬೇರೆ ಮಾರ್ಗವೇ ಇರುವುದಿಲ್ಲ. ಅಲ್ಲದೆ ಹೀಗೆ ಮಾಡಿದಾಗ ಕಳವಿನ ಮಾಲನ್ನು ಮ್ಯಾಜಿಸ್ಟ್ರೇಟರೇ ಕಳ್ಳನಿಗೆ ಬಹುಮಾನವಾಗಿ ಕೊಟ್ಟಂತಾಗುವುದು. ಆಪಾದಿತರನ್ನು ಬಿಡುಗಡೆಗೊಳಿಸಲು ಚಾಣಾಕ್ಷ ವಕೀಲರು ಇದ್ದೇ ಇರುತ್ತಾರೆ. ಆಪಾದಿತರು ನಿಜವಾದ ಅಪರಾಧಿಗಳು ಎನ್ನುವುದು ಮ್ಯಾಜಿಸ್ಟ್ರೇಟರಿಗೆ ಮನದಟ್ಟಾಗಿದ್ದರೂ ಅವರು ಕಣ್ಣಿದ್ದೂ ಕುರುಡರು. ಕಿವಿಯಿದ್ದೂ ಕಿವುಡರು. ಬಾಯಿಯಿದ್ದರೂ ಮೂಕರು. ಕಾನೂನಿನ ಕಕ್ಷೆಗೆ ಒಳಗಾಗಿ ಇಂತಹವರನ್ನು ಬಿಡುಗಡೆಗೊಳಿಸುವುದಲ್ಲದೆ ಅವರಿಗೆ ಉಡುಗರೆಯಾಗಿ ತುಡುಗಿನ ಮಾಲನ್ನು ಕೊಡುವಾಗ ಮ್ಯಾಜಿಸ್ಟ್ರೇಟರಿಗೆ ಆಗುವ ಧರ್ಮಸಂಕಟವನ್ನು ಅವರೇ ಬಲ್ಲರು.

---

**ಹಿಪ್ಪಿಯೊಬ್ಬನ ಕೂದಲು ಕತ್ತರಿಸುತ್ತಿದ್ದ ನಾಪಿತ ಕೇಳಿದ:**
**"ನೀವು ಯಾವಾಗ್ಲಾದ್ರೂ ನೌಕಾದಳದಲ್ಲಿದ್ರಾ?"**
**"ಹೌದು, ನಿನಗೆ ಹ್ಯಾಗ್ಗೊತ್ತಾಯ್ತು?"**
**"ಮುಳುಗಿದ ಹಡಗು ಸಿಗೋ ಹಾಗೆ ಈಗ ನಿಮ್ಮ ಕೂದಲುಗಳ ನಡುವೆ ಹ್ಯಾಟು ಸಿಕ್ತು. ಅದಕ್ಕೆ.**

---

ಕನ್ನಡ ಕಥೆ

# ಅವ್ವ

• ಬಾಳಾಸಾಹೇಬ ಲೋಕಾಪುರ

- ೧ -

ಆಫೀಸಿಗೆ ಹೋದಾಗ ಎರಡು ದಿನಗಳ ಹಿಂದೆಯೇ ಅವ್ವನಿಂದ ಬಂದ ಪತ್ರ ಸಿಕ್ಕಿತು. ಯಾವತ್ತೂ ಅಪ್ಪನೇ ಪತ್ರ ಬರೆಸಿ ಹಾಕುತ್ತಿದ್ದ. ಈಗ ಅವ್ವ ಬರೆಸಿ ಹಾಕಿದ್ದಾಳೆ. "ನಿನ್ನ ತೀರ್ಥರೂಪರಾದ ರಾ.ರಾ. ನೇಮಣ್ಣನವರು ಹಾಸಿಗೆ ಹಿಡಿದಿದ್ದಾರೆ. ಪೌಡ ಬಂದರೆ ಮೋತಿ ಸಿಕ್ಕೀತು. 'ತಾರು ಎಂದು ತಿಳಿದು ಬರಬೇಕು' ಎಂದು ನಿಮ್ಮ ತಾಯಿಯವರಾದ ಸೌ. ತಾಯವ್ವಕ್ಕನವರು ಸ್ವತಹ ಅಂಗಡಿಗೆ ಬಂದು ಹೇಳಿದಾಗ ಬರೆದ ಪತ್ರ. ಇತೀ ಅಂಗಡಿ ಮಾಯಪ್ಪಣ್ಣನವರು" ಎಂದಿತ್ತು.

ನನಗೆ ಗಾಬರಿಯೇ ಆಯಿತು. ಏನಾಗಿರಬಹುದು ಅಪ್ಪನಿಗೆ? ಅಪ್ಪ ತನ್ನ ಜೀವಮಾನದಲ್ಲಿ ಜಡ್ಡು ಜಾಪತ್ರೆ ಎಂದು ಮಲಗಿದವನಲ್ಲ. ಕಲ್ಲಿನಂತಹ ಮನುಷ್ಯ. ಈಗ ಏಕಾಏಕಿ ಬಂದ ಪತ್ರದಿಂದ ಗಾಬರಿ ಹುಟ್ಟಿತು. ಆಫೀಸಿಗೆ ರಜಾ ಹಾಕಿ ಸೀದಾ ಮಾಲತಿ ಕೆಲಸ ಮಾಡುವ ಆಫೀಸಿಗೆ ಹೋಗಿ ಅವಳನ್ನು ಕರೆದುಕೊಂಡು ಮನೆಗೆ ಬಂದೆ. ನನ್ನ ಗಾಬರಿ ನೋಡಿ ಮಾಲತಿ ನನ್ನನ್ನು ಸಮಾಧಾನ ಮಾಡಿದಳು. "ಹಂಗೇನು ಇರಲಿಕ್ಕಿಲ್ಲ, ಇದ್ದರೆ ಶೆಟ್ಟರು ನೇರವಾಗಿಯೇ ಬರೆಯುತ್ತಿದ್ದರು," ಎಂದಳಲ್ಲದೇ ಪತ್ರದಲ್ಲಿಯ 'ಸೌಭಾಗ್ಯ ತಾಯವ್ವಕ್ಕ' ಎನ್ನುವ ಕಡೆಗೆ ನನ್ನ ಗಮನ ಸೆಳೆದು "ಏನಾರೂ ಆಗಿದ್ದರೆ ಶೆಟ್ಟರು 'ಸೌಭಾಗ್ಯ' ಎನ್ನುವ ಶಬ್ದವನ್ನು ಬರೆಯುತ್ತಿರಲಿಲ್ಲ"ವೆಂದಳು. ನನಗೂ ಹೌದೆನಿಸಿತು.

"ಅಲ್ಲಿ ದವಾಖಾನಿ ಸರಿ ಆಗದಿದ್ದರ ಇಲ್ಲೇ ಕರಕೊಂಡು ಬರ್ರಿ" ಅಂದಳು.

ಮನಸ್ಸು ತುಂಬಿ ಬಂದು ಅವಳ ಕೈ ಹಿಡಿದುಕೊಂಡೆ. ನನಗೆ ಗೊತ್ತಾಗದಂತೆ ನನ್ನ ಕಣ್ಣ ಹನಿಗಳು ದುಳು ದುಳನೆ ಉದುರಿದವು. ತಲೆಯ ಮೇಲೆ ಕೈ ಇಟ್ಟು ಸಮಾಧಾನ ಮಾಡಿದಳು.

"ನೀನೂ ಬಾ" ಎಂದೆ.

"ಹುಡುಗನ ಪರೀಕ್ಷಾ ವ್ಯಾಳ್ಯಾ ಸಾಲಿ ಬಿಡಿಸಿ ಪರೀಕ್ಷಾ ತಪ್ಪಿಸೀದ್ರ ವರ್ಷತನಕಾ ಕಲಿಸಿದ್ದ ವ್ಯರ್ಥ ಆಕ್ಕೈತಿ" ಅಂದಳು.

ನನಗೆ ಏನೂ ಮಾತಾಡಲು ತಿಳಿಯಲಿಲ್ಲ. ಮತ್ತೆ ಅವಳೇ, "ಹ್ಯಾಗರೇ ಆಗ್ಲಿ, ಅಲ್ಲಿ ಹ್ವಾದ ಮ್ಯಾಲ ಒಂದ ತಾರ ಮಾಡ್ರಿ" ಅಂದಳು. "ಸರಿ" ಅಂದೆ.

ಹುಡುಗ ಶಾಲೆಗೆ ಹೋಗಿದ್ದರಿಂದ ಅವನು

ಬರುವವರೆಗೂ ಕಾಯುವದು ಸಾಧ್ಯವಿರಲಿಲ್ಲ. ಅವಸರದಲ್ಲಿಯೇ ತಯಾರಾಗಿ ಬಸ್‌ಸ್ಟ್ಯಾಂಡಿಗೆ ಬರುವದರಲ್ಲಿಯೇ ಬಸ್ಸು ತಯಾರಾಗಿ ನಿಂತಿತ್ತು. ಕೂತದ್ದೆ ತಡಾ ಬಸ್ಸು ಬಿಟ್ಟಿತು. ಆಗಲೇ ನೆನಪಾದದ್ದು ಅಪ್ಪನಿಗೆ ಪ್ರಿಯವಾದ 'ಖಾರಾಸೇವು' ಕೊಳ್ಳಬೇಕಾಗಿತ್ತು ಎಂದು. ಇರಲಿ, ಹಾದಿಯಲ್ಲಿ ಇನ್ನೆಲ್ಲಿಯಾದರೂ ಕೊಂಡರೆ ಆದೀತು ಎಂದು ಸಮಾಧಾನ ಮಾಡಿಕೊಂಡೆ.

ಅವ್ವ, ತಾನು ದೇವರಿಗೆ ಹರಕೆ ಹೊತ್ತು ನನ್ನನ್ನು ಹಡೆದುದಾಗಿ ಆಗಾಗ ಹೇಳುತ್ತಿದ್ದಳು. ನಾನು ಕೂಸು ಆಗಿದ್ದಾಗ ಇಸುಬು ಕಾಲಿನ, ಪಿಚ್ಚುಗಣ್ಣಿನ ರೋಗಿಷ್ಟ ಹುಡುಗನಾಗಿದ್ದು ಅವ್ವ ಕೆಲಸಕ್ಕೆ ಹೋಗುವಾಗ ನನ್ನನ್ನು ಯಾರ ಮನೆಯಲ್ಲಿ ಆದರೂ ಬಿಟ್ಟು ಹೋದರೆ, ಅವರು ನನ್ನನ್ನು ಎತ್ತಿಕೊಳ್ಳದೇ ಅಲ್ಲೇ ಬಿಡುತ್ತಿದ್ದುದು.... ನಾನು ಚೀರಿಚೀರಿ ಧ್ವನಿಸತ್ತು ನಿತ್ರಾಣ ಗೊಳ್ಳುತ್ತಿದ್ದುದು... ಎಲ್ಲ ಅವ್ವ ನನಗೆ ಹೇಳಿದ್ದಳು. "ಮಳಕಾಲ ಹಿಡದ ಪಾದದತಕ್ಕಾ ಇಸಬ ' ಹುಣ್ಣ ತಮ್ಮಾ ನಿನಗ, ಹ್ಯಾಂಗ ಜ್ವಾಪಾನ ಮಾಡಿದ್ನೋ, ಹ್ಯಾಂಗ ನೀ ಇಷ್ಟ ದೊಡ್ಡಾಂವ ಆದ್ಯೋ... ಎಲ್ಲಾ ಜಿನ್ನೆಸೂರನ ಪುಣ್ಯಾ" ಅಂದಿದ್ದಳು ಒಮ್ಮೆ. "ಮೂರನೇ ಯತ್ತಾ ಸಾಲಿಗಿ ಹೋಗಾಗು ಮಳಕಾಲ ಮಡಿಚಿ ಮಲಿ ಕುಡಿತಿದ್ದಿ. ಹಿರ್‍ಯಾ ಎಷ್ಟ ಬೇಡ್ರೂ ಬಿಡತಿದ್ದಿಲ್ಲ" ಎಂದು ನಕ್ಕಿದ್ದಳು ಮತ್ತೊಮ್ಮೆ.

ಇಂಥಾ ಅವ್ವ. ಮೌನವಾಗಿಯೇ ಬಹಳ ಪ್ರೀತಿ ಮಾಡುವ ಅಪ್ಪ. ತಮ್ಮೆಲ್ಲ ಶಕ್ತಿ ಮೀರಿ ನನಗೆ ಶಾಲೆ ಕಲಿಸಿದ್ದರು. ಊರಲ್ಲಿ ಇದ್ದ ಒಂದೆಕರೆ ಒಣ ಭೂಮಿಯಲ್ಲಿ ಹ್ಯಾಗೋ ಅವರ ಜೀವನ ನಡೆಯುತ್ತಿತ್ತು. ಭಾಳ ತ್ರಾಸದಿಂದಲೇ ಬಿ.ಕಾಂ. ಓದಿ ಕೆಲಸಕ್ಕೆ ಅಲ್ಲಿ ಇಲ್ಲಿ ಓಡ್ಯಾಡುವಾಗ 'ಗೋವಾ'ದ ಈ ಫ್ಯಾಕ್ಟರಿಯಲ್ಲಿ ಕೆಲಸ ಸಿಕ್ಕಿತು. ನನಗೆ ನೌಕ್ರಿ ಸಿಕ್ಕ ಸುದ್ದಿಯನ್ನು ಊರೆಲ್ಲಾ ಸಕ್ಕರಿ ಹಂಚಿ ಅವ್ವ ಹೇಳಿ ಬಂದಿದ್ದಳು. ಆದರೆ ನನ್ನದಾದರೂ ಎಂತಾ ನೌಕ್ರಿ. ಫ್ಯಾಕ್ಟರಿಯಲ್ಲಿಯ ಹತ್ತು ತಾಸಿನ ದುಡಿತಕ್ಕೆ ಎರಡು ಸಾವಿರ ರೂಪಾಯಿ ಪಗಾರ.

ನೌಕ್ರಿ ಸಿಕ್ಕ ಹೊಸದರಲ್ಲಿ ಒಂದು ದಿನ "ನೀವು ಅಲ್ಲೇ ಬರ್‍ರಿ" ಎಂದು ಕೇಳಿದ್ದೆ.

"ಅಲ್ಲಿ ನಮಗ್ಯಾನ ಹೊತ್ತ ಹೋಕ್ಕತೋ



ಮಾರಾಯ. ಒಂದ ವ್ಯಾಳ್ಯಾ ನಮ್ಮ ಕೈ ಕಾಲು ಬಿದ್ದ ಮ್ಯಾಲ ನೀ ಆದೀಯಲ್ಲಾ" ಎಂದಿದ್ದ ಅಪ್ಪ.

ಅವ್ವ ತನ್ನ ಸಂಬಂಧದಲ್ಲಿಯೇ ಒಂದು ಕನ್ಯಾ ತಂದು ನನ್ನ ಮದುವೆ ಮಾಡುವ ವಿಚಾರದಲ್ಲಿ ಇದ್ದಳು. ಆದರೆ ಅವಳ ಆಶೆ ಕೈಗೂಡಲಿಲ್ಲ. ಗೋವಾದ 'ಪೊಂಡಾ'ದಲ್ಲಿ ಮನೆ ಮಾಡಿ ಫ್ಯಾಕ್ಟರಿಗೆ ಹೋಗಿ ಬಂದು ಮಾಡುವಾಗ ಕರ್ನಾಟಕದ ನಳೇ ಆದ 'ಮಾಲತಿ'ಯ ಪರಿಚಯುವಾಗಿ ಮದುವೆಯೂ ಆಗಿ ಹೋಯಿತು.

ಗೋವಾದ ಸಮುದ್ರ, ನೀರೆ, ಬೀರು, ಬೆಚ್ಚಗಿನ ಹವೆಯ ಬಿತ್ತಲೆ ಬೀಚು ಮುಂಬರುವ ಜೀವನ ತುಂಬ ಸುಂದರ ಎಂಬ ಭ್ರಮೆ ಹುಟ್ಟಿಸಿದ್ದವು. ಮಾಲತಿಗೂ ಒಂದು ಪ್ರೈವೇಟ್ ಫ್ಯಾಕ್ಟರಿಯಲ್ಲಿ ಟೈಪಿಸ್ಟ್ ನೌಕರಿ. ಇಬ್ಬರ ಪಗಾರ. ಬದುಕು ಸುಂದರಗೊಳ್ಳಲು ಇನ್ನೇನು ಬೇಕು ಎನ್ನುವ ಲೆಕ್ಕಾಚಾರದಲ್ಲಿ ಮದುವೆ ವಿಷಯ ಅವ್ವ-ಅಪ್ಪನಿಗೆ ತಿಳಿಸಿದರೆ ಪಕ್ಕಾ ಸಂಪ್ರದಾಯವಾದಿಗಳಾದ ಅವರೂ ಬೇರೆ ಜಾತಿಯ ಹುಡುಗಿಯ ಜೊತೆ ಮದುವೆ ಬೇಡ ಎಂದರೆ? ಅವರನ್ನು ಎದುರಿಸುವ ಶಕ್ತಿ ಇಲ್ಲವೆಂದು ಮನಗಂಡು ಅವರಿಗೆ ತಿಳಿಸದೆ ಮದುವೆಯಾದೆ.

ಮದುವೆಯಾಗಿ ಐದಾರು ತಿಂಗಳಿಗೆ ಊರಿಗೆ ಹೋದಾಗ ಅಂಜುತ್ತಲೇ ಮದುವೆಯಾಗಿದ್ದರ ಬಗ್ಗೆ ಹೇಳಿದೆ. ಬೇರೆ ಜಾತಿಯ ಹುಡುಗಿ ಎಂದು ಅವರಿಗೆ ಹೇಳಲಿಲ್ಲ, ಅವರು ಕೇಳಲಿಲ್ಲ, ಬಹುಶಃ ಬೇರೆ ಜಾತಿಯ ಹುಡುಗಿಯ ಜೊತೆ ನನ್ನ ಮದುವೆಸಾಧ್ಯತೆಯನ್ನು ಅವರು ಊಹಿಸಿರಲಿಕ್ಕಿಲ್ಲ. ಸುದ್ದಿ ಹೇಳಿ ಅವರ ಪ್ರತಿಕ್ರಿಯೆಗಾಗಿ ಕಾದೆ. ಅಪ್ಪ ಎಂದಿನ ಪ್ರೀತಿಯಿಂದಲೇ "ಆದ್ರ ಆಗವಲ್ಯಾಕೋ ಕರಕೊಂಡ ಬರಬರದ... ಊರಾವರ ಎಲ್ಲಾ ನೋಡತಿದ್ರು...." ಅಂದ.

ಅವ್ವ "ಖರೆ ಯಾನೋ ಜಿನ್ನು? ಹ್ಯಾಂಗ ಅದಾಳ ಹುಡುಗಿ?" ಅಂದಳು.

ಸಿಟ್ಟು, ಬೈಗುಳ, ಅವ್ವನ ಕಣ್ಣೀರು, ಹಿಡಿ ಶಾಪ, ಎಲ್ಲ ನಿರೀಕ್ಷಿಸಿದ್ದ ನನಗೆ ಇವರ ದೊಡ್ಡ ಗುಣದ ಆಳದ ಪರಿಯನ್ನು ನೋಡಿ ದಿಕ್ಕು ತಪ್ಪಿತು. ಇವರ ಮುಂದೆ ನಾನು ತೀರ ಸಣ್ಣವನಾದೆ, ಕುಬ್ಜನಾದೆ ಎಂದೆಲ್ಲಾ ಅನಿಸಿ ಇವರ ಮುಗ್ಧ ಪ್ರೀತಿಯ ಮುಂದೆ ಮೂಕನಾಗಿ ಹೋದೆ.

ಅಂಗಡಿ ಮಾಯಪ್ಪ ಶೆಟ್ಟರು ಮಾತ್ರ,

"ಹಿಂಗ್ಯಾಕ ಮಾಡಿದಿ? ನಮ್ಮನ್ನು ಮದುವಿಗೆ ಕರದಿದ್ರ ನಾವು ಬರತಿದ್ದೀವ ಯಾನಪಾ... ಹಂಗ.. ನಮಗರೆ ಗೋವಾ ನೋಡೂದೂ ಎಲ್ಲಿ ಆಕ್ಯೆತಿ?" ಎಂದು ತಮ್ಮ ಅಸಮಾಧಾನ, ಆಶೆಯನ್ನು ಒಟ್ಟಿಗೆ ಕೂಡೇ ಹೇಳಿದ್ದರು.

"ಮುದುಕಾ ಮುದುಕಿಗಿ ನೀ ಒಬ್ಬ ಮಗಾ. ನಿನ್ನ ನೆತ್ತಿಮ್ಯಾಲ ಅಕ್ಕಿ ಕಾಳ ಹಾಕೂದ ತಪ್ಪಿಸಿದಿ ಅವರಿಗಿ" ಅಂದರು ಮತ್ತೆ...

"ಪರಿಸ್ಥಿತಿ ನನ್ನ ಕೈಯಾಗ ಇದ್ದಿದ್ದಿಲ್ಲರಿ" ಅಂದೆ. ಅವರು ವ್ಯಂಗ್ಯವಾಗಿ ನಕ್ಕಂತಾಯಿತು. ಅವ್ವ ಅದೊಂದು ಸಾಮಾನ್ಯ ಕ್ರಿಯೆ ಎನ್ನುವಂತೆ "ಅಯ್ಯ ಶಿವಕ್ಕ ನಮ್ಮ ಜಿನ್ನ ಅಲ್ಲೇ ಮದಿವಿ ಆಗ್ಯಾನಂತ. ಹುಡುಗಿ ಚಂದ ಅದಾಳಂತ" ಎಂದು ಹೇಳುತ್ತ ಊರೆಲ್ಲಾ ಅಡ್ಯಾಡಿ ಬಂದಳು.

"ಪಾಡ ಆತ ಬಿಡ. ಖರ್ಚಿಲ್ಲ ಕಂದಿಲ್ಲ" ಅಂದರು ಜನ.

ಮದುವೆ ಆದ ಮೇಲೆ ನಿಧಾನ ಮನೆಯ ಖರ್ಚುಗಳು ಹೆಚ್ಚುತ್ತ ಬಂದು ಇಬ್ಬರ ದುಡಿತ ಯಾತಕ್ಕೂ ಸಾಲದು ಎನ್ನುವ ಸತ್ಯ ಗೊತ್ತಾಗುತ್ತಾ ಹೋಗಿ ಸಮುದ್ರ ತೆರೆಯ ನೊರೆಯ ಹಾಗೆ ಆಶೆಗಳು ಗಟ್ಟಿಗೊಳ್ಳದೆ ತೇಲುತ್ತಲೇ ಹೋದವು.

ಮದುವೆಗೆ ಮುಂಚೆ, "ಮಗು ಆಗುವವರೆಗೂ ನೌಕ್ರಿ ಮಾಡುತ್ತೇನೆ, ಮುಂದೆ ಬಿಡುತ್ತೇನೆ" ಎಂದಿದ್ದಳು ಮಾಲತಿ. ಆದರೆ ಖರ್ಚು ವೆಚ್ಚಗಳನ್ನು ತೂಗಿಸುವ ಹಾವು-ಏಣಿ ಆಟದಲ್ಲಿ ಅವಳ ನೌಕರಿ ಬಿಡುವ ಕನಸು ನನಸಾಗಲೇ ಇಲ್ಲ.

ಮುಂದೆ ಮಗು ಆದಾಗ 'ಗಂಡು ಮಗು' ಎಂದು ಊರಿಗೆ ಪತ್ರ ಬರೆದು ಹಾಕಿದೆ. ಅವರು ಅಲ್ಲಿಂದಲೇ 'ಮೊಮ್ಮಗ ಮತ್ತು ಸೊಸೀನ ಕರಕೊಂಡು ಬಾ' ಎಂದು ಪತ್ರ ಬರೆದರು. ಮಗು ದೊಡ್ಡವನಾಗಿ ಒಂದನೇ ಕ್ಲಾಸಿನಲ್ಲಿ ಕಲಿಯಲು ಸುರುಮಾಡಿದ ಮೇಲೂ ಊರಿಗೆ ಅವರನ್ನು ಕರೆದುಕೊಂಡು ಹೋಗುವುದು ಸಾಧ್ಯವಾಗಲೇ ಇಲ್ಲ. ಹುಡುಗನ ಸ್ಕೂಲು, ಫೀ, ಬೂಟು, ಪುಸ್ತಕ

ಅಂತ ಹಣ ಖರ್ಚಾಗುತ್ತಾ ಹೋಯಿತು. ಈ ವರ್ಷ ಬೇಸಿಗೆಯಲ್ಲಿ ಹುಡುಗನ ಪರೀಕ್ಷೆ ಮುಗಿದ ಮೇಲೆ ಊರಿಗೆ ಹೋಗಬೇಕೆಂದು ಹಣ ಕೂಡಿಸಿ ಇಟ್ಟಿದ್ದೆವು. ಆದರೆ ಈಗ ಏಕಾ ಏಕಿ, ಅವ್ವನ ಪತ್ರ. ಬಸ್ಸು ಓಡುತ್ತಲೇ ಇತ್ತು. ನಿದ್ದೆ ಇಲ್ಲದೆ ಯೋಚನೆಯಲ್ಲಿ ಮುಳುಗಿ ಹೋದೆ.

- ೨ -

ಅಥಣಿ ಬಂತು. ಮುಂಜಾನೆಯ ಮಬ್ಬು. ಚಹಾಕುಡಿಯುವ ಮನಸ್ಸಾಗಲಿಲ್ಲ. ಹಳ್ಳಿಯ ಪಹಲೆ ಬಸ್ ಹಿಡಿದು ಕುಳಿತೆ. ಊರಲ್ಲಿ ಇಳಿದಾಗ ಹೊಳೆಯಿಂದ ಸ್ನಾನ ಮಾಡಿ ತೊಯ್ದ ಧೋತರವನ್ನೆ ಲುಂಗಿಯಂತೆ ಉಟ್ಟುಕೊಂಡು ಹೆಗಲ ಮೇಲೆ ತೊಯ್ದ ಟವೆಲ್ ಹಾಕಿಕೊಂಡು ಸಾಲಾಗಿ ಜನ ಬರುತ್ತಿದ್ದರು. ನನಗೆ ಸಂಶಯ ಬಂದು ಕೇಳಿದೆ,

"ಎಲ್ಲಾ ಮುಗೀತಪಾ ನಿಮ್ಮ ಅಪ್ಪಂದಾ... ಇದss ಬೂದಿ ಬಳದ ಬಂದೀವ ನೋಡ" ಅಂದ ಪಾರಿಸಕಾಕಾ.



ನಿಂತ ನೆಲಾ ಕುಸಿದಂತಾಗಿ ದಿಕ್ಕು ತಪ್ಪಿತು. ಕಣ್ಣಿಗೆ ಚಕ್ರ ಬಂದಂತೆ ಅನಿಸಲು ಸುರು ಆಯಿತು. ಅಲ್ಲಿಂದ ಯಾರೋ ಒಬ್ಬ ನನ್ನ ಸೂಟ್‌ಕೇಸ್ ತಗೊಂಡ. ನಾನು ಇನ್ನೇನು ಬಿದ್ದೇ ಬಿಡುತ್ತೇನೆ ಎನ್ನುವವನಂತೆ ನನ್ನ ರಟ್ಟೆಯನ್ನು ಹಿಡಿದುಕೊಂಡ. ನನಗಾಗಿ ಕಾಯುತ್ತ ನಿಂತವರಂತೆ ಬಸ್‌ಸ್ಟಾಂಡಿನಲ್ಲಿ ಜನಾ ಗುಬುಗುಬು ಗ್ವಾಳಿ ಆದರು.

"ಪತ್ರಾ ಹಾಕ್ಸಿತ್ತಲಾ... ದೌಡ ಬರಬೇಕೋ? ತಡಾ ಯಾಕ ಮಾಡಿದಿ?" ಅಂದ ಒಬ್ಬ.

"ನಾ ಮದಲss ಬಡಕೊಂಡ್ನಿ. ತಾರ ಮಾಡ್ರಿ ಅಂತ. ನನ್ನ ಮಾತ ಕೇಳಲಿಲ್ಲ" ಅಂದ ಇನ್ನೊಬ್ಬ.

"ದೂರಿನ ಊರ. ಮಾಡುದ ಯಾನೈತಿ? ಕಾದಿ ಕುಂಗೂದ ಐತಿ? ನಮ್ಮ ಕೈಯಾಗ ಯಾನ ಇಲ್ಲ" ಅಂದರು ಯಾರೋ ಒಬ್ಬರು.

ಅಪ್ಪನ ಸಾವು ಇಡೀ ಊರನ್ನ ಅಡರಿ ಬಿಟ್ಟಿದೆ, ಊರೆಲ್ಲಾ ಸೂತಕ ಆಚರಿಸುತ್ತಿರುವಂತೆ ನನಗೆ ಅನಿಸುತ್ತಿರುವಾಗಲೇ ಮನೆಗೆ ಹೋದೆ. ನನ್ನ ಎಂದೆ ಗಿಜುಗುಟ್ಟುವ ಜನ. ಹೆಂಗಸರು, ಗಂಡಸರೆನ್ನದೆ ಮನೆಗೆ ಬಂದರು. ಇವರೆಲ್ಲರ ಪ್ರೀತಿಗೆ ನಾನು ಎಷ್ಟರ ಮಟ್ಟಿಗೆ ಯೋಗ್ಯ ಅನಿಸಿತು.

ಅವ್ವ ಅಳಲು ಕಣ್ಣೀರು ಕೂಡಾ ಇಲ್ಲವಾಗಿ ಕಳೆ ಹಾರಿದಂತೆ ಗೋಡೆಗೆ ಆತು ಕುಳಿತಿದ್ದಳು. ನನ್ನನ್ನು ನೋಡಿ "ಈಗ ಬಂದ್ಯಾನೋ ಜಿನ್ನೆಸೂ ಬಿss ನನ್ನ ಮಗನs ಹಡಗ ಮುಣಗಿ ಹೋಗೇತೋ.... ಎಂದು ನನಗೆ ... ಸಿಕ್ಕಿ ಬಿಕ್ಕಿ ಅಳುವುದನ್ನು ಬಿಟ್ಟರೆ ನನಗೇನು ಉಳಿದಿರಲಿಲ್ಲ. ಸಾಯುವ ಮುಂದೆ ಅಪ್ಪ ... ಬರಲು ತಯಾರಿ ಆಗಿದ್ದ ಬಗ್ಗೆ ಅವ್ವ ... ಇಲ್ಲಿ ಮುಂಜಾನೆ ಬಯಲುಕಡೆಗೆ ... ಒಂದು ಮೈಲು ದೂರವಾದರೂ ನಡೆಯಬೇಕು. ವಾಯು ಹಾದ ಮೊಣಕಾಲುಗಳ ... ಗೆ ಹಿಂಸೆ ಆಗುತ್ತಿತ್ತು. 'ಗೋವಾದಾಗ ಐದ ... ಇರತಾವು' ಎಂದು ಅನ್ನುತ್ತಿದ್ದ ಅಪ್ಪನ ... ಬಗ್ಗೆ ಹಾಟ್ಯಾಡಿಕೊಂಡು ಅಳುತ್ತ ... ನಗೆ ಹೇಳಿದಳು. ಯಾಕೆ ಸಾಯುವವರೆಲ್ಲಾ ಸತ್ತ ಆಸೆಯ ಕ್ಷೀಣ ನೋವನ್ನು ಬಿಟ್ಟು ಹೋಗುತ್ತಾರೆ? ನಿಜವಾಗಿಯೂ ಅಪ್ಪ ಸಾಯುವಾಗ ನನ್ನನ್ನು ನೆನಪಿಕೊಂಡನೆ? ನನ್ನೊಡನೆ ಗೋವಾದಲ್ಲಿ ಇದ್ದರೆ ತಾನು ಸುಖವಾಗಿರುತ್ತೇನೆ ಎಂದು ನಂಬಿದ್ದನೆ? ಅಥವಾ ಉದ್ದಕ್ಕೂ ನಾನು ಅವನಿಗೆ ಮಾಡಿದ ಮೋಸವನ್ನು ಯಾರಿಗೂ ಹೇಳದೇ ಹೊಟ್ಟೆಯಲ್ಲಿ ಇಟ್ಟುಕೊಂಡು ತೀರ ನೋವನ್ನು ಅನುಭವಿಸಿ ಸತ್ತನೆ? ಅವ್ವನ ಅಳುವಿನಿಂದ ನನಗೇನು ತಿಳಿಯುವ ಹಾಗಿರಲಿಲ್ಲ.

ಅವ್ವ ಅಳುತ್ತಲೇ ಇದ್ದಳು. ಎರಡು ದಿನದಿಂದಲೂ ಅತ್ತು ಅತ್ತು ದನಿ ಎಲ್ಲಾ ಸತ್ತು ಹೋಗಿ ಶಬ್ದಗಳು ತಿಳಿಯದೆ ಆವಳು ಎದೆ ಎದೆ ಬಡಿದುಕೊಳ್ಳುವುದು, ದಳ ದಳ ಕಣ್ಣೀರು ಉದುರುವುದು ಮಾತ್ರ ಕಾಣುತ್ತಿತ್ತು. ಅವ್ವನನ್ನು ಸಮಾಧಾನ ಮಾಡುವುದು ಸಧ್ಯ ಈಗ ನನ್ನ ಕೈಯಲ್ಲಿ ಇರಲಿಲ್ಲ.

"ಸಾಲಿ ಕಲಿಸಿ ಯಾವ ಉಪಯೋಗ ಆತು? ಸಾಯು ಮುಂದ ಬಾಯಾಗ ನೀರ ಹಾಕಾವರ ದಿಕ್ಕಿಲ್ಲದಂಗ ಆತ ನೋಡ ನೇಮಣ್ಣಾಗ" ಅಂದಳು ಒಬ್ಬಾಕಿ.

"ಮಗಾ ಇದ್ರುನು ಬೆಂಕಿ ಹಿಡ್ಯಾಕ ಮತ್ತೊಬ್ಬರ್ನ ಕರ್‍ಯೋ ಪರಿಸ್ಥಿತಿ ಬತ್ತ... ಯಾರಕ್ಯಾರಗಟ್ಲೆ ಸುಟ್ಟ ಬಂದೀವಿ" ಅಂದ ಇನ್ನೊಬ್ಬ. ಎಲ್ಲ ಚುಚ್ಚುವ ಮಾತುಗಳೇ.

ಇಲ್ಲಿ ಅಪ್ಪ ಸಾಯುತ್ತಿರುವಾಗ ರಜಾ ಹಾಕಿ ನಾವು ಗೋವಾದ ಬೀಚಿನಲ್ಲಿ ನಗುತ್ತ ತಿರುಗಾಡುತ್ತಿರುವುದು, ಮಗ ಉಸುಕಿನಿಂದ ಗುಬ್ಬಿ ಮನೆ ಮಾಡಿ ... ನೆಲ ಮಾಡುವ ಆಟದಲ್ಲಿ ಲೀನವಾಗಿದ್ದು ನೆನಪಾಗಿ ಅಪರಾಧಿ ಪ್ರಜ್ಞೆ ನನ್ನನ್ನು ಕಾಡಿತು. ಎಂದೂ ಬೀಚಿಗೆ ಹೋಗದೇ ಇದ್ದವರು ಅದೇ ದಿನವನ್ನು ನಾವು ಹೇಗೆ ಆಯ್ಕೆ ಮಾಡಿಕೊಂಡೆವು? ನನ್ನ ಮೇಲೆ ನನಗೆ ಸಿಟ್ಟು ಬಂತು.

"ಮಾಲತಿಗೆ ತಾರ ಮಾಡಿ ಕರೆಸುತ್ತೇನೆ" ಅಂದೆ.

"ಹೊಸದಾಗಿ ಮೊದಲ ಸಲ ಮನೆಗೆ ಬರುವವಳು ಹೊಚ್ಚೀಲ ಮಗಾ, ಸೂತಕದಲ್ಲಿ ಬರುವದು ಬ್ಯಾಡ" ಎಂದು ಅವ್ವ ಹೇಳಿದಳು.

"ಅದಕ್ಕಾನಿಲ್ಲ. ಇಂಥಾದ್ದರಾಗ ಯಾತರ ಹೊಸದಾಗಿ" ಅಂದೆ.

"ಮೊಮ್ಮಗ್ನ ಅರೆ ಚಲೋ ಆಗಬೇಕೋ ಬ್ಯಾಡೋ?" ಅಂದಳು.

ಸುತ್ತ ಕುಳಿತ ಮಂದಿ ಅವ್ವನ ಮಾತು ಖರೆ ಅಂದರು.

ನಾನು ಸುಮ್ಮನಾದೆ.

ಕನ್ನಡ ಸಾಲೆಯ ದೋಸ್ತ ಶಿವರುದ್ರ ನನ್ನನ್ನು ಊಟಕ್ಕೆ ಕರೆದುಕೊಂಡು ಹೋದ. ಗೆಳೆಯನ ಅವ್ವ, ನನ್ನ ಅಪ್ಪನ ಬಗ್ಗೆ ಗುಣಗಾನ ಮಾಡಿದಳು.

"ಓಣ್ಯಾಗ ಹೋಗೂ ಕೂಸಗೊಳ್ನ ಸಾಗರ ಬಿದ್ದ ಎತ್ತಕೋತಿದ್ದ ನಿನ್ನ ಅಪ್ಪ" ಅಂದಳು.

"ಮನಿ ಮೊಮ್ಮಗ್ಗಾ ಒಮ್ಮಿ ಸುದ್ದಾ ಮೋತಿ ತೋರಿಸಲಿಲ್ಲಾ" ಅಂದಳು. ಹೀಗೆ ಅನೇಕ ಮಾತುಗಳು ನನ್ನ ತಪ್ಪುಗಳನ್ನು ಎತ್ತಿ ತೋರಿಸಿದವು.

ದಿನಕರ್ಮದ ದಿನಾ ಅಂಗಡಿ ಶೆಟ್ಟರು ನನ್ನ ಹತ್ತಿರ ಬಂದು "ನಿಮ್ಮ ಅವಂದ ಹ್ಯಾಂಗ ಮಾಡಾಂವಪಾ ಇನ್ನ?" ಅಂದರು.

"ಗೋವಾಕ್ಕ ಕರಕೊಂಡ ಹೊಕ್ಕೇನಿ" ಅಂದೆ.

"ಅಲ್ಲಿ ಹ್ಯಾಂಗ ಇರತಾಳೋ ಯಾನೋ ಮುದುಕಿ. ನಿನ್ನ ಹೆಂಡ್ತಿ ಜೋಡಿ ಹೊಂದತಾಳೋ ಇಲ್ಲೋ ಯಾರಿಗಿ ಖೂನ?" ಎಂದು ಸಂಶಯ ಮಾಡಿದರು.

ಮಾಲತಿಗೆ, 'ಅಪ್ಪಂದು ಮುಗೀತು. ನಾನೇ ಅವ್ವನನ್ನು ಕರೆದುಕೊಂಡು ಬರುತ್ತಿದ್ದೇನೆ' ಎಂದು ಪತ್ರ ಬರೆದು ಹಾಕಿದೆ.

- ೩ -

ಅವ್ವನನ್ನು ಗೋವಾಕ್ಕೆ ಕರೆದುಕೊಂಡು ಹೋಗುವುದು ತೀರ್ಮಾನವಾಯಿತು.

"ಅಲ್ಲಿ ನನಗ ಹೊತ್ತ ಹೋಗುದಿಲ್ಲ" ಎಂದಳು.

"ಇಲ್ಲಿ ಇದ್ದ ಯಾನ ಮಾಡಕ್ಕಿ?" ಅಂದೆ.

"ನನ್ನ ಹಿರ್‍ಯಾ ಮೆರದ ಹ್ವಾದ ಊರ. ಇಲ್ಲೇ ಇರತೇನಿ. ಕಾಣದ ಊರಾಗ ಕೈ ಕಾಲ ಕಟ್ಟಿ ಒಗಿಬ್ಯಾಡ" ಅಂದಳು.

"ಇಲ್ಲಿ ಜಡ್ಡ ಜಾಪತ್ರಿಯಾದ್ರ ಯಾನ ಮಾಡಕ್ಕಿ?" ಅಂದೆ.



"ಯಾವ ಸಮಸ್ಯೇನೂ ಬಗೆಹರಿಸೋಕೆ ನಮಗೆ ಸಮಯಾನೇ ಸಿಗ್ಲಿಲ್ಲ. ಆದ್ರೂ ಐದು ವರ್ಷ ಆಳ್ವಿಕೆ ಮುಗ್ಸಿದೀವಿ. ಅದು ಮುಖ್ಯ"

ಅದಕ್ಕೆ ಅವಳಲ್ಲಿ ಉತ್ತರವಿರಲಿಲ್ಲ.

"ಅಲ್ಲಿ ನಿನ್ನ ಮೊಮ್ಮಗ ಅದಾನ, ನಾ ಅದೇನಿ' ಅಂದೆ.

ಮೊಮ್ಮಗನನ್ನ ನೋಡುವ ಆಶೆ ಹುಟ್ಟಿತೋ ಇಲ್ಲಾ ಎಲ್ಲಿದ್ದರೆ ಏನೋ ಅನ್ನೋ ದಾರ್ಶನಿಕತೆ ಕಾಡಿತೋ, ಸುಮ್ಮನಾದಳು.

- ೪ -

ಅವ್ವ ಗೋವಾಕ್ಕ ಹೋಗುತ್ತಾಳೆ ಎನ್ನುವುದು ತಿಳಿದ ಮೇಲೆ ಊರಿಗೆ ಊರೇ ಗಂಡು ಹೆಣ್ಣು ಎನ್ನದೆ ಕಿತ್ತು ಬಂದು ಅವ್ವನನ್ನು ಮಾತಾಡಿಸಲು ಸುರು ಮಾಡಿದರು. ಬಂದವರೆಲ್ಲಾ ಮಗನ್ನ ಸುರ್ ಅನಿಸಿ ಅಪ್ಪನ ಸ್ವಭಾವದ ಗುಣಗಾನ ಮಾಡಿ ಅವ್ವನ ಬಗ್ಗೆ ಕನಿಕರದ ಮಾತಾಡಿ 'ಅವಳನ್ನ ಚಲೋ ನೋಡಿಕೊ' ಎಂದು ಉಪದೇಶ ಕೊಡಲು ಸುರುಮಾಡಿದರು.

"ನಿನ್ನ ಅವ್ವನ ಚಲೋತಾಗಿ ನೋಡಕಾ ಪಾ. ಬಾಳ ತ್ರಾಸಲೇ ಬೆಳಸ್ಯಾಳ ನಿನ್ನ" ಅಂದಳು ಶಿವಕ್ಕ

"ನಿನ್ನ ಅವ್ವ ಬಾಯಿ ಸತ್ತಾಕಿ ತಮ್ಮಾ, ನಿನ್ನ ಹೆಂಡತೀದು ಅಂಜಿಕಿ ನನಗ" ಅಂದಳು [illegible]

ಆಯಿ.

“ನೋಡಪಾ, ನಿನ್ನ ಹೆಂಡತಿ ಸಿಡಕ ಸಿಡಕ ಅಂದು ನಿಮ್ಮ ಅವ್ವನ ಹಾಳರಿ ಮಾಡಿ, ಯಾನರೆ ಹೆಚ್ಚು ಕಮ್ಮಿ ಆದೀತ,” ಅಂದ ಪಾರಿಸಕಾಕಾ.

“ಹಂಗ್ಯಾನ ಇಲ್ಲರಿ.... ಹಂಗ್ಯಾನ ಇಲ್ಲ” ಅಂದೆ.

“ಸಿಂದss ಅಲ್ಲೋ” ಎಂದು ಶೆಟ್ಟರು ಮಾತು ನಿಲ್ಲಿಸಿದರು.

“ಅಂತಾ ಹುಡುಗ ಅಲ್ಲ ಏಳ್ರಿ ಶೆಟ್ಟರ ನಮ್ಮ ಜಿನ್ನ” ಅಂದ ಒಬ್ಬ.

“ಇಂವಾ ನಮ್ಮಾಂವ ಆಕಿ ಯಾರು? ಏಟ್ಟಾದ್ರು ಹೊರಗಿನಾಕಿ” ಅಂದರು ಶೆಟ್ಟರು.

ಎಲ್ಲರೂ ತಾವು ಎಂದೂ ನೋಡಿರದ ನನ್ನ ಹೆಂಡತಿಯ ಬಗ್ಗೆ ಹೆದರಿಕೆ ತುಂಬಿಕೊಂಡು ಮಾತಾಡಿದ್ದು ತಿಳಿದು ನನಗೆ ದಿಗಿಲಾಯಿತು. ಸಾಯುವಾಗ ಅಪ್ಪನು ಹಿಂಗ ವಿಚಾರ ಮಾಡಿ ಎಂದೂ ಗೋವಾಕ್ಕ ಬರದೆ ತನ್ನ ಸೊಸಿ, ತನ್ನ ಮೊಮ್ಮಗನನ್ನು ನೋಡದೆ ಸತ್ತನೆ? ಎನ್ನುವ ಸಂಶಯ ನನ್ನನ್ನು ಕಾಡಿತು. ಸಾಲದ್ದಕ್ಕೆ ಅಪ್ಪನನ್ನು ನಾನು ಗೋವಾಕ್ಕೆ ಬಾ ಎಂದು ಸರಿಯಾಗಿ ಕರೆಯಲೇ ಇಲ್ಲಾ, ಮಾಲತಿಯನ್ನು ಅವನಿಗೆ ತೋರಿಸಲು ಸುಳ್ಳುನೆಪ ಒಡ್ಡಿ ಕುಳಿತೆ ಎನಿಸಿತು. ಇವರೆಲ್ಲರ ಹೆದರಿಕೆಗೆ ಒಂದು ಗಟ್ಟಿ ಕಾರಣ ಸಿಕ್ಕು ನನ್ನ ಪಲಾಯನವಾದಿ ಮನಸ್ಸು ಇವರಿಗೆ ನಿಚ್ಚಳ ತಿಳಿದಿದೆ ಎನಿಸಿ, ನನ್ನ ಬಗ್ಗೆ ಕೂಡಾ ಇವರು ಅರ್ಧ ವಿಶ್ವಾಸ ಇಟ್ಟಿದ್ದಾರೆ ಎನಿಸಿ, ನನ್ನ ನಂಬಿಕೆಯ ನೆಲೆಯೇ ಕುಸಿದು ಬಿದ್ದಂತಾಗಿ ಇವರೆಲ್ಲರ ಪ್ರಶ್ನೆಗಳ ಹಿಂದಿನ ಆತಂಕದ ಭಯಕ್ಕೆ ನಿರುತ್ತರನಾದೆ.

ದಿಂಡ ಹಾಕಿದ ಸೀರಿ. ಬಣ್ಣ ಮಾಸಿದ ಕುಪ್ಪಸ. ಅರ್ಧ ಬಿಳೀ ತಲೆ. ಸುಕ್ಕ ಗಟ್ಟಿದ ಮುಖ. ಕಂದಿದ ಬಣ್ಣ. ಹಣೆಯಲ್ಲಿ ಕುಂಕುಮ ಇಲ್ಲದೆ ಇನ್ನಷ್ಟು ವಿಷಾದವನ್ನು ತಂದುಕೊಡುವ ದೈನ್ಯ ತುಂಬಿದ ಮುಖ. ಜಾಚೀಲಿ ಹಚ್ಚಿದ ಕರ್‍ರಗಿನ ಹಲ್ಲುಗಳು. ಹೀಗೆ ಅವಳನ್ನು ನೋಡಿದಾಗೊಮ್ಮೆ ನನಗೆ ಕನಿಕರದ ಅವ್ಯಕ್ತ ನೋವು ಎದೆಯಲ್ಲಿ ತುಂಬಿ ಬಂದು ‘ಇವರೆಲ್ಲಾ ಹೇಳುವುದು ಸರಿ ಇದ್ದೀತು’ ಅನಿಸಲು ಸುರು ಆಯಿತು.

ಶೆಟ್ಟರು ನನ್ನನ್ನು ಹೊರಗೆ ಕರೆದುಕೊಂಡು ಹೋಗಿ, “ನೋಡ ಜಿನ್ನ, ಹಜಾರ ಮಂದಿ ಹಜಾರ ಮಾತಾಡತಾರ. ನಾ ನಿನ್ನ ನಂಬತೀನಿ. ನಿನ್ನ ಅಪ್ಪ ಎಂದೂ ಯಾರ್‍ನೂ ಬೇಡಿದಾವ ಅಲ್ಲ. ಅವನ ಜಾಗದಾಗ ನಿಂತ ಮಾತಾಡತೀನ, ಮುದಕೀನ ಮುಟಗ್ಯಾಗ ಹಿಡದ ಜ್ವಾಪಾನ ಮಾಡ” ಅಂದರು.

“ಕಾಳಜಿ ಬಿಡ್ರಿ” ಅಂದೆ.

– ೫ –

ನಾಳೆ ಗೋವಾಕ್ಕೆ ಹೋಗುವುದು ತಿಳಿದ ಮೇಲೆ ರಾತ್ರಿ ಎಲ್ಲಾ ಅವ್ವ ಜಂತಿ ನೋಡುತ್ತ ಕಳೆದಳು. ಅವಳು ಗೋವಾಕ್ಕೆ ಬರಲು ವಿಶೇಷವಾಗಿ ಏನನ್ನೂ ಕಟ್ಟಿಕೊಳ್ಳಬೇಕಿರಲಿಲ್ಲ, ಆದರೂ ಒಂದು ಮಮ್ಮೆಯ ಚೀಲ ತುಂಬಿಟ್ಟು ಸಾಮಾನು ಕಟ್ಟಿದಳು.

“ಇವೆಲ್ಲಾ ಬ್ಯಾಡ ಅವ್ವಾ, ಅಲ್ಲೆ ಎಲ್ಲಿ ಇಡಕ್ಕಿ?” ಅಂದೆ. ಸುಮ್ಮನಾದಳು.

ಆದರೂ ಅವ್ವನಿಗೆ ತಾನು ಹೊಲಿದ ಎಲ್ಲ ಕೌದಿಗಳನ್ನು ತರಲೇಬೇಕೆಂಬ ಆಶೆ. ಹಾಗೆಂದು ಹೇಳಿದಳು. ಅವ್ವ ಹೊಲಿದ ಎಲ್ಲ ಕೌದಿಗಳನ್ನು ಜೋಡಿಸಿಟ್ಟರೆ ಗೋವಾದ ನನ್ನ ಎರಡು ಕೋಣೆಗಳ ಬಾಡಿಗಿ ಮನೆಯಲ್ಲಿ ಇಡುವದಾದರೂ ಎಲ್ಲಿ?

ಆದರೆ ಇಡೀ ತನ್ನ ಜೀವಮಾನದುದ್ದಕ್ಕೂ ಕೌದಿಗಳನ್ನು ಹೊಲೆಯುತ್ತಾ ಬದುಕಿದ ಅವ್ವನಿಗೆ ಕೌದಿಗಳನ್ನು ಹೊಲೆಯುತ್ತಾ ಬದುಕಿದ ಅವ್ವನಿಗೆ ಕೌದಿಗಳಲ್ಲಿ ತನ್ನ ಜೀವವಿದೆ ಅನಿಸಿರಬೇಕು. ಸಾಲದ್ದಕ್ಕೆ ಅವ್ವ ಕೌದಿ ಹೊಲಿಯುವಾಗ ಅಪ್ಪ ಗುಗ್ಗರಿ ತಿನ್ನುತ್ತ ನನ್ನ ಬಗ್ಗೆ ಅವನು ಕಟ್ಟಿದ ಕನಸುಗಳನ್ನು ಅವ್ವನಿಗೆ ಹೇಳುತ್ತಾ, ಅವಳಿಗೆ ಸೂಜಿಯಲ್ಲಿ ದಾರ ಪೋಣಿಸಿಕೊಡುತ್ತಾ, ಅವ್ವ ಸಣ್ಣ ದನಿಯಲ್ಲಿ,

‘ಎಲ್ಲಿ ಹುಡುಕಲೀ ಇನ್ನ.... ಚಲುವ ನೇಮಿನಾಥನ.......’

-ಎಂದು ಹಾಡ ಹಾಡುತ್ತ ಹೊಲಿದ ಕೌದಿಗಳು ಅವು.

“ಹ್ಯಾಂಗ ಬಿಟ್ಟು ಹೋಗುದೋ?” ಅಂದಳು.

“ಈಗ ಗಂಟ ಕಟ್ಟಿ ಶೆಟ್ಟರ ಮನ್ಯಾಗ

ಇಡೂನು. ನಾ ಇನ್ನೊಮ್ಮೆ ಬಂದ ತಗೊಂಡ ಹೊಕ್ಕೇನ" ಅಂದೆ.

ನಾನು ಮತ್ತೊಮ್ಮೆ ಊರಿಗೆ ಬರುತ್ತೇನೆ ಅನ್ನುವದನ್ನು ಕೇಳಿ ಅವ್ವ ನಿರಾಳಗೊಂಡಳು. ಒಮ್ಮೆಲೆ ಈ ಊರ ಒಗೆತನ ಹರಿದು ಹೊಂಟಿಲ್ಲ ಮಗ. ಮತ್ತೆ ಬಂದೂ ಹೋಗಿ ಇಲ್ಲಿಯ ಜೀವಸೆಲೆಗೆ ನಿಜ ಬಿಂದು ಆಗುತ್ತಾನೆ ಎನ್ನುವ ತರ್ಕವೇ ಅವಳನ್ನು ಕಾಡುತ್ತಿದ್ದ ಅನಾಥ ಪ್ರಜ್ಞೆಯನ್ನು ತಪ್ಪಿಸಿರಬೇಕು. "ಆಗಲಿ ಮಗನ..." ಎಂದು ಒಪ್ಪಿಕೊಂಡಳು.

ನನಗೂ ಕೌದಿಗಳೆಂದರೆ ತುಂಬ ಪ್ರೀತಿಯೇ. ಬಣ್ಣ ಬಣ್ಣದ ಸೀರೆದಡಿ, ಚೌಕುಗಳನ್ನು ಹೊಂದಿ ಕಲಾತ್ಮಕವಾಗಿ ಕೈಯಿಂದ ಹೊಲಿದ ನಮ್ಮೆಲ್ಲರ ಪುರಾತನ ನೆನಪುಗಳನ್ನು ತನ್ನ ಒಡಲಲ್ಲಿ ಹುಗಿದಿಟ್ಟುಕೊಂಡ ಕೌದಿಗಳು. ಹಾಸಲು ಹೊದಿಯಲು, ಬೆಚ್ಚಗಿನ ಮೆತ್ತಗಿದ್ದ ಆ ಚೌಕುಗಳಲ್ಲಿ ನನ್ನ ಸಂಪೂರ್ಣ ಬಾಲ್ಯವನ್ನೇ ಕಳೆದಿದ್ದೆ. ಆದರೆ ಗೋವಾದ ಸಂದರ್ಭದಲ್ಲಿ ಅವೇನು ಉಪಯೋಗಕ್ಕೆ ಬರುವದಿಲ್ಲ ಎನ್ನುವ ತರ್ಕ ನನ್ನದು.

- ೬ -

ಮುಂಜಾನೆ ಮೊದಲ ನಾವಿಗೆ ಹೊರಟರೆ ರಾತ್ರಿಯಾಗುವದರಲ್ಲೇ ಗೋವಾ ಸೇರಬಹುದು, ಅವ್ವನಿಗೆ ತೊಂದರೆ ಆಗುವುದಿಲ್ಲ ಎನ್ನುವ ಕಾರಣಕ್ಕೆ ಹೊರಡಲು ತಯಾರಾದೆವು. ಮತ್ತೆ ಊರಿಗೆ ಊರೇ ಅವ್ವನನ್ನು ಕಳಿಸಲು ಬಂದಿತು. ಗಂಡಸರೆಲ್ಲಾ ನಡುರಸ್ತೆಯಲ್ಲಿ ಅವ್ವನ ಕೈ ಹಿಡಿದುಕೊಂಡು "ಹೊಗಕ್ಕಿ ಯಾನವಾ?.... ಮತ್ತ... ಭೇಟಿ?" ಎಂದು ಕೇಳುವರು. ಹೆಂಗಸರು ಮೂಗನ್ನು ಕೆಂಪು ಮಾಡಿಕೊಂಡು ಕಣ್ಣೀರನ್ನು ದಳ ದಳ ಉದುರಿಸುತ್ತಾ,

"ಹೋಗಿ.... ಬಾ.... ಆಯಿ.... ಹೋಗಿ... ಬಾ.... ಅತ್ತಿ" ಎನ್ನುವರು.

ಇವರೆಲ್ಲರ ಕಣ್ಣಲ್ಲಿ ಬರೀ ಅಗಲಿಕೆಯಿಂದಲೇ ನೀರು ಬರುವ ಸಾಮರ್ಥ್ಯ ಅವ್ವನ ವ್ಯಕ್ತಿತ್ವದಲ್ಲಿ ಇದೆ ಎನ್ನುವ ಸತ್ಯ ನನ್ನ ಜವಾಬುದಾರಿಯನ್ನು ಹೆಚ್ಚು ಮಾಡಿತು. ಹೊಳೆಯವರೆಗೂ ನೂರಾರು

## ಚಾಲಾಕಿ ಚುಕ್ಕೆಗಳು

ತಾವು
ನಿದ್ರಿಸಲು
ರಾತ್ರಿ ಪಾಳಿಯ
ಚುಕ್ಕೆಗಳು;

ಚಂದಿರ
ಅಲ್ಲಿಂದ ಹೋದರೆ
ಸಾಕೆಂದು
ಕಾಯುತಿರುತ್ತವೆ!

— ಶಿವಾನಂದ ಕೂಡಾಗಿ



ಜನಾ, ಮಕ್ಕಳು ಮುದುಕರು ಎನ್ನದೆ ಅವ್ವನನ್ನು ಕಳಿಸಲು ಬಂದರು. ಅವ್ವ ಎಲ್ಲರಿಗೂ ಕೈ ಮಾಡುತ್ತಲೇ ಬೋಟಿನಲ್ಲಿ ಕುಳಿತಳು. ಹೊಳಿದಂಡೆಯಲ್ಲಿಯ ಹಸಿರು ಕರಿಕೆಯಲ್ಲಿ ಅಪ್ಪನನ್ನು ಸುಟ್ಟ ಜಾಗ ಕಣ್ರಗೆ ರಾವು ಹೊಡೆಯುತ್ತಿತ್ತು. ಆಕಡೆ ಮುಖ ಮಾಡಿ ಅವ್ವ ಕೈ ಮುಗಿದಳು. ಬೋಟು ನಿಧಾನ ಹೊಳಿಯಲ್ಲಿ ಮುಂದೆ ಮುಂದೆ ಸರಿಯಿತು. ಶಿರಹಟ್ಟಿ ದಂಡೆಯಲ್ಲಿ ಕೈ ಮಾಡುತ್ತ ನಿಂತ ಜನರು ಕೇವಲ ಬಣ್ಣ ಬಣ್ಣದ ಚುಕ್ಕೆಗಳಂತೆ ಕಾಣಲು ಹತ್ತಿದಾಗ ಅವ್ವ ಬಿಕ್ಕಿದಂತೆ ಅನಿಸಿತು.

ದಂಡೆಗೆ ಬಡಿದು ಬೋಟು ನಮ್ಮನ್ನು ಒಂದು ಸಲ ತೂಗಿಸಿತು. ಅವ್ವ ಊರ ಕಡೆ ಮುಖಮಾಡಿ ನಮಸ್ಕಾರ ಮಾಡಿ ಸೀರಿಗಂಟನ್ನು ಬಗಲಲ್ಲಿ ಇಟ್ಟುಕೊಂಡಳು.

ನಾನು ಆವಳ ಮುಖ ನೋಡಿದರೆ ಕಣ್ಣಂಚಿನಲ್ಲಿ ನೀರ ಹನಿ ಮಿಂಚುಗಟ್ಟಿತ್ತು.

- ೭ -

ಇಡೀ ದಿನವೆಲ್ಲಾ ಪ್ರಯಾಣ ಮಾಡಿ ರಾತ್ರಿ ಎಂಟರ ಸುಮಾರಿಗೆ ಗೋವಾಕ್ಕೆ ಬಂದು ಮುಟ್ಟಿದೆವು. ನಮ್ಮ ದಾರಿಯನ್ನೇ ಕಾಯುತ್ತ ಕುಳಿತಿದ್ದ 'ಮಾಲತಿ' ಅವ್ವನನ್ನು ಬರಮಾಡಿಕೊಂಡಳು. ಅವ್ವನ ಸುಕ್ಕುಗಟ್ಟಿದ ಎರಡೂ ಕೈಗಳನ್ನು ಮುಖಕ್ಕೆ ಒತ್ತಿಕೊಂಡು ಬಿಕ್ಕಿ ಅತ್ತಳು. ಅವ್ವನಿಗೆ ಸಮಾಧಾನ ಆತೋ ಇಲ್ಲವೋ, ನನಗಂತೂ ಮಾಲತಿಯ ಅಂತಃಕರಣದ ಮೂಲ ಅಪ್ಪನ ಸಾವಿನ ಮೂಲವನ್ನು ಚುಚ್ಚಿದಂತಾಗಿ ಬರ್ರನೆ ಒಳಗಿನಿಂದ ತುಂಬಿಕೊಂಡ ಅಳು ನುಗ್ಗಿಬಂತು.

ಆಮೇಲೆ ಅನಿಸಿತು. ಊರಲ್ಲಿ ನಾನು ಈ ರೀತಿ ಅಳಲೇ ಇಲ್ಲ. ಹೀಗೆ ಅಳುವಂತೆ ನನಗೆ ಅಲ್ಲಿ ಅನಿಸಲೇ ಇಲ್ಲವೆಂದು. ಹೊರಗಡೆ ತಿರುಗಾಡಲು ಹೋಗಿದ್ದ ಮಗ ಬಂದು, "ಆಯಿ ಅಲ ಖಾಯ್?" ಎಂದು ಕೇಳಿದ. ನಾವು ಮನೆಯಲ್ಲಿ ಎಷ್ಟೆಲ್ಲಾ ಕನ್ನಡ ಮಾತಾಡುತ್ತಿದ್ದರೂ ಕೂಡಾ ಹುಡುಗ ಕೊಂಕಣಿ, ಮರಾಠಿ ಮಿಶ್ರ ಮಾಡಿ ಮಾತಾಡಿ ನಮ್ಮನ್ನು ಗೊಂದಲಕ್ಕೆ ಕೆಡವುತ್ತಿದ್ದ.

ಅವ್ವ ಅವನನ್ನು ಸಾಗರ ಬಿದ್ದು ಅಪ್ಪಿಕೊಳ್ಳಲು ಹೋದಳು. ಅವನು ಕೊಸರಿಕೊಂಡು 'ಆಯಿ ಕುಟ ಹೈ' ಅಂದ. ಇವಳೇ ನಿನ್ನ 'ಆಯಿ' ಎಂದು ಹೇಳಿದೆವು. "ಸೊ... ನಾ... ಹಿ...." ಎನ್ನುತ್ತ ಓಡಿ ಹೋದ. ಎಂದೂ ತನ್ನ ಆಯಿಯನ್ನು ನೋಡಿರದ ಹುಡುಗ ಟಿ.ವಿ.ಯಲ್ಲಿಯ ಸುಂದರ ಆಯಿಗಳನ್ನು ನೋಡಿ ತನ್ನ ಆಯಿಯೂ ಹಾಗೇ ಇದ್ದಿರಬೇಕು ಎಂದು ಕಲ್ಪಿಸಿಕೊಂಡಿದ್ದನೋ ಏನೋ. ನನ್ನ ಅವ್ವ ಟಿ.ವಿ. ಆಯಿಗಳಂತೆ ಚಂದವಿರಲು ಸಾಧ್ಯವಿರಲಿಲ್ಲ. ಹೊರಗೆ ಹೋಗಿ ಮಾಲತಿ ಅವನನ್ನು ಹಿಡಿದು ತಂದಳು. ಅವನು ಅವ್ವನ ಹತ್ತಿರ ಹೋಗಲೇ ಇಲ್ಲ.

ಮುಂಜಾನೆ ನಮ್ಮ ವಠಾರದ ಜನ ಬಂದು ನನ್ನನ್ನು ಮಾತಾಡಿಸಿ ಅವ್ವನನ್ನು ನೋಡಿ ಹೋದರು. ತೀರ ಅಪರಿಚಿತ ವಾತಾವರಣದಲ್ಲಿ ಅವ್ವ ಹಿಡಿಗುಪ್ಪೆ ಆಗಿ ಆ ಒಂದು ದಿನ ಕಳೆದಳು.

ನಾವಿಬ್ಬರು ಫ್ಯಾಕ್ಟರಿಗೆ ಕೆಲಸಕ್ಕೆ ಹೋಗಲು ಪ್ರಾರಂಭಿಸಿದ ಮೇಲೆ ಹುಡುಗ ಸ್ಕೂಲಿನಿಂದ ಬಂದು ಮಂದಿ ಮನೆಯಲ್ಲಿ ಇರುವದು ತಪ್ಪಿ ಕ್ರಮೇಣ ಅಜ್ಜಿಯ ಜೊತೆ ಮಾತಾಡಲು ಸುರು ಮಾಡಿದ. ಐದಾರು ದಿನದಲ್ಲೇ ಅಮ್ಮನ ಜತೆ ಪೂರ್ಣ ಹೊಂದಿಕೊಂಡ. ನಮಗಿಬ್ಬರಿಗೂ ಬಹಳ ಆನಂದವಾಯಿತು. ಒಂದು ದಿನ ಅವ್ವ ಕೇಳಿದಳು.

"ತಮ್ಮಾ ಹುಡುಗ್ಗ 'ಣಮೋಕಾರ ಮಂತ್ರ' ಕಲಿಸಿಲ್ಲ ಯಾನ?"

ಈ ಪ್ರಶ್ನೆಯಿಂದ ನನ್ನ ಅಪರಾಧಿ ಪ್ರಜ್ಞೆ ಕಾಡಿತು. ಮಾಲತಿ ನನ್ನ ಮುಖವನ್ನು ಹುಳುಹುಳು ನೋಡಿದಳು.

"ಇಲ್ಲ... ಎವ್ವ.... ಕಲಸಾಕಃ ಆಗಿಲ್ಲ" ಅಂದೆ. ಆವಳಿಗೆ ದಿಗಿಲಾಯಿತು. ಆಶ್ಚರ್ಯವಾಯಿತು. ಬಹುಶಃ ಒಳಗೆಲ್ಲೊ ಆತಂಕ ಕಾಡಿರಬೇಕು. ಅಲ್ಲಿಂದ ಅವನಿಗೆ ದಿನಾ 'ಣಮೋಕಾರ ಮಂತ್ರ' 'ದರ್ಶನ ಪಾಠ' ಕಲಿಸುವುದೇ ಅವ್ವನ ಕೆಲಸವಾಯಿತು. ಒಂದೆರಡು ದಿನದಲ್ಲಿಯೇ ಅವನು ಚಂದವಾಗಿ ಮಂತ್ರ ಅನ್ನಲು ಸುರು ಮಾಡಿದ.

ಅವ್ವ ಅಕ್ಕರತಿಯಿಂದ ಹುಡುಗನನ್ನು ತೊಡೆಯ ಮೇಲೆ ಇಟ್ಟುಕೊಂಡು, "ನನ್ನ ಅವ್ವನ

ಗಂಡಾss ಇದಾss” ಅನ್ನುವಳು.

“ಅವ್ವನ ಗಂಡ ಅಂದ್ರ?” ಇವನ ಪ್ರಶ್ನೆ.

“ನಮ್ಮ ಅಪ್ಪ.”

“ನಾ ಹ್ಯಾಂಗ ನಿನ್ನ ಅಪ್ಪ ಆಕ್ಕೇನು?” ಇವನ ದಿಗಿಲಿನ ಪ್ರಶ್ನೆ.

“ಹ್ಯಾಂಗಂದ್ರ ನೀ ಸಕ್ಕರಿ ಕಣ್ಣೆ, ಬಂಗಾರದ ಗುಬ್ಬಿ, ಕಣ್ಣಾನ ಗೊಂಬಿ ಯಾಸೆಲ್ಲಾ ಆಕ್ಕಿ ಆದಕ್ಕss” ಅನ್ನಾಕಿ. ಇವಾ ಕಿಲ ಕಿಲ ನಗುತ್ತಿದ್ದ.

ಇದೆಲ್ಲಾ ನೋಡಿ ನಮಗನ್ನಿಸಿತು- ನಾವು ಇದುವರೆಗೂ ನಮ್ಮ ಮಗನನ್ನು ಸರಿಯಾಗಿ ಪ್ರೀತಿಸಿಯೇ ಇಲ್ಲ. ಬರೀ ಬೂಟು, ಟೈ, ಬಿಸ್ಕೀಟು ತಂದು ಕೊಡುವುದು ಪ್ರೀತಿ ಅಲ್ಲಾ ಎನ್ನುವುದನ್ನು ಅವ್ವ ನಮಗೆ ತಿಳಿಸಿಕೊಟ್ಟಳು.

ಹೊರಗಿನ ಖೋಲಿಯಲ್ಲಿ ಕೌದಿ ಹಾಸಿ, ಹುಡುಗನಿಗೆ ಅನೇಕ ಕಥೆಗಳನ್ನು ಹೇಳುವಳು. “ಇದss ನೋಡ ಕೂಸ, ನಿಮ್ಮ ಅಜ್ಜ ನನಗ ತಂದ ಪಹಲೇ ಸೀರಿಯ ದಡಿ. ಇದಾss ನಿಮ್ಮ ಅಪ್ಪ ಸಣ್ಣಾಂವ ಇದ್ದಾಗ ಸಂತ್ಯಾಗಿಂದ ನಾನ ತಂದ ಅಂಗಿ” ಎಂದು ಕೌದಿಯಲ್ಲಿ ಸೇರಿದ ಪ್ರತಿ ಅರಿವೆ ತುಂಡಿಗೊಂದು ನೆನಪಿನ ಕಥೆ, ಘಟನೆ ಹೇಳಿ ನನ್ನ ಬಾಲ್ಯವನ್ನು ನನ್ನ ಮಗನ ಕೌತುಕದ ಕಣ್ಣಲ್ಲಿ ತುಂಬಿ ಕಾಲವನ್ನು ಹಿಡಿದಿಟ್ಟಳು.

- ೮ -

ಈ ಸುಖಾ ಬಾಳದಿನ ಉಳಿಯಲಿಲ್ಲ. ಒಂದು ದಿನ ಮೊಮ್ಮಗನ ಜೊತೆ ಸಂಜೆ ಎಂಟರ ಸುಮಾರಿಗೆ ನಮ್ಮ ಮನೆ ಎದುರಿನ ರಸ್ತೆ ಆಚೆಯ



ಅಂಗಡಿಗೆ ಹೋದವಳು ರಸ್ತೆ ದಾಟುವಾಗ ಅತ್ತ ಕಡೆಯಿಂದ ಜೋರಾಗಿ ಬರುವ ಸ್ಕೂಟರು ಡಿಕ್ಕಿ ಹೊಡೆದು ಬಿದ್ದು ಬಿಟ್ಟಳು. ನರಳುತ್ತ ಬಿದ್ದ ಮುದುಕಿಯನ್ನು ನೋಡುವ ಸೌಜನ್ಯವೂ ಇರದ ಸ್ಕೂಟರು ಸವಾರ ಪರಾರಿ ಆದ. ಮಗ ಮನೆಗೆ ಬಂದು ಹೇಳಿದಾಗಲೇ ನಮಗೆ ತಿಳಿದಿದ್ದು. ಕೂಡಲೇ 'ಪೊಂಡಾ'ದ ಡಾ. ವರ್ಣೇಕರರ ದವಾಖಾನೆಗೆ ಕರೆದುಕೊಂಡು ಹೋದೆವು. ಆತ 'ಪಣಜಿ'ಯಲ್ಲಿರುವ 'ಕಪಾಡಿಯಾ ನರ್ಸಿಂಗ್ ಹೊಂ'ಗೆ ಸೇರಿಸಲು ಸಲಹೆ ಮಾಡಿದ. ಮತ್ತೆ ಟ್ಯಾಕ್ಸಿ ಮಾಡಿಕೊಂಡು ಪಣಜಿಗೆ ಹೋಗಿ ಆಡ್ಮಿಟ್ ಮಾಡಿಸಿದೆವು.

ಅಲ್ಲಿ ನೋಡಿದರೆ ಜನರಲ್ ಹಾಲ್ ಇಲ್ಲವೇ ಇಲ್ಲ. ಡಾಕ್ಟರೇನೋ ತುಂಬ ಶಾಂತವಾಗಿ ಅವ್ವನ ಪರೀಕ್ಷೆ ಮಾಡಿ ಎಕ್ಸರೇ ತೆಗೆಸಿ, "ಗಾಬರಿಗೆ ಕಾರಣವಿಲ್ಲ, ಎಂಟು ದಿನ ಇಲ್ಲಿಯೇ ಇರಲಿ" ಎಂದು ಹೇಳಿದರು. ಆದರೆ ಮೊದಲ ದಿನವೇ ನಾಲ್ಕು ಸಾವಿರ ಬಿಲ್ ಮಾಡಿ ನಮ್ಮನ್ನು ದಿಗಿಲಿಗೆ ಕೆಡವಿದರು. ಅವ್ವನಿಗೆ ಆರಾಮ ಆಗುವದಾದರೆ ಇರಲಿ ಎಂದು ಇಬ್ಬರೂ ನಮ್ಮ ನಮ್ಮ ನೌಕರರ ಸಹಕಾರಿ ಸಂಘದಿಂದ ಸಾಲ ಪಡೆದೆವು.

ಒಂದು ಇಡೀ ದಿನ ಅವ್ವ ಮಾತಾಡಲೇ ಇಲ್ಲ. [illegible] ಹಿಡಿಯಲಿಲ್ಲ. ಮೊಮ್ಮಗನನ್ನು ಒಯ್ದು ಮುಂದೆ ನಿಲ್ಲಿಸಿದೆವು. ಆದರಿಂದಲೂ ಏನೂ ಆಗಲಿಲ್ಲ. ಅವ್ವನದೆಲ್ಲಾ ಮುಗೀತು. ಅನ್ನಿಸಲು ಸುರು ಆಯಿತು. ಅಂತರಾಳದಿಂದ ಒತ್ತಿಕೊಂಡು ಬರುವ ಉಮ್ಮಳಿಕೆ. ದವಾಖಾನೆಯ ಕಾರಿಡಾರಿನ ಬೆಂಚಿನ ಮೇಲೆ ಕುಳಿತೆ. ಮಾಲತಿ ನನ್ನ ಜೊತೆ ಇದ್ದಳು.

ನನ್ನ ಸಾಮೀಪ್ಯವೂ ಸುಖಕೊಡುವ ಗಳಿಗೆ ಆಗಿರಲಿಲ್ಲ ಅದು. ನನ್ನೊಳಗೆ ಎಲ್ಲ ಅವ್ವನೇ ತುಂಬಿಕೊಂಡು ಬಿಟ್ಟಿದ್ದಳು.

ನಾಲ್ಕೈದು ದಿನಗಳಾದರೂ ಅವ್ವನಿಗೆ ಪ್ರಜ್ಞೆ ಬರಲಿಲ್ಲ. ಆಗಲೇ ಹತ್ತು ಸಾವಿರ ಖರ್ಚಾಗಿ ಹೋಗಿತ್ತು. ಡಾಕ್ಟರರನ್ನು ಕೇಳಿದರೆ "ಬ್ರೇನಿಗೆ ಪೆಟ್ಟು ಬಿದ್ದಿದೆ. ಇನ್ನು ಐದಾರು ದಿನ ಏನೂ ಹೇಳಲು ಬರುವದಿಲ್ಲ" ಎಂದರು. ಹಣದ ಹೊಂದಾಣಿಕೆ ತ್ರಾಸ ಎನ್ನುವ ಮಟ್ಟಕ್ಕೆ ಮುಟ್ಟಿದೆವು. ಮತ್ತೆ ಐದಾರು ದಿನ ಕಳೆದರೂ ಅವ್ವನಿಗೆ ಪ್ರಜ್ಞೆ ಬರಲಿಲ್ಲ. ಮಾಲತಿ ಮತ್ತು ನಾನು ಮಾತಾಡಿ ಅವ್ವನನ್ನು ಮನೆಗೆ ತರುವದು ಎಂದು ವಿಚಾರ ಮಾಡಿದೆವು. ನಮ್ಮ ಹಣೆ ಬರಹ ಇದ್ದಂತಾಗಲಿ, ಅವ್ವನಿಗೆ ಪ್ರಜ್ಞೆ ಬಂದರೆ ಸರಿ, ಇಲ್ಲವಾದರೆ ಇಷ್ಟೊಂದು ತುಟ್ಟಿ ದವಾಖಾನೆಯಲ್ಲಿ ಇಟ್ಟು ನೋಡಿಕೊಳ್ಳುವದು ನಮ್ಮಿಂದ ಸಾಧ್ಯವಿಲ್ಲ ಎನ್ನುವ ಕಾರಣದಿಂದ ಒಂದು ನಿರ್ಣಯವನ್ನು ನಾವು ತೆಗೆದುಕೊಳ್ಳಲೇ ಬೇಕಾಗಿತ್ತು.

ಟ್ಯಾಕ್ಸಿ ಮಾಡಿಕೊಂಡು ಅಂದೇ ರಾತ್ರಿ ಅವ್ವನನ್ನು ಮನೆಗೆ ಸಾಗಿಸಿದೆವು. ಇರುವ ಎರಡು ಕೋಣೆಯ ಮನೆಯಲ್ಲಿ ಹೊರಗಿನ ಕೋಲಿಯಲ್ಲಿ ಹಾಸಿಗೆ ಹಾಸಿ ಅವ್ವನನ್ನು ಮಲಗಿಸಿದೆವು. ಅವ್ವನನ್ನು ನೋಡಲು ವಠಾರದ ಜನ ಬಂದು ಹೋದರು. ನನ್ನ ಮಗನಂತೂ, "ಆಯಿ-ಆಯಿ" ಅಂತ ಅವಳ ತಲೆಯ ಹತ್ತಿರ ಕುಂತುಬಿಟ್ಟ. ಊರಿಗೆ ಹೇಳಿ ಕಳಿಸುವದೋ ಹ್ಯಾಂಗ ಅನ್ನೋ ವಿಚಾರ ಬಂತು. ಊರಲ್ಲಿ ಯಾರಿದ್ದಾರೆ? ನಮ್ಮನ್ನು ಬಹಳ ಹಚ್ಚಿಕೊಂಡಿದ್ದ ಅಂಗಡಿ ಶೆಟ್ಟರು ಮಾತ್ರ. ಮದುವೆಗೇ ಹೇಳಿಕಳಿಸದೆ ಇರುವಾಗ ಅವ್ವನಿಗೆ ಹೀಗಾಗಿದೆ ಎಂದು ಯಾವ ಮುಖ ಇಟ್ಟು ಸುದ್ದಿ ಕಳಿಸುವದು? ಮೇಲಾಗಿ ಅವ್ವನಿಗೆ ಈ ಪರಿಸ್ಥಿತಿ [illegible] ಏನಾದರು ಬಂದರೆ ಏನಾಗಬೇಕಾಗಿದೆ ಎನ್ನುವ ತರ್ಕದಿಂದ ಊರಿಗೆ [illegible].

ಬಿದ್ದಲ್ಲಿಯೇ ಬಿದ್ದ ಅವ್ವ ಸುಮ್ಮನೆ ನರಳುತ್ತಿದ್ದಳು. ಮನೆಗೆ ಬಂದು ಐದಾರು ದಿನಗಳಾಗಿದ್ದವು. ಪೊಂಡಾದಲ್ಲಿ ಇದ್ದ ವರ್ಣೇಕರ ಡಾಕ್ಟರ್ ದಿನವೂ ಒಬ್ಬ ನರ್ಸಳನ್ನು ಕಳಿಸುತ್ತಿದ್ದ. ಅವಳು ಡ್ರೆಸ್ಸಿಂಗ್ ಮಾಡಿ ಇಂಜೆಕ್ಷನ್ ಇದ್ದರೆ ಕೊಟ್ಟು ಹೋಗುತ್ತಿದ್ದಳು. ಹೀಗೆ ಹದಿನೈದು ದಿನಗಳಾದರೂ ಅವ್ವನಿಗೆ ಪ್ರಜ್ಞೆ ಬರಲಿಲ್ಲ. ನನ್ನ ಮಗ ಮೊದಮೊದಲು ಅವ್ವನ ಹಾಸಿಗೆಯಲ್ಲಿಯೇ ಕುಳಿತು ಊಟ ಮಾಡುತ್ತಿದ್ದ. ಅದರಿಂದ ಅವಳಿಗೂ ಆನಂದವಾಗುತ್ತಿತ್ತು ಎಂದು ಕಾಣುತ್ತದೆ. ಅವಳ ಹಾಸಿಗೆ ಮೇಲೆ ಕೂಡ್ರುವಾಗಲೆಲ್ಲಾ ಮಗ "ಆಯಿ ನಾರಾಕ ಹತ್ಯಾಳು" ಅನ್ನಲು ಸುರುಮಾಡಿದ. ನಮಗೆ

ಗೊತ್ತಾಗದಂತೆ ಇಡೀ ಮನೆಯೆಲ್ಲಾ ವಿಚಿತ್ರ ವಾಸನೆ ಆಡರಿಬಿಟ್ಟಿತು. ಮುಂದೆ ವಾಸನೆ ಎಷ್ಟೊಂದು ತೀವ್ರವಾಯಿತೆಂದರೆ ಅಡಿಗೆ ಮನೆಯಲ್ಲಿಯೂ ಕೂತು ನಮಗೆ ಊಟ ಮಾಡುವದು ಸಾಧ್ಯವಿಲ್ಲವಾಯಿತು.

- ೬ -

ನನಗೆ ಒಂದು ದಿನ ಅನಿಸಿತು- ಅವ್ವ ಸತ್ತರೆ ಬಹಳ ಚಲೋ ಎಂದು. ದಿನಾ ನನಗೆ ಅವಳ ಸಾವಿನ ಚಿಂತೆಯೇ ಹಿಡಿಯಿತು.

ಒಂದು ಮಧ್ಯಾಹ್ನ ಮಾಲತಿ ಫೋನು ಮಾಡಿ "ಅವ್ವಂದು ಮುಗೀತು" ಅಂದಳು. ಒಂದೇ ಏಟಿಗೆ ನನಗೆ ಆಘಾತ, ಜತೆಗೆ ಒಂದು ರೀತಿ ಅವಳು ಹೋದದ್ದೇ ಒಳ್ಳೇದಾಯಿತು ಎಂಬ ಅನಿಸಿಕೆ ಎರಡೂ ಉಂಟಾದವು.

ಫೋನ್ ಮಾಡಿ ಶವ ವಾಹನ ತರಿಸಿ, ಡಾಕ್ಟರರಿಂದ 'ಮರಣ ಪತ್ರ' ಬರೆಸಿಕೊಂಡು ಬಂದು ವಿದ್ಯುತ್ ಚಿತಾಗಾರಕ್ಕೆ ಫೋನ್ ಮಾಡಿ ತಿಳಿಸಿ ಬರುವದರಲ್ಲೇ ನನ್ನ ನಾಲ್ಕೈದು ಗೆಳೆಯರು ಮನೆಯ ಮುಂದೆ ಕಾಯುತ್ತ ಕುಳಿತಿದ್ದರು.

ನನ್ನ ಗೆಳೆಯರು ಶವವನ್ನು ಎತ್ತಿ ವಾಹನದಲ್ಲಿ ಹಾಕಿದ ಮೇಲೆ ನಾನು, ಮಾಲತಿ ಅದರಲ್ಲೇ ಹೋಗಿ ಕುಳಿತೆವು. ಹುಡುಗನನ್ನು ಪಕ್ಕದ ಮನೆಯಲ್ಲಿ ಬಿಟ್ಟು ಸ್ಮಶಾನಕ್ಕೆ ಹೊರಟೆವು.

ಅಪ್ಪನ ಸಾವಿಗೆ ಊರಿಗೆ ಊರೇ ಸ್ಪಂದಿಸಿದ್ದು, ಗೋವಾಕ್ಕೆ ಬರುವಾಗ ಅವ್ವ ನನ್ನ ಕಳಿಸಲು ಹೊಳೆಯ ತನಕ ಇಡೀ ಊರಿಗೆ ಊರೇ ಬಂದಿದ್ದು ನೆನಪಾಗಿ, ಇಲ್ಲಿ ಒಂದು ಕ್ಷುದ್ರ ಜೀವಿಯ ಹಾಗೆ ಅವ್ವನನ್ನು ಸುಟ್ಟು ಬರಲು ಹೊರಟಿದ್ದ ನನಗೆ ಬಹಳ ಕೆಡುಕೆನಿಸಿತು. ಅಥವಾ ಹೊಳೆಯ ತನಕ ಕಳಿಸಲು ಬಂದಿದ್ದ ಊರವರೆಲ್ಲಾ ಅವ್ವನ ಅಂತ್ಯ ಸಂಸ್ಕಾರಕ್ಕೆಂದೇ ಬಂದವರಂತೆ ಬಂದಿದ್ದರೆ? ಇನ್ನೆಂದೂ ತಿರುಗಿ ಬರಲಾರದವಳು ಎಂದೇ ತೀರ್ಮಾನಿಸಿ ಗೋವಾ ಎಂದರೂ ಅಷ್ಟೇ, ಸಾವು ಎಂದರೂ ಅಷ್ಟೇ ಎಂದು ತಿಳಿದಿದ್ದರೇ?

ವಿದ್ಯುತ್ ಚಿತಾಗಾರದಲ್ಲಿ ಅರ್ಧಗಂಟೆಯಲ್ಲಿ ಕೆಲಸ ಮುಗಿಯಿತು. ಗೆಳೆಯರೆಲ್ಲಾ ಬೇರೆ ಬೇರೆ ಬಸ್ ಹಿಡಿದು ತಮ್ಮ ಮನೆಗಳಿಗೆ ಹೋದರು. ನಾನೊಂದು ಆಟೋ ಹಿಡಿದು ಮಾಲತಿಯನ್ನು ಕರೆದುಕೊಂಡು ಕೂತೆ. ಆಟೋ ಚಲಿಸಿತು....

ಅವ್ವ ಗೋವಾಕ್ಕೆ ಬಂದ ಮೇಲೆ ಎಷ್ಟೊಂದು ಸಾಂಪ್ರದಾಯಕವಾಗಿ ಬಿಟ್ಟಳು, ಈ ಮಾಲತಿ! ಅವ್ವನಿಂದ ಹಪ್ಪಳ- ಸಂಡಿಗೆ ಮಾಡುವದು, ಕೈ ರೊಟ್ಟಿ ಮಾಡುವದು ಕಲಿತು ಇಡೀ ಅಡುಗೆ ಮನೆಯಲ್ಲಾ ಅವ್ವನ ಅಡಿಗೆ ವಾಸನೆಯನ್ನಾಗಿ ಬದಲಾಯಿಸಿ ಶಿರಹಟ್ಟಿಯ ಊಟದ ವಾಸನೆಯನ್ನು ಇಡೀ ಮನೆಯಲ್ಲಾ ಅಡರಿಸಿಬಿಟ್ಟಿದ್ದಳು ಈಕೆ!

ಆಟೋ ಚಲಿಸುತ್ತಿತ್ತು.... ಮಾಲತಿಯ ತೊಡೆಯ ಮೇಲೆ ಅಡ್ಡಾದೆ. ನಿಧಾನವಾಗಿ ಬೆನ್ನ ಮೇಲೆ ಕೈ ಆಡಿಸುತ್ತಾ, ತಲೆಯ ಕೂದಲನ್ನು ನೇವರಿಸುತ್ತಾ ನನ್ನನ್ನು ಸಮಾಧಾನಮಾಡಲು ಪ್ರಯತ್ನಿಸಿದಳು. ನನಗೆ ಥೇಟ್ ಅವ್ವನ ತೊಡೆಯ ಮೇಲೆ ಮಲಗಿದ್ದೇನೆ ಅನ್ನಿಸಲು ಸುರುವಾಗಿ ಅರೆ, ಎಂದು ದಿಗ್ಗನೆ ಎದ್ದೆ. ಆಟೋ ಮನೆಯ ಮುಂದೆ ನಿಂತಿತು. ಅವಳು ನನ್ನನ್ನು ಎಬ್ಬಿಸಿ, ಆಟೋದಿಂದ ನಿಧಾನ ಇಳಿದು ಮನೆಯ ಕೀಲಿ ತೆಗೆಯುತ್ತಿರುವ ಆಕೆ... ಹೌದು ಥೇಟ್ ನನ್ನ ಅವ್ವನೇ ಆಗಿದ್ದಳು. ಮತ್ತೊಮ್ಮೆ ಕಣ್ಣುಜ್ಜಿ ನೋಡಿದೆ. ಸಂಶಯವೇ ಇಲ್ಲ, ಅವಳೆ ನನ್ನವ್ವ.... ಹಾಗಾದರೆ ಎಲ್ಲಿ ಮಾಲತಿ? ನಾನು ಅವಳನ್ನೇ ಸುಟ್ಟು ಬಂದೆನೋ ಏನೋ?.... ●

---

**"ಏನು ರಾಯ್ರೆ, ಐದು ಸಾವಿರದ ಚೆಕ್ಕು ಯಾರಿಗೆ ಕಳಿಸ್ತಿದೀರಿ?"**
**"ನಮ್ಮ ಚಿಕ್ಕ ತಮ್ಮನಿಗೆ."**
**"ಆದ್ರೆ ಚೆಕ್‌ನಲ್ಲಿ ನೀವು ಸಹಿಯನ್ನೇ ಮಾಡಿಲ್ವಲ್ಲ?"**
**"ನನ್ನ ಹೆಸ್ರು ಗುಪ್ತವಾಗಿರೋದೇ ಒಳ್ಳೇದು, ಅದಕ್ಕೆ."**

ಅನುಭವ

# ಕಾಬಾಳೆ ಮತ್ತು ಪ್ರೀತಿ

• ನಿರಂಜನ ವಾನಳ್ಳಿ

ಪೀಚು ಹೂಗಳ ಕಾಬಾಳೆ ಗಿಡವನ್ನು ಕಂಡಾಗಲೆಲ್ಲ ಮನೆಯಲ್ಲಿಯ ಸೀಮೆ ಹಸುವಿನ ನೆನಪಾಗುತ್ತದೆ. ಇವೆರಡರ ಬಗೆಗೂ ಉಕ್ಕುವ ಪ್ರೀತಿಯ ಸೆಲೆ ಒಂದೇ ಇರಬಹುದೇ?

ಬೆಳ್ತಂಗಡಿಯ ಗೆಳೆಯ ಅಶೋಕ್ ಯಾರದೋ ಮನೆಯಲ್ಲಿ ನೋಡಿಕೊಂಡು, 'ಬಹಳ ಚಂದಾಗಿ ಹೂ ಬಿಡುತ್ತದೆ ನೋಡಿ' ಎಂದು ಮೂರು ಕಪ್ಪು ಮಣಿಗಳಂಥ ಬೀಜ ತಂದುಕೊಟ್ಟಿದ್ದು ಬಹಳ ಕಾಲ ನನ್ನ ಪೆನ್ ಸ್ಟ್ಯಾಂಡಿನಲ್ಲಿ ಭದ್ರವಾಗಿದ್ದವು. ಅಂಬೆಗಾಲಿಟ್ಟು ಮುಂದೆ ಬರತೊಡಗಿದ ಮಗಳು, 'ಅಲ್ಲಿ ತೂತನೀ' ಎನ್ನುತ್ತಾ ಹಟಮಾಡಿ ನನ್ನ ಟೇಬಲ್ ಏರಿದವಳೇ ಪೆನ್‌ಸ್ಟ್ಯಾಂಡಿಗೆ ಕೈ ಹಾಕಿದಳು.

ನಮಗೆ ಕನ್ನಡ ಶಾಲೆಯಲ್ಲಿ ಒಂದು ಪದ್ಯವಿತ್ತು. ಅದರಲ್ಲಿ 'ಕದಳಿಯೊಳು ಮದದಾನೆ ಹೊಕ್ಕಂದದಲಿ...' ಎನ್ನುತ್ತ ಆನೆ ಬಾಳೆಯ ತೋಟಕ್ಕೆ ನುಗ್ಗಿದರೆ ಆಗುವ ಅನಾಹುತಗಳ ವರ್ಣನೆಯಿತ್ತು. ಮಗಳು ತನ್ನ ಹಕ್ಕೆಂಬಂತೆ ಟೇಬಲ್ ಏರಿದವಳು ವೀರೋಚಿತವಾಗಿ ಪೆನ್‌ಸ್ಟ್ಯಾಂಡಿಗೆ ಕೈ ಹಾಕಿ ಅಲ್ಲಿದ್ದ-ಬೇಡವಾದರೂ ಬಿಸಾಡಲು ಮನಸ್ಸು ಬಾರದೇ ಉಳಿದ-ಹಲವಾರು ವಸ್ತುಗಳನ್ನು ವೀರಾವೇಶದಿಂದ ಕಿತ್ತೊಗೆಯತೊಡಗಿದಾಗ, ಕಳೆದ ೨೦



ವರ್ಷಗಳಲ್ಲಿ ಎಂದೂ ನೆನಪಿಗೆ ಬಾರದಿದ್ದ ಕನ್ನಡ ಶಾಲೆಯ ಆ ಪದ್ಯ ತಟಕ್ಕನೆ ನೆನಪಿಗೆ ಬಂತು.

ಮಗಳು ಒಂದೊಂದನ್ನು ಬಿಸಾಡುವಾಗಲೂ ಒಂಥರಾ ನೋವು, ಒಂಥರಾ ಖುಷಿ. ನನ್ನಿಂದಾಗದ್ದನ್ನು ಮಗಳು ಮಾಡಿದ್ದಕ್ಕೆ ವಿಚಿತ್ರ ಉದ್ವೇಗದ ಸ್ಥಿತಿ. ಹೀಗೆ ಕೈಗೆ ಸಿಕ್ಕಿದ್ದೆಲ್ಲವನ್ನೂ ಬಿಸುಟು ಮುಗಿದ ಮೇಲೆ ಉಳಿದಿದ್ದೇನು? ನನ್ನಂತೆ ಅವಳೂ ನೋಡುತ್ತಿದ್ದಾಳೆ. ಅವಳ ಪುಟಾಣಿ ಬೆರಳುಗಳಿಗೆ ಸಿಗದ ವಸ್ತುವೊಂದು ಅಡಿಯಲ್ಲಿದೆ. ಕೊನೆಗೂ ಸಾಹಸ ಮಾಡಿ ಮೂರು ಬೆರಳಲ್ಲಿ ಹಿಡಿದೇ ಬಿಟ್ಟಳು. ಅದನ್ನೂ ದೂರ ಎಸೆಯುವಳೋ ಎಂದರೆ- ನಿಧಾನಕ್ಕೆ ಬೆರಳುಗಳು ಬಾಯತ್ತ ಹೊರಟವು. ಇನ್ನೇನು ಬಾಯೊಳಗೆ ಬೀಳಬೇಕು, ಆಗ ನೋಡುತ್ತೇನೆ-ಕಪ್ಪು ಗುಂಡೊಂದನ್ನು ತಿನ್ನಲು ಹೊರಟಿದ್ದಾಳೆ. ಓಹೋ! ಅಶೋಕರು ಕೊಟ್ಟ ಬೀಜವದು, ಇನ್ನು ಇಲ್ಲೇ ಇದ್ದರೆ ಮಗಳ ಹೊಟ್ಟೆ ಸೇರುವುದು ಖಂಡಿತವೆಂದು ಗಾಬರಿಯಾಗಿ-ಉಪಾಯವಾಗಿ ಅವಳ ಕೈಯಿಂದ ತಪ್ಪಿಸಿ ಮನೆಯೆದುರಿನ ಕುಂಡವೊಂದಕ್ಕೆ ಒಗೆದೆ.

ಇದಾಗಿ ಆರು ತಿಂಗಳಾಗಿರಬೇಕು. ಬೀಜದ ವಿಷಯ ಮರೆತೇಹೋಗಿತ್ತು. ಎಂದಿನಂತೆ ಗಿಡಗಳಿಗೆ ನೀರು ಹಾಕಲು ಹೋದ ಮನೆಯಾಕೆ 'ಇಲ್ನೋಡ್ರಿ' ಎಂದು ಕೂಗಿದಳು. ಅವಳು ಹಲ್ಲಿ ಕಂಡರೆ ಹೆದರುತ್ತಾಳೆ. ಅದೇ ಇರಬೇಕು ಎಂದು ಸುಮ್ಮನಾದೆ. ಇನ್ನೊಮ್ಮೆ ಕರೆಬಂತು. ಅರರೆ! ಚಿನ್ನ-ಗಿನ್ನವೇನಾದರೂ ಕಂಡಿತೆ? ಎಂದುಕೊಳ್ಳುತ್ತ ಹೊರಬಂದೆ.

ಆಗಲೇ ಗಿಡವಿದ್ದ ಕುಂಡವೊಂದರಲ್ಲಿ ಹಸಿರು ಕಂದೊಂದು ಹೊರಬಂದಿತ್ತು. ಅಶೋಕ ಕೊಟ್ಟ ಬೀಜವನ್ನು ಸುಮ್ಮನೇ ಬಿಸಾಕಿದ್ದು ಮೊಳಕೆಯೊಡೆದಿರುವುದು ನೆನಪಾಗಿ ಸಂಭ್ರಮಿಸಿದೆ. ಆ ಕುಂಡದಲ್ಲಿದ್ದ ಗಿಡವನ್ನು ಬೇರೆಡೆ ವರ್ಗಾಯಿಸಿ ಹೊಸ ಜೀವಕ್ಕೆ ದಾರಿ ಮಾಡಿಕೊಟ್ಟೆ. ವಿಶೇಷವಾಗಿ ಮಣ್ಣು-ಗೊಬ್ಬರ ತಂದುಹಾಕಿ ನಮ್ಮ ಅಂಗಳದಲ್ಲಿ ಮೊದಲ ಬಾರಿಗೆ ಮೊಳಕೆಯೊಡೆದ ಹೊಸ ಸಸ್ಯವನ್ನು ಸ್ವಾಗತಿಸಿದೆ.

ನಮ್ಮ ನಿರೀಕ್ಷೆ ಮೀರಿ ಅದು ಬೆಳೆಯತೊಡಗಿತು. ನನಗೆ ಬೆಳಿಗ್ಗೆ-ಸಂಜೆ ನೋಡುವುದೇ ಕೆಲಸ. ದಪ್ಪ ಹಸಿರೆಲೆಯೊಂದು ಮೂಡಿ ಬಂತು. ಅಂಗಡಿಯಲ್ಲಿ ಶೇಂಗಾಬೀಜ ಕಟ್ಟಿಕೊಡುವ ಪೊಟ್ಟಣದ ಹಾಗೆ ಸುರುಳಿ ಸುತ್ತಿಕೊಂಡು ಚಿಗುರೆಲೆ ಹೊರಬಿತ್ತು. ಅದಿನ್ನೂ ಗಿಳಿ ಹಸಿರು. ಸ್ಪಂಜಿನಂತೆ ಮೃದು. ಮುಟ್ಟಿಮುಟ್ಟಿ ಸುಖಿಸಿದೆ.

ಎರಡೆಲೆ ಚಿಗುರಿದಾಗ ಸಂಶಯವಾಯ್ತು. ನಾಲ್ಕಾರು ಎಲೆಗಳು ಚಿಗುರಿದಾಗ ಸಂಶಯಕ್ಕೆಡೆಯಿಲ್ಲದಂತೆ ಸ್ಪಷ್ಟವಾದುದೆಂದರೆ ಅದು ಸಾಮಾನ್ಯ ಕಾಬಾಳೆ ಗಿಡ ಎಂಬುದು. ತೇವವಿರುವ ಕಡೆಗಳಲ್ಲಿ ಬೀಜ ಬಿದ್ದರೆ ಸಾಕು, ಹಿಂಡಾಗಿ ಬೆಳೆಯುವ ಕಾಬಾಳೆ ಸುಮಾರಿಗೆ ಸಾಯುವುದಿಲ್ಲ. ರ್‍ಯಾಂಕ್ ಬರುತ್ತಾನೆಂದು ಜಂಬ ಕೊಚ್ಚಿದ ಮಗ ಮೂರನೇ ದರ್ಜೆಯಲ್ಲಿ ಪಾಸಾದರೆ ತಂದೆಗೆ ಹೀಗೇ ಆಗಬಹುದೇನೋ!

ಕುಂಡದಲ್ಲಿನ ಹಿಡಿಮಣ್ಣಿನಲ್ಲಿ ಕಾಬಾಳೆ ಗಿಡ ದಿನದಿನಕ್ಕೂ ಬೆಳೆಯುತ್ತಿರುವ ರೀತಿ ಅಚ್ಚರಿ ಹುಟ್ಟಿಸುತ್ತಿತ್ತು. ಇದೇ ಕುಂಡಗಳಲ್ಲಿ ಎರಡು-ಮೂರು ವರ್ಷಗಳಿಂದ ಇರುವ ಗಿಡಗಳೂ ಬೆಳೆಯದಷ್ಟು ಎತ್ತರವಾಗಿ ಹಾಗೂ ಹಸಿರಾಗಿ ಕಾಬಾಳೆ ಎರಡೇ ತಿಂಗಳಲ್ಲಿ ಬೆಳೆಯಿತು. ಮತ್ತೆ ಕೆಲದಿನಗಳಲ್ಲಿ ಗಿಡದ ತುದಿಗೆ ಮೊಗ್ಗೊಂದು ಕಂಡುಬಂತು. ಹುಟ್ಟುವ ಮಗು ಗಂಡೋ ಹೆಣ್ಣೋ, ಬಣ್ಣ ಅಪ್ಪನದೋ ಅಮ್ಮನದೋ, ಮುಖ ಅಜ್ಜನದೋ ಅಜ್ಜಿಯದೋ ಮುಂತಾಗಿ ಆಗ ತಾನೇ ಹುಟ್ಟಿದ ಮಗುವಿನ ಬಗ್ಗೆ ಎಲ್ಲರ ತನಿಖೆ ನಡೆಯುವ ಹಾಗೆ ನಾಳೆ ಕಾಬಾಳೆ ಬಿಡುವ ಹೂವು ಹೇಗಿರುವುದೆಂಬ ಬಗ್ಗೆ ಮನೆಯಲ್ಲಿ ಚರ್ಚೆ ನಡೆಯಿತು. ಮರುದಿನ ಬೆಳಿಗ್ಗೆ ಮೊದಲಿಗನಾಗಿ ಎದ್ದು ಬಂದು ಕುಂಡದತ್ತ ಕಣ್ಣು ಹಾಯಿಸಿದೆ. ಉಬ್ಬಿದ ಬಲೂನಿಗೆ ತೂತು ಮಾಡಿದಂತಾಗಿತ್ತು ನನ್ನ ಪರಿಸ್ಥಿತಿ. ಗಿಡದ ತುದಿಗೆ ರಕ್ತವರ್ಣದ ಎರಡು ದಳಗಳ ಪೀಚು ಹೂವೊಂದು ಅರಳಿ ನಗುತ್ತಿತ್ತು.

ಈ ಎರಡು ವರ್ಷಗಳಲ್ಲಿ ತುಂಬಾ ಬದಲಾವಣೆಗಳಾಗಿವೆ. ಉಜಿರೆ ಬಿಟ್ಟು ಮೈಸೂರಿಗೆ ಬಂದಿ

ದ್ದೇನೆ. ಬರುವಾಗ ಲಾರಿಯಲ್ಲಿ ಬೇರೆಲ್ಲಾ ಸಾಮಾನುಗಳಿಗಿಂತ ಜೋಪಾನವಾಗಿ ಈ ಕುಂಡಗಳನ್ನು ತಂದೆ. ಇಲ್ಲಿಗೆ ಬಂದ ಮೇಲೆ ಹೊಸ ಮಣ್ಣು-ನೀರಿನಲ್ಲಿ ಕುಂಡದಲ್ಲಿನ ಸಸ್ಯಗಳು ಬೆಳೆದಿವೆ. ಹಳೆಗಿಡಗಳು ಸತ್ತು ಹೊಸತು ಚಿಗುರಿವೆ. ಕಾಬಾಳೆಯ ಗಿಡಮಾತ್ರ ಹಾಗೇ ಇದೆ. ಪುಟ್ಟ ಕುಂಡದಲ್ಲಿ ಹಿಂಡಾಗಿ ಬೆಳೆದಿದೆ. ನಾವು ಎರಡು-ಮೂರು ದಿನ ಊರಿಗೆ ಹೋದಾಗ ಯಾರೂ ನೀರು ಹಾಕದಿದ್ದರೆ ಉಳಿದ ಗಿಡಗಳೆಲ್ಲಾ ಬಾಡಿ ಸಾಯುವಂತಾಗಿರುತ್ತವೆ. ಕಾಬಾಳೆ ಮಾತ್ರ ಇದ್ದುದರಲ್ಲಿ ತೃಪ್ತಿಯಿಂದ ಜೀವ ಹಿಡಿದಿರುತ್ತದೆ. ಹಿಂಡಿನಲ್ಲಿ ಒಂದಲ್ಲ ಒಂದು ಕಡೆ ಪೀಚು ಹೂವಿದ್ದೇ ಇರುತ್ತದೆ.

ಮೊನ್ನೆ ಯಾರೋ ಕೇಳಿದರು: 'ಈ ಕಾಬಾಳೆ ಯಾಕಿಟ್ಟಿದ್ದೀರಿ? ಕಾಡು ಜಾತಿ-ಹಿಂಡು ಹಿಂಡಾಗಿ ಬೆಳೆಯುತ್ತದೆ. ನೋಡಲಿಕ್ಕೂ ಚೆನ್ನಾಗಿಲ್ಲ. ಪೀಚು ಹೂ ಬೇರೆ. ಯಾವುದಾದ್ರೂ ಚಂದದ ಎಲೆಗಳಿರುವ ಗಿಡತಂದು ಹಾಕ್ರೀ' ಎಂಬ ಸಲಹೆ ನೀಡಿದರು. ಮನೆಯಾಕೆಯೂ ಕಾಬಾಳೆಯನ್ನು ಕಿತ್ತು ಹಾಕಲು ಸಿದ್ಧವಿದ್ದಳು. 'ಆ ಕೆಲಸವೊಂದನ್ನು ಮಾಡಬೇಡ' ಎಂದು ಮಡದಿಯನ್ನು ತಡೆದೆ. 'ಏನು ಮಾಡೋದು; ಕೆಲವರ ತಳಿಯೇ ಹಾಗೆ. ಪೀಚು ತಳಿಯ ಬೀಜಕ್ಕೆ ಎಷ್ಟು ಆರೈಕೆ ಮಾಡಿದರೂ ಗೊಂಡೆ ಹೂ ಬಿಡಲು ಸಾಧ್ಯವೇ? ಆದರೂ ಚಿಂತೆಯಿಲ್ಲ, ನಾಕುದಿನ ನೀರು ಹಾಕದಿದ್ದರೂ ಬದುಕುಳಿಯುವ, ನಮ್ಮನೆಯ ಕುಂಡಗಳಲ್ಲೆಲ್ಲ ಮೊದಲ ಜಾತಿ ಇದೇ ಅಲ್ಲವೆ? ಪೀಚಾದರೇನು ಹೂಬಿಟ್ಟದ್ದು ಸುಳ್ಳೆ? ಎಂದು ಸಮಾಧಾನ ಮಾಡಿದೆ. ಆದಕ್ಕಿಂತ ಮುಖ್ಯವಾಗಿ ಗೆಳೆಯರೊಬ್ಬರ ಪ್ರೀತಿಯ ನೆನಪಿನ ಕೊಂಡಿಯಾಗಿ ಉಳಿದಿರುವುದು- ಇರಲಿಬಿಡು ಎಂದು ಉಳಿಸಿಕೊಂಡಿದ್ದೇನೆ.

ಊರಲ್ಲಿ ಜರ್ಸಿ ಆಕಳುಗಳ ಮಧ್ಯೆಯೂ ಒಂದು ಸೀಮೆ ಆಕಳು ಉಳಿದುಕೊಂಡಿದೆ. ನಮ್ಮಲ್ಲೇ ಹುಟ್ಟಿ ಬೆಳೆದು ಸಂಸಾರ ಬೆಳೆಸಿದೆ. ನಾವು ಹುಲ್ಲು-ನೀರು ಹಾಕಿ ಆರೈಕೆ ಮಾಡಲಿ-ಬಿಡಲಿ, ಹಾಲು ಕರೆಯಲು ಹೋದಾಗಲೆಲ್ಲ ಅಚ್ಚೇರು ಹಾಲು ಕೊಡುತ್ತದೆ. ಪ್ರತಿವರ್ಷ ಒಂದು ಕರು ಹಾಕುತ್ತದೆ. ಆಯಿಗೆ ಬಕೇಟುಗಟ್ಟಲೆ ಹಾಲು ಕೊಡುವ ಆಧುನಿಕ ಹಸುಗಳಿಗಿಂತ ಅಚ್ಚೇರು ಹಾಲುಕೊಡುವ ಸೀಮೆ ಹಸುವಿನ ಬಗ್ಗೆ ಅಚ್ಚರಿ ಮೂಡುವಷ್ಟು ಪ್ರೀತಿ.

ಪೀಚುಹೂಗಳ ಕಾಬಾಳೆ ಗಿಡವನ್ನು ಕಂಡಾಗಲೆಲ್ಲ ಈ ಸೀಮೆ ಹುಸುವಿನ ನೆನಪಾಗುತ್ತದೆ. ಇವೆರಡರ ಬಗ್ಗೆಯೂ ಉಕ್ಕುವ ಪ್ರೀತಿಯ ಸೆಲೆ ಒಂದೇ ಇರಬಹುದೆ? ●

## ಸುಳ್ಳಾಡುವವರು

**ಒಬ್ಬ ಪ್ರವಚನ ಮಾಡಲು ತೊಡಗಿದ್ದ. ಆತ ತನ್ನ ಕೇಳಲು ಬಂದು ಕುಳಿತವರೊಡನೆ ಹೇಳಲು ಪ್ರಾರಂಭಿಸಿದ- "ಇಂದು ನಾನು ತೆಗೆದುಕೊಂಡಿರುವ ವಿಷಯ 'ಸುಳ್ಳಾಡುವವರು'. ಮೊದಲಿಗೆ ನೀವು ಹೇಳಿ, ಭಗವದ್ಗೀತೆಯ ೧೭ನೆಯ ಅಧ್ಯಾಯವನ್ನು ನಿಮ್ಮಲ್ಲಿ ಎಷ್ಟು ಮಂದಿ ಓದಿರುವಿರಿ?"**

**ನೆರೆದ ಎಲ್ಲರೂ ತಮ್ಮ ಕೈ ಮೇಲೆತ್ತಿದರು.**

**"ಬಹಳ ಸಂತೋಷ," ಪ್ರವಚನಕಾರ ಮುಂದುವರೆಸಿದ,**

**"ನೀವೇ ಸುಳ್ಳಾಡುವ ಆ ವ್ಯಕ್ತಿಗಳಾಗಿದ್ದೀರಿ. ಎಂದಮೇಲೆ ನಿಮಗೆ ನನ್ನ ಉಪದೇಶದ ಅವಶ್ಯಕತೆ ಇಲ್ಲ. ಭಗವದ್ಗೀತೆಯಲ್ಲಿ ೧೭ನೆಯ ಅಧ್ಯಾಯವೇ ಇಲ್ಲ!"**

● "ಪ್ರಿಯತಮ"

ದೈವಗತಿ
ವಿಚಿತ್ರವಾಗಿರುತ್ತದೆನ್ನುವುದು
ಇದಕ್ಕೇ

• ಶ್ರೀಕಾಂತ



# ಈತ ಭಾರತೀಯನೋ ಪಾಕಿಸ್ತಾನಿಯೋ?

ಆತ ಭಾರತೀಯನೋ ಅಥವಾ ಪಾಕಿಸ್ತಾನೀಯನೋ? ಹಿಂದುವೋ? ಅಥವಾ ಮುಸಲ್ಮಾನನೋ? ಪ್ರಶ್ನೆ ಸುಲಭವಾಗಿರಬಹುದು. ಆದರೆ ನಾನಕಚಂದ ಆಲಗನ ಪಾಲಿಗೆ ಉತ್ತರ ಅಷ್ಟು ಸರಳವಲ್ಲ. ಹೀಗಂದರೂ ಕಷ್ಟ; ಹಾಗಂದರೂ ಕಷ್ಟ ಎನ್ನುವ ಸ್ಥಿತಿ ಆತನದು. ಬದಲು, ಆತ ಮಾಡುತ್ತಿರುವ ವೃತ್ತಿಯ ಬಗೆಗೆ ಕೇಳಿ; ಉತ್ತರ ತಟಕ್ಕನೆ ಬರುತ್ತದೆ: "ಮೊದಲು ಡಾಕ್ಟರನಾಗಿದ್ದೆ; ಆದರೆ ಈಗ ಮಾಡುತ್ತಿರುವುದು ಡಾಕ್ಟರಿಕೆಯೊಂದಿಗೆ ಚೌಕೀದಾರನ ಕೆಲಸವನ್ನೂ" ಎಂದು

ನಾನಕಚಂದನೀಗೀಗ ಎಪ್ಪತ್ತೆಂಟು ವರ್ಷ. ವಿಭಜನೆಯ ಕಾಲದಲ್ಲಿ ಉಳಿದವರ ಹಾಗೆ ಈತ ಕೂಡ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಭಾರತಕ್ಕೆ ಬಂದು ದೈವವನ್ನು ಕಂಡುಕೊಳ್ಳಬಹುದಾಗಿತ್ತು; ಹೊಸ ಜೀವನವನ್ನು ಪ್ರಾರಂಭಿಸಬಹುದಾಗಿತ್ತು. ಆದರೆ ಆದದ್ದು ಬೇರೆಯೆ.

ಲಾಹೋರಿನ ಕಿಂಗ್ ಎಡ್ವರ್ಡ್ ಮೆಡಿಕಲ್ ಕಾಲೇಜಿನಿಂದ ಎಂ.ಬಿ.ಬಿ.ಎಸ್. ಮುಗಿಸಿ ಕ್ಯಾಪ್ಟನ್ ಎಂದು ಸೈನ್ಯದಲ್ಲಿ ಸೇರ್ಪಡೆಗೊಂಡ. ವಿಭಜನೆಯ ಕಾಲದಲ್ಲಿಎಲ್ಲೆಲ್ಲೂ ದೊಂಬಿ, ಲೂಟಿಗಳು ನಡೆಯತೊಡಗಿದಾಗ ರಜೆಹಾಕಿ ತನ್ನೂರಾದ ಹಸನಾಬಾದಿಗೆ ಬಂದ. ನೋಡಿದರೆ ಮನೆಗೆ ಬೀಗಹಾಕಿತ್ತು. ತಂದೆ, ತಾಯಿ, ಇಬ್ಬರು ತಂಗಿಯರು, ಹೆಂಡತಿ ಪುಷ್ಪಾ ಎಲ್ಲರೂ ರಾತೋರಾತ್ರಿ ಕಾಣೆಯಾಗಿದ್ದರು. ಅವರ ಬಗೆಗೆ ಎಲ್ಲಿ ವಿಚಾರಿಸಿದರೂ ಸುಳಿವೇ ಇಲ್ಲ. ಎಲ್ಲೆಲ್ಲೂ ದೊಂಬಿ ನಡೆಯುತ್ತಿತ್ತು. ಮುಸಲ್ಮಾನರನ್ನು ಹಿಂದುಗಳು ಸದೆಬಡಿದರೆ ಮುಸಲ್ಮಾನರೇ ಹೆಚ್ಚಾಗಿರುವ ಪ್ರದೇಶದಲ್ಲಿ ಹಿಂದುಗಳು ಹಿಂಸೆಗೊಳಗಾಗುತ್ತಿದ್ದರು. ಆಸ್ತಿಯ ಮಾತಂತೂ ದೂರ ಉಳಿಯಿತು ಪ್ರಾಣ

(ಆಧಾರ: 'ದಿ. ವೀಕ್'ನಲ್ಲಿ ವಿಜಯಾ ಪುಷ್ಕರಣ ಅವರ ಲೇಖನ.)

ಉಳಿಸಿಕೊಳ್ಳುವುದೇ ಕಠಿಣವಾಗಿತ್ತು. ನಾನಕಚಂದ್ ಇರುವ ಪ್ರದೇಶದಲ್ಲಿ ಮುಸಲ್ಮಾನರದೇ ಆಧಿಪತ್ಯ. ಹಿಂದುವೆಂದರೆ ಸಾಕು, ಎರಿ ಬಂದು ಪ್ರಾಣಕಳಿಯುವಂತಹ ವಾತಾವರಣ. ಇಂತಹ ಸಮಯದಲ್ಲೇ ಸ್ನೇಹಿತ ಅಬ್ದುಲ್ ಕರೀಮ್ ಸಹಾಯಕ್ಕೆ ಬಂದು ನಾನಕಚಂದನಿಗೆ ತನ್ನ ಮನೆಯಲ್ಲಿ ಆಶ್ರಯ ನೀಡಿದ.

ಮನೆಯ ಜನ ಸಿಗುವ ಆಶೆಯಂತೂ ಇರಲೇ ಇಲ್ಲ. ಹೊರಗೆ ಬಲವಾದ ಹಿಂದೂ ವಿರೋಧಿ ವಾತಾವರಣ ಬೇರೆ. ಮುಸಲ್ಮಾನನಾಗಿಬಿಟ್ಟರೆ ಯಾವ ತೊಂದರೆಯೂ ಇರುವುದಿಲ್ಲವೆಂದು ನಾನಕ್‌ಚಂದ್ ಇಸ್ಲಾಂ ಧರ್ಮವನ್ನು ಸ್ವೀಕರಿಸಿ ಶೇಖ್ ಅಬ್ದುಲ್ಲಾ ಆದ. ಪ್ರಾಣ ಸ್ನೇಹಿತ ಅಬ್ದುಲ್ ಕರೀಮ್ ತನ್ನ ಮಗಳನ್ನು ಅವನಿಗೆ ಧಾರೆಯೆರದೂ ಕೊಟ್ಟ.

ದೇಶವಿಭಜನೆ ಪೂರ್ಣಗೊಂಡಿತ್ತು. ಈಗಾತ ಪಾಕಿಸ್ತಾನಿ ಪ್ರಜೆ. ಪ್ರಾಕ್ಟೀಸ್ ಮಾಡಲು ಸರಕಾರವೂ ಅನುಮತಿ ಕೊಟ್ಟಿದ್ದರಿಂದ ನಾನಕಚಂದ್- ಈಗ ಶೇಖ್ ಅಬ್ದುಲ್ ಅಲ್‌ಕಾದ್ರಿ- ದವಾಖಾನೆ ತೆರೆದ. ಪ್ರಾಕ್ಟೀಸ್ ಚೆನ್ನಾಗಿ ನಡೆಯತೊಡಗಿತು. ಹೆಂಡತಿ ಫಾತಿಮಾಳಿಂದ ಇಬ್ಬರು ಮಕ್ಕಳೂ ಹುಟ್ಟಿದವು.

ಆದರೂ ತನ್ನವರ ಚಿಂತೆ ಅವನನ್ನು ಕಾಡುತ್ತಲೇ ಇತ್ತು. ವಿಭಜನೆಯ ಸಮಯದಲ್ಲಿ ಉಳಿದ ಜನರೊಡನೆ ಅವರೂ ಭಾರತಕ್ಕೆ ಗುಳೆ ಹೋಗಿರಬಹುದೆಂದು ಭಾವಿಸಿ ಪಾಕಿಸ್ತಾನದಲ್ಲಿನ ಭಾರತದ ಹೈಕಮೀಶನ್ನಿನ ಮೂಲಕ ಇಲ್ಲಿನ ಪತ್ರಿಕೆಗಳಲ್ಲಿ ಜಾಹೀರಾತುಕೊಟ್ಟ. ಉತ್ತರ ಬರಲಿಲ್ಲ. ಮತ್ತೆ ಜಾಹೀರಾತುಕೊಟ್ಟ. ಅದಕ್ಕೂ ಪ್ರತಿಕ್ರಿಯೆ ಬರಲಿಲ್ಲ. ಆದರೂ ಆತ ನಿರಾಶನಾಗದೆ ಜಾಹೀರಾತು ಕೊಡುತ್ತಲೇ ಹೋದ. ೧೯೬೦ರಲ್ಲಿ ಪ್ರಕಟವಾದ ಒಂದು ಜಾಹೀರಾತು ಅವನ ತಂಗಿಯ ಗಂಡ ರಾಮಲಾಲ್ ಲಾಂಬಾನ ಕಣ್ಣಿಗೆ ಬಿದ್ದು, ಆತ ಕೂಡಲೇ ಹೊರಟುಬರಬೇಕೆಂದೂ ಭಾರತದಲ್ಲಿ ನೆಲೆಗೊಳ್ಳಲು ಎಲ್ಲ ರೀತಿಯಿಂದ ಸಹಾಯಮಾಡುವುದಾಗಿಯೂ ನಾನಕಚಂದನಿಗೆ ಪತ್ರ ಬರೆದ.

ಪತ್ರವನ್ನೋದಿ ಅವನಿಗೆ ಹಿಗ್ಗೋ ಹಿಗ್ಗು. ಭಾರತಕ್ಕೆ ಹೋಗುವ ಇರಾದೆಯಿಂದ ಪಾಸ್‌ಪೋರ್ಟನ್ನೂ ಪಡೆದ. ಹೆಂಡತಿ ಮಕ್ಕಳ ವಿರೋಧವನ್ನೂ ಲೆಕ್ಕಿಸದೇ ತನ್ನ ಆಸ್ತಿಪಾಸ್ತಿ ಎಲ್ಲವನ್ನೂ ಪಾಕಿಸ್ತಾನದಲ್ಲೇ ಬಿಟ್ಟುಕೊಟ್ಟು ಭಾರತಕ್ಕೆ ಬಂದಿಳಿದ. ರಾಮಲಾಲನೇನೋ ಉದಾರ ಸ್ವಭಾವದವನಾಗಿರಬಹುದು. ಆದರೆ ಮುಸಲ್ಮಾನನಾದ ತಾನು ಅವನ ಮನೆಯಲ್ಲಿ ಇರುವುದಾದರೂ ಹೇಗೆ? ಎಂಬ ವಿಚಾರ ಅವನ ಮನಸ್ಸನ್ನು ಕೊರೆಯತೊಡಗಿದಾಗ ದಿಲ್ಲಿಯ ದಿವಾನಹಾಲ್‌ನಲ್ಲಿರುವ ಆರ್ಯಸಮಾಜಕ್ಕೆ ಹೋಗಿ ಮತ್ತೆ ಹಿಂದುವಾಗಿ ಧರ್ಮಾಂತರಗೊಂಡ.

ಭಾರತದ ನಾಗರಿಕನಾಗಿ ಇಲ್ಲಿಯೆ ಉಳಿಯುವ ಇಚ್ಛೆಯಿಂದ ಎಲ್ಲ ದಾಖಲೆಗಳ ಸಮೇತ ಇಲ್ಲಿನ ಗೃಹಶಾಖೆಗೆ ಅರ್ಜಿಸಲ್ಲಿಸಿದ. ಆದರೆ ಪಾಕಿಸ್ತಾನದಿಂದ ಬರುವವರನ್ನು ತೆರೆದ ಕೈಗಳಿಂದ ಸ್ವಾಗತಿಸುವ ಸ್ಥಿತಿಯಲ್ಲಿ ಭಾರತ ಸರಕಾರ ಇರಲಿಲ್ಲ. ಅವನ ಅರ್ಜಿಯನ್ನು ಪರಿಶೀಲಿಸಲಾಗುತ್ತಿದೆಯೆಂದೂ ಸದ್ಯಕ್ಕೆ ವಾಸ್ತವ್ಯವನ್ನು ಮುಂದುವರೆಸಲು ಅನುಮತಿ ನೀಡಿರುವುದಾಗಿಯೂ ಬಹಳ ಕಾಲದ ನಂತರ ಗೃಹಶಾಖೆಯಿಂದ ಪತ್ರ ಬಂತು.

ಆ ವೇಳೆಗಾಗಲೇ ನಾನಕಚಂದ್ ಆಸ್ಪತ್ರೆಯೊಂದನ್ನು ತೆರೆದಿದ್ದ. ವರಮಾನವೂ ಚೆನ್ನಾಗಿ ಬರುತ್ತಿತ್ತು. ಆ ಆದಾಯದಿಂದಲೇ ತಂಗಿಯ ಮಗಳ ಮದುವೆ ಮಾಡಿ ಕನ್ಯಾದಾನ ಮಾಡಬೇಕೆಂಬ ಬಹು ಕಾಲದ ತನ್ನ ಮನೋರಥವನ್ನು ಪೂರೈಸಿಕೊಂಡ.

ಭಾರತ ಸರಕಾರದಿಂದ ಇಂದಲ್ಲ ನಾಳೆ ನಾಗರಿಕತ್ವ ಕೊಟ್ಟ ಬಗ್ಗೆ ಪತ್ರ ಬರುತ್ತದೆಂದು ಆತ ಕಾಯ್ದೇಕಾಯ್ದ. ಆದರೆ ಆ ಪತ್ರ ಬರಲೇಇಲ್ಲ. ೧೯೬೫ರಲ್ಲೊಂದು ರಾತ್ರಿ ಪೊಲೀಸರು ಬಂದು, ಅನಾಮತ್ತಾಗಿ ಅವನನ್ನು ವ್ಯಾನಿನಲ್ಲಿ ಎತ್ತಿಕೊಂಡು ರಾಜಸ್ಥಾನದ ಗಂಗಾನಗರದ ಬಳಿಯಿರುವ ಗದ್ರಾ ಬಾರ್ಡರ್‌ಗೆ ಕರೆದುಕೊಂಡು ಹೋಗಿ ಅವನನ್ನು ಪಾಕಿಸ್ತಾನದ ಗಡಿಯೊಳಗೆ ನೂಕಿಯೇಬಿಟ್ಟರು.

ಇದಾದ ನಾಲ್ಕೇ ದಿನಗಳಲ್ಲಿ ಭಾರತ-ಪಾಕಿಸ್ತಾನ ಯುದ್ಧ ಪ್ರಾರಂಭವಾಯಿತು. ಭಾರತದ ಗೂಢಚಾರನೆಂಬ ಗುಮಾನಿಯಿಂದ ಪಾಕಿಸ್ತಾನಿ ಪೊಲೀಸರು ನಾನಕಚಂದನನ್ನು ಬಂಧಿಸಿದರು. "ಹತ್ತು ವರ್ಷ

ಭಾರತದಲ್ಲಿದ್ದು ಏನು ಮಾಡುತ್ತಿದ್ದೆ? ಗೂಢ ಚರ್ಯೆ ನಡೆಸಲು ಟ್ರೇನಿಂಗ್ ತೆಗೆದುಕೊಂಡೆ ಅಲ್ಲವೆ? ಅದೆಲ್ಲ ಇಲ್ಲಿ ನಡೆಯೋದಿಲ್ಲ. ಭಾರತ ದಲ್ಲಿ ವಾಯುಪಡೆಯ ಠಾಣೆಗಳು ಎಲ್ಲೆಲ್ಲಿ ಇವೆ? ಅಲ್ಲಿ ಯಾವ ಯಾವ ಬಗೆಯ ವಿಮಾನಗಳಿವೆ? ವೈಮಾನಿಕರಿಗೆ ಯಾವ ಯಾವ ಟ್ರೇನಿಂಗ್ ಕೊಡು ತ್ತಾರೆ? ಎಲ್ಲವನ್ನೂ ಹೇಳು. ಇಲ್ಲದಿದ್ದರೆ ಪರಿ ಣಾಮ ನೆಟ್ಟಗಾಗುವುದಿಲ್ಲ," ಎಂದವರು ಬೆದರಿ ಸಿದರು. "ನಾನು ದಿಲ್ಲಿಯಲ್ಲಿ ಪ್ರಾಕ್ಟೀಸು ಮಾಡು ತ್ತಿದ್ದೆ. ಹೀಗಾಗಿ ಇದಾವುದೂ ಗೊತ್ತಿಲ್ಲ," ಎನ್ನು ವುದನ್ನು ಆತ ಪ್ರಾಂಜಲವಾಗಿ ಹೇಳಿದರೂ ಪಾಕಿ ಸ್ತಾನಿ ಪೊಲೀಸು ಇಲಾಖೆ ನಂಬಲಿಲ್ಲ. ಕೊನೆಗೆ ಅವನ ಬಾಯಿಬಿಡಿಸಲು ಲಾಹೋರ್, ಕರಾಚಿಗಳ ಮಧ್ಯೆ ಹಾರಾಡುವ ವಿಮಾನದ ಕೆಳಗೆ ಅವನನ್ನು ನೇತುಹಾಕಿ ಲಾಹೋರ್-ಕರಾಚಿ, ಕರಾಚಿ-ಲಾಹೋರ್ ಹೀಗೆ ಸುತ್ತಾಡಿಸಿದರು.

ಏನಾದರೂ ಗೊತ್ತಿದ್ದರೆ ತಾನೆ ಆತ ಉತ್ತರಿ ಸುವುದು? ಪಾಕಿಸ್ತಾನಿ ಪಾಸ್‌ಪೋರ್ಟನ್ನು ತೋರಿಸಿ ಇದೆಲ್ಲದರಿಂದ ಪಾರಾಗಬೇಕೆಂದರೆ ಭಾರತದ ನಾಗರಿಕತ್ವ ಕೋರಿ ಸಲ್ಲಿಸಿದ ಅರ್ಜಿ ಯೊಂದಿಗೆ ಭಾರತ ಸರಕಾರಕ್ಕೆ ಅದನ್ನೂ ಕೊಟ್ಟಾ ಗಿತ್ತು. ಆತ ಬಂಧಿಸಲ್ಪಟ್ಟ ಸುದ್ದಿಯನ್ನು ತಿಳಿದು ಪಾ[illegible]ನದಲ್ಲಿನ ಅವನ ಕುಟುಂಬದವರು ೧೯[illegible]ರಲ್ಲಿ ಆತನಿರುತ್ತಿದ್ದ ಲಾಹೋರ್ ಸೆಂಟ್ರಲ್ ಜೇ[illegible]ಗೆ ಭೇಟಿಕೊಟ್ಟು ಹೇಗಾದರೂ ಮಾಡಿ ಅವನನ್ನು ಪಾರುಮಾಡುವುದಾಗಿ ಹೇಳಿದರು. ಆದರೆ ಅವರ ಪ್ರಯತ್ನ ಫಲಿಸಲಿಲ್ಲ.

ಎಂಟು ವರ್ಷ ಪಾಕಿಸ್ತಾನದ ಜೈಲುಗಳಲ್ಲಿ



ಕಳೆದನಂತರ ಒಂದು ದಿನ ಪಾಕಿಸ್ತಾನಿ ಪೊಲೀಸರು ನಾನಕಚಂದನನ್ನು ಪಾಕಿಸ್ತಾನದ ವಾಗಾಕ್ಕೆ ಕರೆದುಕೊಂಡು ಹೋಗಿ ಭಾರತದ ಅಮೃತಸರ ಜಿಲ್ಲೆಯೊಳಗೆ ನೂಕಿದರು. ಮತ್ತೆ ಘಟನೆಗಳ ಪುನರಾವರ್ತನೆ. ಭಾರತದ ಗಡಿರಕ್ಷಕಪಡೆಯವರು ಈತ ಪಾಕಿಸ್ತಾನಿ ಗೂಢಚಾರನೆಂದು ಭಾವಿಸಿ ಅಮೃತಸರದ ಸೆಂಟ್ರಲ್ ಜೈಲಿಗೆ ನೂಕಿದರು. ಬಾಯಿಬಿಡಿಸಲು ನಾನಾ ರೀತಿಯಿಂದ ಹಿಂಸಿಸಿದರು. ಅಷ್ಟರಲ್ಲಿ ಲಾಂಬಾ ಬಂದು, ಈತ ಹಿಂದು, ಪಾಕಿಸ್ತಾನದ ಗೂಢಚಾರನಲ್ಲ ಎನ್ನುವುದಕ್ಕೆ ಪ್ರಮಾಣಪತ್ರವನ್ನು ಸಲ್ಲಿಸಿದಾಗ ಹಿಂಸೆಕೊಡುವುದು ನಿಂತಿತು.

ನಾನಕಚಂದನ ಪ್ರಕರಣ ನ್ಯಾಯಾಲಯದ ಮುಂದೆ ಬಂದಾಗ ಪಾಸ್‌ಪೋರ್ಟ್ ಆಗಲಿ ಇತರ ಅಧಿಕೃತ ದಾಖಲೆಗಳಾಗಲಿ ಇಲ್ಲದೆ ಪ್ರಯಾಣಿಸಿದ್ದಕ್ಕೆ ೫೦೦ ರೂಪಾಯಿಗಳ ದಂಡವನ್ನೂ ಅದನ್ನು ಕೊಡಲು ತಪ್ಪಿದರೆ ಮೂರು ತಿಂಗಳ ಸೆರೆಮನೆವಾಸವನ್ನೂ ವಿಧಿಸಲಾಯಿತು. ಅಷ್ಟು ಹಣವಂತೂ ಅವನ ಬಳಿ ಇರಲೇ ಇಲ್ಲ. ದಂಡವನ್ನು ತುಂಬಿಕೊಡಲು ಭಾರತದಲ್ಲಿನ ಅವನ ಬಳಗದವರು ಮುಂದೆ ಬಂದರೂ ನಾನಕನ ಆತ್ಮಾಭಿಮಾನ ಅದಕ್ಕೊಪ್ಪಲಿಲ್ಲ.

ಮೂರು ತಿಂಗಳು ಜೈಲಿನಲ್ಲಿ ಕಳೆದು ಹೊರಬಂದ ನಂತರ ಪತಿಯಾಳಾದ ಸಮೀಪದಲ್ಲೇ ಒಬ್ಬಳು ತಂಗಿಯಿರುತ್ತಿದ್ದುದರಿಂದ ನಾನಕಚಂದ್ ಸ್ವಂತ ಮನೆಮಾಡಿ ಅಲ್ಲಿಯೆ ಪ್ರಾಕ್ಟೀಸು ಶುರುಮಾಡಲು ನಿರ್ಧರಿಸಿದ. ಪತಿಯಾಳಾದ ಸಂಜಯನಗರದಲ್ಲಿ ಒಂದು ಚಿಕ್ಕ ಮನೆ ಸಿಕ್ಕಿತು. ಹಿಂದಿನ ಸಲದ ಹಾಗೆ ಈ ಸಲ ದೈವ ಅಷ್ಟು ಅನುಕೂಲಕರವಾಗಿರಲಿಲ್ಲ. ಅಲ್ಲಿರುವವರೆಲ್ಲ ಬಡವರು. ಚಿಕಿತ್ಸೆಗಾಗಿ ಬರುವವರ ಪೈಕಿ ಎಷ್ಟೋ ಜನರಿಗೆ ಫೀ ಕೊಡುವುದಿರಲಿ, ಆತ ಕೊಡುತ್ತಿದ್ದ ಔಷಧಗಳಿಗೆ ಕೊಡಲೂ ದುಡ್ಡು ಇರುತ್ತಿರಲಿಲ್ಲ. ಇಂಥದರಲ್ಲೇ ಪ್ರವಾಹ ಬಂದು ಮನೆಯ ಸಾಮಾನನ್ನೆಲ್ಲ ಕೊಚ್ಚಿಕೊಂಡುಹೋಯಿತು.

ಮನೆ ಯಾವಾಗ ಮುಗ್ಗರಿಸುತ್ತದೋ ಎಂಬಂತಹ ಸ್ಥಿತಿ. ಬೇರೆ ಮನೆ ಹಿಡಿಯಬೇಕೆಂದರೆ ಬಾಡಿಗೆಕೊಡಲು ದುಡ್ಡಿಲ್ಲ. ಸಂಜಯನಗರದಲ್ಲಿ ಅರ್ಧಮರ್ಧ ಕಟ್ಟಿದ್ದ ವಾಲ್ಮೀಕಿ ಮಂದಿರವೊಂದಿತ್ತು. ಅದನ್ನೇ ಮನೆಮಾಡಿಕೊಂಡ. ಈಗಾತ ಮಂದಿರದ ಹೊರಗೇ ಒಂದು ಮುರುಕು ಮಂಚವನ್ನಿಟ್ಟುಕೊಂಡು ದವಾಖಾನೆ ನಡೆಸುತ್ತಾನೆ. ಆತನೇ ಹೇಳುವಂತೆ ರೋಗಿಗಳಿದ್ದಾಗ ಡಾಕ್ಟರನ ಕೆಲಸ, ರೋಗಿಗಳಿಲ್ಲದಾಗ ಚೌಕೀದಾರನ ಕೆಲಸ. ಹಾಗೆಂದು ಚೌಕೀದಾರನ ಕೆಲಸ ಮಾಡಿದ್ದಕ್ಕೆ ನಾನಕಚಂದನಿಗೇನೂ ವೇತನ ಸಿಗುವುದಿಲ್ಲ- ವಾಲ್ಮೀಕಿ ಮಂದಿರವನ್ನು ನೋಡಿಕೊಳ್ಳಲು ಟ್ರಸ್ಟ್ ಆಗಲಿ ಆಡಳಿತಮಂಡಳಿಯಾಗಲಿ ಈಗ ಇಲ್ಲ. ನಿಜಹೇಳಬೇಕೆಂದರೆ ದಕ್ಷಿಣೆಯ ಪೆಟ್ಟಿಗೆ ಕೂಡ ಅಲ್ಲಿಲ್ಲ.

ವಯಸ್ಸಾಗುತ್ತಾ ಬಂದಿದ್ದರಿಂದ ಈಗ ಅವನ ಕಣ್ಣು ಮಂಜಾಗಿದೆ. ಸ್ಮರಣಶಕ್ತಿಯೂ ಕುಗ್ಗಿದೆ. ಹಳೆಗಾಲದ ನೆನಪನ್ನು ಮೆಲುಕುಹಾಕುವುದೆಂದರೆ ನಾನಕಚಂದನಿಗೆ ಬಹಳ ಖುಷಿ. ಆತ ಹೇಳುವ ಹಾಗೆ "ಈಗ ಪೇಟೆಯ ತುಂಬಾ ಔಷಧಗಳೇ ಔಷಧಗಳು. ನಮ್ಮ ಕಾಲದಲ್ಲಿ ಹಾಗಿರಲಿಲ್ಲ. ಸಾಮಾನ್ಯವಾಗಿ ವ್ಯಾಧಿಗಳನ್ನು ಪರಿಹರಿಸಲು ಮೂರು ಬಗೆಯ ಮದ್ದು ಮಾತ್ರ ಸಾಕಾಗುತ್ತಿತ್ತು. ನನ್ನ ಇಬ್ಬರು ಮಕ್ಕಳು ಪಾಕಿಸ್ತಾನದಲ್ಲಿ ರಿಜಿಸ್ಟರ್ಡ್ ಪ್ರಾಕ್ಟೀಶನರರಾಗಿದ್ದಾರೆ. ಅವರು ಇಂದು ಕೂಡ ಮೂರು ಮಾತ್ರೆಗಳಿಗಿಂತ ಹೆಚ್ಚು ಮಾತ್ರೆಗಳನ್ನು ವಿಧಿಸುವುದಿಲ್ಲ. ಯಾವ ಬಗೆಯ ವ್ಯಾಧಿ ಬಂದರೂ ಮೂರೇ ಬಗೆಯ ಮಾತ್ರೆಗಳಿಂದ ಗುಣಪಡಿಸುತ್ತಾರೆ."

ಸಂಜಯನಗರದ ನಿವಾಸಿಗಳು ಆರ್ಥಿಕವಾಗಿ ಬಡವರೇ ಹೊರತು ಮನಸ್ಸಿನಿಂದಲ್ಲ. ಹೀಗಾಗಿ ಅವರು ಕೊಡುವ ಅಷ್ಟಿಷ್ಟು ಆಹಾರದಿಂದಲೇ ನಾನಕಚಂದ್ ಹೊಟ್ಟೆ ತುಂಬಿಸಿಕೊಳ್ಳುತ್ತಾನೆ. ಆದರೆ ದಿನವೂ ಹೊಟ್ಟೆಗೆ ದೊರೆಯುತ್ತದೆ ಎಂದು ಹೇಳುವಹಾಗಿಲ್ಲ. ಆಗ ಆತ ನೀರು ಕುಡಿದೇ ಹೊಟ್ಟೆ ತುಂಬಿಸಿಕೊಳ್ಳಬೇಕಾಗುತ್ತದೆ. ಇಂತಹ ವಿಕಟ ಪರಿಸ್ಥಿತಿಯಲ್ಲಿಯೂ ನಾನಕ್‌ಚಂದ್ ವೃತ್ತಿ ನಿಷ್ಠೆಯನ್ನು ಬಿಟ್ಟಿಲ್ಲ. ಅನೇಕ ಯುವಕರನ್ನು ಕಂಪೌಂಡರ್ ಆಗಿ ತರಬೇತುಗೊಳಿಸಿದ್ದಾನೆ.

ನಾನಕಚಂದನೆಂದರೆ ಸಂಜಯನಗರದ ಹುಡುಗರಿಗೆ ಬಹಳ ಗೌರವ. ಆತ ಎದುರಿಗೆ ಬರುತ್ತಲೇ ಕಾಲು ಮುಟ್ಟಿ ನಮಸ್ಕರಿಸುತ್ತಾರೆ. ಆದರೆ ರಸ್ತೆಯ ಆಚೆಯ ಅಂಚಿನಲ್ಲಿರುವ ಲಘು ಉದ್ಯೋಗಿಯೊಬ್ಬನಿಗೆ ಮಾತ್ರ ನಾನಕಚಂದನೆಂದರೆ ಅಷ್ಟಕ್ಕಷ್ಟೆ. ಯಾರಾದರೂ ಆತನ ಮಾತೆತ್ತಿದರೆ ಸಾಕು, "ಅದೆಲ್ಲಾ ಬೊಗಳೆ, ಆ ನಾನಕಚಂದ್ ಹೇಳುವುದನ್ನು ನಂಬಲೇಬೇಡಿ, ನಿಜ ಹೇಳಬೇಕೆಂದರೆ ೨೭ ಲಕ್ಷ ರೂಪಾಯಿಗಳನ್ನಾತ ಬ್ಯಾಂಕಿನಲ್ಲಿಟ್ಟುಕೊಂಡಿದ್ದಾನೆ. ಪುಕ್ಕಟೆ ತಿನ್ನಬೇಕೆಂದು ಹೀಗೆ ಸೋಗು ಹಾಕಿದ್ದಾನೆ" ಎನ್ನುತ್ತಾನೆ ಅವನು. ಅಷ್ಟು ದುಡ್ಡಿದ್ದರೆ ಹೊಟ್ಟೆಗಿಲ್ಲದೆ ಇಂಥಾ ಕೊಳಕು ಜಾಗದಲ್ಲೇಕೆ ಇರುತ್ತಾನೆ? ಎಂದು ಕೇಳಿದರೆ ಆತನ ಬಳಿ ಉತ್ತರವಿಲ್ಲ.

ಆ ಅಂಗಡಿಕಾರ ಭಾವಿಸಿದಂಥ ಮನುಷ್ಯ ಅವನಲ್ಲ ಎನ್ನುವುದು ನಾನಕಚಂದನನ್ನು ನೋಡಿದರೇ ಗೊತ್ತಾಗುತ್ತದೆ. ವಾಸ್ತವವಾಗಿ ಅವನ ಆಸ್ತಿಯೆಂದರೆ ಒಂದು ಮುರುಕು ಮಂಚ, ಹಳೆಗಾಲದ ತಗಡಿನ ಟ್ರಂಕು ಹಾಗೂ ಒಂದೆರಡು ಗೋಣಿಯ ಚೀಲಗಳು ಮಾತ್ರ. ಟ್ರಂಕಿನಲ್ಲಿ ಹಿಂದಿ, ಉರ್ದು ಹಾಗೂ ಇಂಗ್ಲೀಷಿನಲ್ಲಿ ಬರೆದ ಪ್ರಮಾಣಪತ್ರಗಳಿವೆ. ಆತನ ಎಂಬಿಬಿಎಸ್ ಸರ್ಟಿಫಿಕೇಟ್ಟು ಪಂಜಾಬದ ಆರೋಗ್ಯ ಖಾತೆಯ ನಿರ್ದೇಶಕರ ಬಳಿ ಇದೆಯಂತೆ. ಯಾರಾದರೂ ಮೆಡಿಕಲ್ ಸರ್ಟಿಫಿಕೆಟ್ ಕೇಳಲು ಬಂದರೆ ಅದನ್ನು ಬರೆದು, ರುಜು ಹಾಕಿ, ತನ್ನ ಹೆಸರಿನ ಮುಂದೆ 'ಎಂಬಿಬಿಎಸ್' ಎಕ್ಸ್ ಕ್ಯಾಪ್ಟನ್ ಎಎಂಈ, ಗೋಲ್ಡ್ ಮೆಡಲಿಸ್ಟ್, ಸ್ಪೆಶಲಿಸ್ಟ್ ಇನ್ ಹಾರ್ಟ್ ಅ್ಯಂಡ್ ಚೆಸ್ಟ್ ಡಿಸೀಜೆಸ್' ಎಂದು ಬರೆದ ಮುದ್ರೆಯೊತ್ತುತ್ತಾನೆ.

ಇದನ್ನು ರಸ್ತೆಯ ಅಂಚಿನಲ್ಲಿರುವ ಆ ಅಂಗಡಿಕಾರನ ಗಮನಕ್ಕೆ ತಂದರೆ, "ಹೌದು ಹೌದು, ನಾನು ಹೇಳುವುದೂ ಅದೇ. ರಜೆ ಬೇಕಾಗಿರುವವರೆಲ್ಲ ಅವನ ಬಳಿ ಹೋಗುತ್ತಾರೆ. ಒಂದು ರುಜುವಿಗೆ ಇಪ್ಪತ್ತು ರೂಪಾಯಿ. ಹೆಚ್ಚು ದಿನ ರಜೆ ಬೇಕಾದರೆ ಹೆಚ್ಚು ದುಡ್ಡುಕೊಡಬೇಕು. ಬರಿ ಆಫೀಸಿನಲ್ಲಿ ಕುಳಿತು ಕೆಲಸಮಾಡುವವರಷ್ಟೆ ಅಲ್ಲ,



ಪೊಲೀಸರೂ ಸರ್ಟಿಫಿಕೇಟಿಗಾಗಿ ಅವನ ಬಳಿ ಹೋಗುತ್ತಾರೆ," ಎಂದಾತ ಹೇಳುತ್ತಾನೆ.

ಯೋಗಾಯೋಗವೇ ಎನ್ನಿ, ದೈವದ ಚೋದ್ಯವೇ ಎನ್ನಿ, ದೇಶವಿಭಜನೆಯ ಕಾಲದಲ್ಲಿ ಕಳೆದುಹೋದ ಹೆಂಡತಿ ಪಂಜಾಬಿನ ಯಮುನಾನಗರದಲ್ಲೇ ಇದ್ದಾಳೆ. ನಾನಕಚಂದನ ಸುದ್ದಿಯೇ ಇಲ್ಲದ್ದರಿಂದ ಆತ ಸತ್ತನೆಂದೇ ಭಾವಿಸಿ ಇನ್ನೊಬ್ಬನನ್ನು ಮದುವೆಯೂ ಆಗಿದ್ದಾಳೆ. ಮಕ್ಕಳನ್ನೂ ಹೆತ್ತಿದ್ದಾಳೆ. ಆ ಮಕ್ಕಳಿಗೂ ಮಕ್ಕಳಾಗಿವೆ. ಆ ರೀತಿಯಿಂದಲಾದರೂ ನಾನಕಚಂದ್ ಈಗ ತಾತ. ಆದರೆ ಮೊದಲಿನ ಹೆಂಡತಿಯನ್ನಾತ ಒಮ್ಮೆಯೂ ಭೇಟಿಯಾಗಿಲ್ಲ. ಏಕೆಂದು ಕೇಳಿದರೆ, "ಯಾವ ಮುಖ ಹೊತ್ತುಕೊಂಡು ಅವಳನ್ನು ಭೇಟಿಯಾಗಲಿ?" ಎಂದು ಪ್ರತಿಯಾಗಿ ಕೇಳುತ್ತಾನೆ. ಹಿಂದುವಾಗಿ ಧರ್ಮಾಂತರಗೊಂಡಿದ್ದರಿಂದ ಇಸ್ಲಾಂ ಧರ್ಮದನ್ವಯ ಫಾತಿಮಾಳೊಂದಿಗಿನ ಮದುವೆಯೂ ಮುರಿದುಬಿದ್ದಂತಾಗಿದೆ. ಹೀಗಾಗಿ

ಇಬ್ಬರು ಹೆಂಡಿರಿದ್ದರೂ ನಾನಕಚಂದನೀಗ ಬಹ್ಮ ಚಾರಿ. ಆದರೆ ಫಾತಿಮಾಳೊಂದಿಗಾಗಲಿ ಪಾಕಿಸ್ತಾನದಲ್ಲಿನ ಅವನ ಇಬ್ಬರು ಮಕ್ಕಳೊಂದಿಗಾಗಲಿ ಅವನ ಸಂಬಂಧ ಮಧುರವಾಗಿಯೇ ಇದೆ. ಇಲ್ಲಿಗೆ ಬಂದರೆ ಪಾಕಿಸ್ತಾನೀ ಸರಕಾರ ಹಿಂಸಿಸುವುದೆಂಬ ಭಯದಿಂದ ಬಹುಶಃ ಅವರಾರೂ ತನ್ನನ್ನು ಭೇಟಿಯಾಗಲು ಬಂದಿಲ್ಲ ಎಂಬುದು ನಾನಕಚಂದನ ಅನುಮಾನ.

ಅವನ ಇಬ್ಬರು ತಂಗಿಯರ ಪೈಕಿ ಒಬ್ಬಳು ಈಗಾಗಲೇ ತೀರಿಹೋಗಿದ್ದರೆ ಇನ್ನೊಬ್ಬಳು ವಿಧವೆಯಾಗಿದ್ದಾಳೆ. ಅವಳು ಸಂಸಾರ ನಡೆಸುವುದೇ ಕಷ್ಟವಾಗಿರುವಾಗ ತಾನೂ ಅಲ್ಲಿ ಸೇರಿ ಅವಳ ಕಷ್ಟವನ್ನು ಹೆಚ್ಚಿಸಬಾರದೆಂದು ನಾನಕಚಂದ್ ಪ್ರತ್ಯೇಕವಾಗಿ ವಾಸಿಸುತ್ತಾನೆ.

ಇವನನ್ನು ಕಾಣಬೇಕೆಂಬ ತವಕವಿದ್ದರೂ ಪಾಕಿಸ್ತಾನದಲ್ಲಿನ ಮಕ್ಕಳು ಭಾರತಕ್ಕೆ ಬರಲಾರವು. ಸನಿಹದಲ್ಲೇ ಮೊಮಕ್ಕಳಿದ್ದರೂ ಈತ ಅಲ್ಲಿಗೆ ಹೋಗಲಾರ. ಪ್ರಸಂಗವಶಾತ್ ಭಾರತದಲ್ಲಿನ ಬಂಧು-ಬಾಂಧವರೂ ನಾನಕಚಂದನನ್ನು ಭೇಟಿಯಾಗಲು ಬರುತ್ತಿಲ್ಲ. ಹೀಗೆ ಆಪ್ತೇಷ್ಟರಿದ್ದರೂ ನಾನಕಚಂದನಿಂದು ಏಕಾಕಿ. ದೈವಗತಿ ದುರ್ಭರವಾಗಿರುವಂತೆಯೇ ಒಮ್ಮೊಮ್ಮೆ ವಿಚಿತ್ರವೂ ಆಗಿರುತ್ತದೆನ್ನುವುದು ಇದಕ್ಕೇ. ●



## ಜಿಗೋಲೋ

ಪಾಶ್ಚಾತ್ಯ ರಾಷ್ಟ್ರಗಳಲ್ಲಿ 'ಜಿಗೋಲೋ' ಎಂಬ ಪದ ಪದೇ ಪದೇ ಬಳಸಲ್ಪಡುತ್ತದೆ. ಅದರರ್ಥವನ್ನು ವೆಬ್‌ಸ್ಟರ್ಸ್ ಡಿಕ್ಷನರಿಯು "ಹೆಣ್ಣೊಬ್ಬಳು ಭೋಜನಕೂಟ, ಮದುವೆ, ನರ್ತನ ಕೂಟ, ಸಂಗೀತ ಮೇಳ ಮುಂತಾದವುಗಳಿಗೆ ಕರೆದೊಯ್ಯುವ ಸಂಗಾತಿ" ಎಂದು ಹೇಳಿದೆ. ಹದಿನಾಲ್ಕು ವರ್ಷಕ್ಕೆ ಮೇಲ್ಪಟ್ಟ ಪ್ರತಿಯೊಬ್ಬಳಿಗೂ ಇಂತಹ ಸಂಗಾತಿ ಇದ್ದೇ ಇರುತ್ತಾನೆ. ಮದುವೆಯಾದವರೂ ಆಗದಿರುವವರೂ ಇಂತಹ ಸಂಗಾತಿಯನ್ನು ಒಂದು ದಿನ, ಒಂದು ಸಂಜೆ ಅಥವಾ ಒಂದು ನಿಯಮಿತ ಅವಧಿಗಾಗಿ ಕಾಸುಕೊಟ್ಟು ನೇಮಿಸಿಕೊಳ್ಳುತ್ತಾರೆ. ಇಂಥ ಸಂಗಾತಿಗಳನ್ನು ಸರಬರಾಜು ಮಾಡುವ ಸಂಸ್ಥೆಗಳು ಅಲ್ಲಿವೆ.

'ಜಿಗೋಲೋ' ಎಂಬುದಕ್ಕೆ ಅಮೆರಿಕದಲ್ಲಿ ಇನ್ನೂ ಒಂದು ಅರ್ಥವಿದೆ. ಅದೆಂದರೆ "ಹೆಂಡತಿ ಅಥವಾ ಹೆಂಗಸಿನ ಹಣದಲ್ಲಿ ಬದುಕುವವನು ಇಲ್ಲವೆ ಬದುಕಲು ಆಶಿಸುವವನು" ಎಂದು. ಇಂಥವನಿಗೆ ಕೆಲಸ ಇರಬಹುದು; ಆತ ನಿರುದ್ಯೋಗಿಯಾಗಿರಲೂಬಹುದು. ಇಂಥವನಿಗೆ ಹೆಂಡತಿಯ ಆಸ್ತಿ, ಹಣ, ಮನೆ, ಮಠ ಅನುಭವಿಸುವ ಸ್ವಭಾವವಿರುತ್ತದೆ. ಅಲ್ಲಿ ಎಷ್ಟೋ ಗಂಡಸರು ಮುಚ್ಚುಮರೆಯಿಲ್ಲದೆ "ನಾನು 'ಜಿಗೋಲೋ'. ನನಗೆ ಹಣವಿರುವ, ಚೆನ್ನಾಗಿ ಸಂಪಾದಿಸುವ ಹೆಣ್ಣು ಬೇಕು" ಎಂದು ಬಾಯಿಬಿಟ್ಟು ಹೇಳುತ್ತಾರೆ.

"ನಮ್ಮಲ್ಲಿ ಇಂಥವರಿಲ್ಲವೆ?" ಎಂದು ಕೇಳಬೇಡಿ. ಇಲ್ಲಿ ಇಂಥವರ ಸಂಖ್ಯೆ ಅಲ್ಲಿಗಿಂತ ಜಾಸ್ತಿ.

ಯಾಕೆಂದರೆ ನಮ್ಮಲ್ಲಿ ಸ್ತ್ರೀಧನಕ್ಕಾಗಿ ಬಾಯಿಬಿಡುವವರೇ ತುಂಬಿದ್ದಾರಲ್ಲ.... ತಾವು ಸ್ವಂತಃಕ್ಕೆ ಹಾಗೆ ಹೇಳಿಕೊಳ್ಳದೆ, ಹಾಗೆ ಯಾರಾದರೂ ಅಂದು ಬಿಟ್ಟರೆ ತುಂಬ ಕೋಪ ಪ್ರಕಟಿಸುವ ಜನ ಇವರು. 'ವರದಕ್ಷಿಣೆ' ತೆಗೆದುಕೊಳ್ಳುವ ಪ್ರತಿಯೊಬ್ಬನೂ 'ಜಿಗೋಲೋ'ವೇ. ಹಾಗೆಯೇ ತನ್ನ ಸುಖಸಮೃದ್ಧಿಗಾಗಿ ದುಡಿವ ಹೆಂಡತಿಯನ್ನು ಬಯಸುವವನೂ 'ಜಿಗೋಲೋ'ವೇ.

● ಮಾಧವ ಪ್ರಿಯೆ

# ಸಾವನ್ನೇ ತರಬಹುದಾದ ಸಾವಿನ ವೆಚ್ಚ!



ಇದನ್ನು ಓದಿ 'ಹೇಗಪ್ಪಾ?' ಎಂದು ಚಿಂತಿಸುತ್ತ ಕೂಡಬೇಡಿ. ಇದು ಅನಿವಾರ್ಯವಾದ್ದರಿಂದ ಯೋಚನೆಗೆ ತೊಡಗಿ.....

• ಅರುಣ

ಸಾವು ಪ್ರತಿಯೊಬ್ಬನ ಬದುಕಿನಲ್ಲಿ ಅನಿವಾರ್ಯ ಘಟ್ಟ. ಅದರಿಂದ ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಬದುಕಲು ಜೀವನವಿಡೀ ನಾವು ಅಥವಾ ನಮ್ಮವರು ಅಗಾಧವಾಗಿ ವೆಚ್ಚ ಮಾಡಿದಂತೆ ಸಾವಿನಲ್ಲೂ ಅಂದರೆ ಅಂತ್ಯ ಸಂಸ್ಕಾರ ಸಂದರ್ಭದಲ್ಲಿಯೂ ವೆಚ್ಚ ಮಾಡಬೇಕಾಗುತ್ತದೆ.

ಇಂದು ಜಗತ್ತಿನ ಬಲಾಢ್ಯ ದೇಶಗಳಲ್ಲಿ ಅಗ್ರಗಣ್ಯ ಸ್ಥಾನದಲ್ಲಿರುವ ಅಮೆರಿಕವನ್ನು ನೋಡಿ. ಅಲ್ಲಿ ಒಬ್ಬ ವ್ಯಕ್ತಿಯ ಅಂತ್ಯ ಸಂಸ್ಕಾರ ದುಬಾರಿ ವೆಚ್ಚದ ಕ್ರಿಯಾವಿಧಿಯಾಗಿದೆ. ಅಲ್ಲಿಯ 'ಸರ್ವಿಸ್ ಕಾರ್ಪೊರೇಶನ್ ಇಂಟರ್ ನ್ಯಾಶನಲ್' ಸಂಸ್ಥೆ ದೇಶದಾದ್ಯಂತ ಶವಸಂಸ್ಕಾರ ಕ್ರಿಯಾ ವಿಧಿಗಳನ್ನು ಜರುಗಿಸುವ ಹೊಣೆ ವಹಿಸಿಕೊಂಡಿದೆ. ಬ್ರಿಟನ್, ಫ್ರಾನ್ಸ್, ಜರ್ಮನಿ ಮುಂತಾದ ರಾಷ್ಟ್ರಗಳಲ್ಲಿಯೂ ಇದರ ಶಾಖೆಗಳಿವೆ. ಮುಂದೊಂದು ದಿನ ಭಾರತದಲ್ಲಿ ಶವಸಂಸ್ಕಾರ ವಿಧಿಗಳನ್ನು ನೆರವೇರಿಸುವ ಹೊಣೆಯನ್ನು ಈ ಸಂಸ್ಥೆ ವಹಿಸಿಕೊಂಡರೆ ಆಶ್ಚರ್ಯವೇನಿಲ್ಲ.

ಮೂವತ್ತೆರಡು ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿರುವ 'ಸರ್ವಿಸ್ ಕಾರ್ಪೊರೇಶನ್ ಇಂಟರ್ ನ್ಯಾಶನಲ್' (ಎಸ್.ಸಿ.ಐ.) ಇಂದು ಜಗತ್ತಿನಲ್ಲಿ ಅತಿದೊಡ್ಡ, ಶವಸಂಸ್ಕಾರ ವಿಧಿ ನೆರವೇರಿಸುವ ಬೃಹತ್ ಸಾರ್ವಜನಿಕ ಸಂಸ್ಥೆಯಾಗಿ ಬೆಳೆದಿದೆ. ಉತ್ತರ ಅಮೆರಿಕಾ, ಯುರೋಪ್, ಆಸ್ಟ್ರೇಲಿಯಾ ದೇಶಗಳಲ್ಲಿ ಈ ಸಂಸ್ಥೆ ೨೬೩೧ ಅಂತ್ಯ ಸಂಸ್ಕಾರ ಗೃಹಗಳ (ಫ್ಯೂನರಲ್ ಹೋಮ್ಸ್), ೨೫೬ ಸಮಾಧಿ ಭೂಮಿಗಳ, ಹಾಗೂ ೧೩೬ ಚಿತಾಗಾರಗಳ ಒಡೆತನವನ್ನು ಹೊಂದಿದೆ.

ಅಮೆರಿಕಾದಲ್ಲಿ ಶ್ರೀಮಂತ ವಾಣಿಜ್ಯೋದ್ಯಮಿಗಳು, ಕೋಟ್ಯಧೀಶರು ಜೀವಿತಾವಧಿಯಲ್ಲಿಯೇ ತಮ್ಮ ಶವಸಂಸ್ಕಾರ ವ್ಯವಸ್ಥೆಯನ್ನು ಮಾಡಿಕೊಂಡಿಟ್ಟಿರುತ್ತಾರೆ. ಅಲ್ಲಿರುವ ಅಂತ್ಯ ಸಂಸ್ಕಾರ ಗೃಹಗಳಲ್ಲಿ ಶೇ. ೮೦ ರಷ್ಟು ಅಂದರೆ ಸುಮಾರು ೨೨,೫೦೦ ನಿವಾಸಗಳು ಪ್ರತಿಷ್ಠಿತ ಕುಟುಂಬಗಳ ಒಡೆತನಕ್ಕೆ ಸೇರಿವೆ. ಸರ್ವಿಸ್ ಕಾರ್ಪೊರೇಶನ್ ಸಂಸ್ಥೆ ೬೦೦೦ ನಿವಾಸಗಳ ಮಾಲಕತ್ವ ಹೊಂದುವ ಆಶಯವಿಟ್ಟುಕೊಂಡಿದೆ.

ಜಿಬ್ರಾಲ್ಟರ್ ಅಂತ್ಯಸಂಸ್ಕಾರ ಗೃಹ ಅಮೆರಿಕಾದಲ್ಲಿ ಕೌಟುಂಬಿಕ ಒಡೆತನದ ಬಹುದೊಡ್ಡ ಸ್ಮಶಾನ

# ಕೋಲಮಾ ಎಂಬ 'ಮೃತ್ಯು ನಗರಿ'

## ಈ ನಗರದಲ್ಲಿನವರಿಗೆ ಆಸ್ಪತ್ರೆ-ವಾಚನಾಲಯ-ದೇವಾಲಯ-ಚರ್ಚು-ಶಾಲೆಗಳ ಅವಶ್ಯಕತೆಯೇ ಇಲ್ಲ!

ಸುಪ್ರಸಿದ್ಧ-ಅಪ್ರಸಿದ್ಧರೆಂಬ ಯಾವ ಭೇದವೂ ಇಲ್ಲಿಲ್ಲ. ಮನುಷ್ಯ ಇಲ್ಲವೆ ಪ್ರಾಣಿ ಎಂಬ ತಾರತಮ್ಯವನ್ನೂ ಕೇಳಬೇಡಿ. ಪತ್ರಿಕಾ ಪ್ರಪಂಚದ ಸಮ್ರಾಟ ವಿಲಿಯಂ ರ್‍ಯಾಂಡೋಲ್ಫ್ ಹರ್ಸ್ಟ್‌ನೆ ಇರಲಿ, ಇಲ್ಲವೆ ಟೀನಾ ಟರ್ನರ್‌ಳ ನಾಯಿಯೆ ಇರಲಿ ಇಬ್ಬರೂ ಸಮಾಧಿಗೊಂಡದ್ದು ಇಲ್ಲಿಯೆ; ಜಗತ್ತಿನ ಅತ್ಯಂತ ದೊಡ್ಡದೆನಿಸಿರುವ ಈ 'ಮೃತ್ಯು ನಗರಿ'ಯಲ್ಲಿಯೆ.

'ಮೃತ್ಯು ನಗರಿ' ಎಂದಾಕ್ಷಣ ಹಾರಿ ಬೀಳದಿರಿ. ಈ ವಿಚಿತ್ರ ನಗರಿಯಲ್ಲಿರುವ ಪ್ರತಿಯೊಬ್ಬ ಜೀವಂತ ವ್ಯಕ್ತಿಯ ಹಿಂದೆಯೂ ೧೨೦೦ ಮೃತರ ಸಮಾಧಿಗಳಿವೆ.

ಕ್ಯಾಲಿಫೋರ್ನಿಯಾದ ಸಣ್ಣ ನಗರ



ಕೋಲಮಾ. ಇಲ್ಲಿ ಜೀವನಿರದಿದ್ದರೂ ಸಮಾಧಿಗಳು ಭರಪೂರ ತುಂಬಿವೆ. ಸುಮಾರು ಒಂದು ಶತಮಾನದ ಹಿಂದೆ ಕೋಲಮಾ ಹಸಿರು ತುಂಬಿದ ಹೊಲಗಳ ನಡುವೆ ಇತ್ತು. ಆದರೆ ಕಳೆದ ಶತಮಾನದ ಅಂತ್ಯದ ವೇಳೆಗೆ, ಆಗ ಅಲ್ಲಿ ಪ್ರಚಲಿತವಾಗಿದ್ದ ಮೃತ ಸಂಬಂಧಿಗಳನ್ನು ಹಿತ್ತಿಲಲ್ಲೇ ಹೂಳುವ ಪದ್ಧತಿಗೆ ಆಗಿನ ಅಧಿಕಾರಿಗಳು ಪೂರ್ಣ ವಿರಾಮ ಹಾಕಿದರು.

"ಹಾಗಾದರೆ ಹೂಳುವುದಾದರೂ ಎಲ್ಲಿ?" ಎಂದು ಕೇಳಿದ ಜನಕ್ಕೆ ಅಧಿಕಾರಿಗಳೇ ಉತ್ತರ ರೂಪವಾಗಿ ಕೋಲಮಾ ನಗರವನ್ನು ತೋರಿಸಿದರು. ಕಾಲಕ್ರಮೇಣ ತಮ್ಮವರ ಸಮಾಧಿಗಳು ತುಂಬ ಕಲಾತ್ಮಕವಾಗಿರಬೇಕೆಂದು ಬಯಸಿದ ಜನ ಅದಕ್ಕಾಗಿ ಕಲಾವಿದರ ನೆರವು ಪಡೆಯತೊಡಗಿದರು. ಸುಂದರ ಸ್ಮಾರಕಗಳು, ಮೃತ್ಯು ಶಿಲಾ ಲೇಖಗಳು ನಿರ್ಮಾಣಗೊಳ್ಳತೊಡಗಿದವು. ಇಲ್ಲಿ ಎಲ್ಲ ಸಂಪ್ರದಾಯಗಳವರ ಅಂದರೆ ಕ್ರಿಶ್ಚಿಯನ್, ಯಹೂದ್ಯ, ಚೀನಿ, ಜಪಾನಿ ಹಾಗೂ ಇನ್ನಿತರ ಧರ್ಮಗಳವರ ಸಮಾಧಿಗಳಿಗೂ ಅವಕಾಶ ಕಲ್ಪಿಸಿಕೊಡಲಾಗಿದೆ. ಮೃತ ಸಾಕು ಪ್ರಾಣಿಗಳ ವಿಭಾಗವಂತೂ ವಿಶಿಷ್ಟವಾದದ್ದು.

ಈ ಮೃತ್ಯುನಗರಿಗೊಬ್ಬ ಮೇಯರ್ ಇದ್ದಾನೆ. ಹೆಸರು ಟೆಡ್ ಕಿರ್ಸ್‌ನರ್. ಆತನ ಮಗಳು ಜೂಲಿ, "ನಾನು ಹುಟ್ಟಿ ಬೆಳೆದು ಬಾಳುತ್ತಿರುವುದೇ ಈ ಮೃತ್ಯು ನಗರಿಯಲ್ಲಿ. ಈ ಮೂವತ್ತೆಂಟು ವರ್ಷಗಳಲ್ಲಿ ಮೃತ ನಗರಿಯಲ್ಲಿ ಜಗಳ, ಅಶಾಂತಿ, ಕೊಲೆ-ಸುಲಿಗೆಗಳ ಒಂದಾದರೂ ಉದಾಹರಣೆಯಿಲ್ಲ. ಇದು ಶಾಂತಿಪ್ರಿಯರ ನಿದ್ರಾಸ್ಥಳ," ಎನ್ನುತ್ತಾಳೆ.

ಆದರೆ ಸಿನಿಕರೆಲ್ಲಿಲ್ಲ? ಕೋಲಮಾ ನಗರವನ್ನು 'ಕೋಮಾ ನಗರ'ವೆಂದು ಕರೆದು ನಕ್ಕುಬಿಡುವ ಕುತ್ಸಿತ ಜನಕ್ಕೂ ಕಡಿಮೆಯಿಲ್ಲ.

• ಸೋನಿ

ನಿವಾಸವೆನಿಸಿದೆ. ಕಳೆದ ಜೂನ್ ತಿಂಗಳಲ್ಲಿ ಸರ್ವೀಸ್ ಕಾರ್ಪೊರೇಶನ್ ೨೦೦ ಮಿಲಿಯ ಡಾಲರ್ ಪಾವತಿ ಮಾಡಿ ಈ ಅಂತ್ಯ ಸಂಸ್ಕಾರ ಗೃಹವನ್ನು ಖರೀದಿಸಿತು.

ಅಂತ್ಯ ಸಂಸ್ಕಾರ ವಿಧಿ ನೆರವೇರಿಸುವ 'ಇಂಡಿಯಾನಾಪೊಲೀಸ್' ಎಂಬ ಇನ್ನೊಂದು ಸಂಸ್ಥೆಯೂ ಅಮೆರಿಕಾದಲ್ಲಿ ಇದೆ. ಈ ಕಂಪೆನಿ ೧೨ ರಾಜ್ಯಗಳಲ್ಲಿ ೨೩ ಅಂತ್ಯ ಸಂಸ್ಕಾರ ಗೃಹಗಳ, ೫೪ ಸಮಾಧಿ ಭೂಮಿಗಳ (ರುದ್ರಭೂಮಿ) ಒಡೆತನ ಹೊಂದಿದೆ. ಕಳೆದ ಜುಲೈ ತಿಂಗಳಲ್ಲಿ ಸರ್ವಿಸ್ ಕಾರ್ಪೊರೇಶನ್ ಫ್ರಾನ್ಸ್‌ನಲ್ಲಿ ೬೫೦ ಅಂತ್ಯಸಂಸ್ಕಾರ ಗೃಹಗಳ ನಿರ್ಮಾಣಕ್ಕೆಂದು ೨೪.೩೦ ಕೋಟಿ ಡಾಲರ್ ವೆಚ್ಚ ಮಾಡಿತು. ಇಂದು ಎಸ್.ಸಿ.ಐ. ಫ್ರಾನ್ಸಿನಲ್ಲಿ ಶೇಕಡಾ ೨೯ರಷ್ಟು, ಯುನೈಟೆಡ್ ಕಿಂಗ್‌ಡಮ್ ಅಥವಾ ಯು.ಕೆ.ಯಲ್ಲಿ ಶೇಕಡಾ ೧೪, ಹಾಗೂ ಆಸ್ಟ್ರೇಲಿಯಾದಲ್ಲಿ ಶೇಕಡಾ ೨೫ ರಷ್ಟು ಅಂತ್ಯಸಂಸ್ಕಾರ ವ್ಯವಹಾರ ನಡೆಸುತ್ತಿದೆ. ಹೀಗೆ ಶವಸಂಸ್ಕಾರ ವಿಧಿಯೂ ಈಚೆಗಿನ ವರ್ಷಗಳಲ್ಲಿ ಲಾಭದಾಯಕ ವ್ಯವಹಾರವೆನಿಸಿದೆ. ಎಸ್.ಸಿ.ಐ. ಸಂಸ್ಥೆ ವಾರ್ಷಿಕ ಆದಾಯ ಅಮೇರಿಕವೊಂದರಲ್ಲೇ ಕಳೆದ ಐದು ವರ್ಷಗಳಲ್ಲಿ ಹಲವು ಕೋಟಿ ಡಾಲರುಗಳಿಗೆ ಏರಿದೆ. ಅಲ್ಲಿ ಸಾವು ವ್ಯವಹಾರದ ದೃಷ್ಟಿಯಿಂದ ಲಾಭದಾಯಕವೆನಿಸುತ್ತಿರುವುದು ಕ್ರೂರ ವ್ಯಂಗ್ಯವೇ ಸರಿ. ಕಳೆದ ವರ್ಷ ೩೩ ಲಕ್ಷ ಅಮೆರಿಕನ್ನರು ತೀರಿಕೊಂಡರು. ೧೯೮೦ರ ನಂತರವರ್ಷ ಈ ಪ್ರಮಾಣ ಸ್ಥಿರವಾಗಿ ಉಳಿದಿದೆ.

ಅಮೆರಿಕಾದಲ್ಲಿ ಕ್ಯಾಲಿಫೋರ್ನಿಯಾ, ಫ್ಲಾರಿಡಾ, ಹಾಗೂ ಟೆಕ್ಸಾಸ್‌ನಲ್ಲಿ ಎಸ್.ಸಿ.ಐ. ವ್ಯಾಪಕ ಪ್ರಮಾಣದಲ್ಲಿ ಅಂತ್ಯಸಂಸ್ಕಾರ ವ್ಯವಹಾರದಲ್ಲಿ ಮಗ್ನವಾಗಿದೆ. ವಾಣಿಜ್ಯೋದ್ಯಮಿ ಅಲನ್ ಕ್ರೀಡಿ ನೇತೃತ್ವದ 'ಟ್ರಸ್ಟ್ ಹಂಡ್ರೆಡ್' ಎಂಬ ಇನ್ನೊಂದು ಸಂಸ್ಥೆಯಿದೆ. ಅಮೆರಿಕಾದ ೨೦೦ ಸ್ವತಂತ್ರ ಅಂತ್ಯ ಸಂಸ್ಕಾರ ಗೃಹಗಳ ಅಗತ್ಯವನ್ನು ಅದು ಪೂರೈಸುತ್ತದೆ. ಎಸ್.ಸಿ.ಐ. ಸಂಸ್ಥೆಯ ತಜ್ಞರು ಅಮೆರಿಕಾದಲ್ಲಿ ಸಾವಿನ ಹೊಸ್ತಿಲಲ್ಲಿರುವವರ ಬಗ್ಗೆಯೂ ಖಚಿತ ಲೆಕ್ಕಾಚಾರ ಮಾಡಿದ್ದಾರೆ. ೨೦೫೦ನೆ

ಇಸವಿಯ ವೇಳೆಗೆ ಅಮೆರಿಕಾದಲ್ಲಿ ೭.೯ ಕೋಟಿ ಮಂದಿ ೬೫ರ ಅಥವಾ ಅದಕ್ಕಿಂತಲೂ ಅಧಿಕ ವಯಸ್ಸನ್ನು ತಲುಪಲಿದ್ದಾರೆ. ೨೦೫೦ರ ಇಸವಿ ವೇಳೆಗೆ ವಾರ್ಷಿಕ ಸರಾಸರಿ ಸಾವಿನ ಸಂಖ್ಯೆ ಶೇಕಡಾ ಒಂಕ್ಕೆ ತಲುಪಲಿದೆ ಎಂದು ಅವರ ಅಂದಾಜು ಲೆಕ್ಕಾಚಾರ. ಅಮೆರಿಕಾದ ಏಳು ರಾಜ್ಯಗಳಲ್ಲಿ ಕ್ಯಾಲಿಫೋರ್ನಿಯಾ, ಫ್ಲಾರಿಡಾ, ಇಲ್ಲಿನಾಯಿಸ್, ಮಿಚಿಗನ್, ಹಾಗೂ ನ್ಯೂಯಾರ್ಕ್ ನಗರಗಳಲ್ಲಿ ೯೫ರ ಅಂಚನ್ನು ದಾಟಿದ ಒಂದು ಮಿಲಿಯ ನಿವಾಸಿಗಳಿದ್ದಾರೆ. ಅಂತ್ಯಸಂಸ್ಕಾರ ಗೃಹಗಳೆಲ್ಲ ಅವರ ಮೇಲೆ ಆಸೆಯ ಕಣ್ಣು ನೆಟ್ಟಿವೆ.

ಕೆನಡಾದ ಲೊವೆನ್ ಗ್ರೂಪ್ ಜಗತ್ತಿನ ಇನ್ನೊಂದು ಅತಿ ದೊಡ್ಡ ಅಂತ್ಯ ಸಂಸ್ಕಾರ ಸೇವಾ ಸಂಸ್ಥೆ. ಆದರೆ ವ್ಯವಹಾರದ ವ್ಯಾಪ್ತಿಯ ದೃಷ್ಟಿಯಿಂದ ಇದು ಎಸ್.ಸಿ.ಐ. ಸಂಸ್ಥೆಯ ಅರ್ಧದಷ್ಟಿದೆ. ಹಿಂದೆಯೇ ಉಲ್ಲೇಖಿಸಿದಂತೆ ಕೌಟುಂಬಿಕ ಒಡೆತನದ ಅಂತ್ಯಸಂಸ್ಕಾರ ಗೃಹಗಳು ಎಸ್.ಸಿ.ಐ.ನ ಪೈಪೋಟಿ ಎದುರಿಸಲಾಗದೆ ಕಂಗಾಲಾಗಿವೆ.

ಎಸ್.ಸಿ.ಐ. ಕಂಪೆನಿಯ ಆದಾಯವೂ ಪುಷ್ಕಳವಾಗಿವೆ. ಆದರ ಒಡೆತನದಲ್ಲಿರುವ ಅಂತ್ಯಸಂಸ್ಕಾರ ಗೃಹಗಳ ವಾರ್ಷಿಕ ಆದಾಯ ಮೂವತ್ತರಿಂದ ನಲವತ್ತು ಲಕ್ಷ ಡಾಲರ್‌ಗಳಷ್ಟಿರುತ್ತದೆ. ಕಂಪೆನಿಯ ಕೆಲವು ನಿರ್ದೇಶಕರು ಸಾಗರದಾಚೆಯ ರಾಷ್ಟ್ರಗಳಲ್ಲಿರುವ ಈ ಸಂಸ್ಥೆಯ ಶಾಖೆಗಳ ಚಟುವಟಿಕೆಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ವಹಿಸಿಕೊಂಡಿರುತ್ತಾರೆ.

●

## ಅಬ್ಬಾ ಈ ಪಾಟಿ ಬಿಲ್ಲು!

ಅಮೆರಿಕಾದ ಮಹಾನಗರಗಳಲ್ಲಿ ಸಾಯುವ ಜನತೆಯ ಅಂತ್ಯ ಸಂಸ್ಕಾರಕ್ಕೆ ತಗಲುವ ಸರಾಸರಿ ವೆಚ್ಚ ೪೫೦೦ ಡಾಲರುಗಳು. (ಸುಮಾರು ೧,೫೭,೫೦೦ ರೂ.ಗಳು.) ಅಂತ್ಯ ಸಂಸ್ಕಾರದ ವಿವಿಧ ಕ್ರಿಯಾವಿಧಿಗಳಿಗೆ ತಗಲುವ ವೆಚ್ಚದ ವಿವರಗಳು ಹೀಗಿವೆ:

ಮೂಲಭೂತ ವೃತ್ತಿ ಶುಲ್ಕ - ೯೫೨ ಡಾಲರು.

ಮೃತದೇಹವನ್ನು ಅಂತ್ಯಸಂಸ್ಕಾರ ಗೃಹಕ್ಕೆ ರವಾನಿಸಲು ತಗಲುವ ವೆಚ್ಚ - ೧೩೨ ಡಾಲರು.

ಎಂಬಾಮಿಂಗ್ (ಶವಕೆಡದಂತೆ ಕೆಲವು ದಿನ ಸುರಕ್ಷಿತವಾಗಿಡುವ ವಿಧಾನ) - ೪೨೨ ಡಾಲರು,

ಅಂತ್ಯ ಸಂಸ್ಕಾರಕ್ಕೆ ಶವಸಿದ್ಧಪಡಿಸುವ ವಿಧಿಗಳು, ಕೇಶಾಲಂಕಾರ, ದೇಹಾಲಂಕಾರ, ಶವವನ್ನು ಶವಪೆಟ್ಟಿಗೆಯಲ್ಲಿರಿಸುವುದು ಇತ್ಯಾದಿ - ೧೧೭ ಡಾಲರು,

ಶವ ಸಂಸ್ಕಾರ ಸೇವೆ - ೩೦೮ ಡಾಲರು,

ಶವವಾಹನ - ೧೪೫ ಡಾಲರು,

ಶ್ರದ್ಧಾಂಜಲಿ, ಸಂತಾಪ ಸೂಚಿಸಿದವರಿಗೆ ಕೃತಜ್ಞತೆ ಅರ್ಪಿಸುವ ಪತ್ರ ವ್ಯವಹಾರಕ್ಕೆ -೨೧ ಡಾಲರು,

ಮಕಮಲ್ಲಿನ ಬಟ್ಟೆಯನ್ನು ಒಳಭಾಗಕ್ಕೆ ಅಳವಡಿಸಿದ ಶವ ಪೆಟ್ಟಿಗೆಗೆ -೨೧೪೩ ಡಾಲರು.

# ಇದ್ದಕಿದ್ದ ಹಾಗೆ ಕರೆವೆ ನೀನು...

ಬಾಗಿಲಲ್ಲಿ ಕೈ ಬೀಸುತ್ತ
ನಿಂತವರಿನ್ನೂ ಒಳಸರಿದಿಲ್ಲ.
ಗೇಟು ಹಾಕಿ ರಸ್ತೆಗಿಳಿದು
ಹಿಂತಿರುಗಬೇಕೆಂದರೆ
ಎದುರಿಗೇ ನೀನು
ನನಗಾಗೇ ಕಾದು
ಕರೆದು ಹೋಗಲು ಬಂದೆ.

ಕೈಯಲ್ಲಿ ಮಡಚಿದ
ನಿನ್ನೆ ಅವಳು ಕೊಟ್ಟ ಪತ್ರ
ಹೇಳಲು ಮರೆತ, ಹವಣಿಸಿದ
ಹೇಳಲಾಗದ ಮಾತು
ಇನ್ನೂ ನಿದ್ದೆಯಿಂದೆದ್ದು
ಬಂದಂತೆ ಕಣ್ಣಲ್ಲೇ
ಕಟ್ಟಿಕೊಂಡಿದೆ ಕನಸು
ಎಲ್ಲ ಎಲ್ಲಿ ಕೊಡವಿ
ನಿನ್ನ ಹಿಂದೆ ಹೇಗೆ ಬರಲಿ.

ಯಾಕೆ ಹೀಗೆ ಇದ್ದಕ್ಕಿದ್ದಂತೆ ಬಂದೆ
ನಾಳೆಯ ಕಿರಣಗಳಿನ್ನೂ
ಮುಷ್ಟಿಯಲ್ಲಿ ಅರಳುವಾಗ
ಬದುಕಿನ ಚಿತ್ತಾರಕ್ಕೆ
ಕಲಸಿದ ಬಣ್ಣ ಹಸಿ ಇರುವಾಗ
ಹಿಂತಿರುಗಲೂ ಬಿಡದಂತೆ
ಜಗ್ಗಿ ಒಯ್ಯುವ
ನಿಷ್ಕರುಣದ ಮೂಲ ಯಾವುದೋ?



• ಸುಧಾ ಶರ್ಮಾ, ಚವತ್ತಿ



# ಕಿವುಡರಿಗೊಂದು ಕೃತಕ ಕಿವಿ!




"ಕೆಟ್ಟದ್ದನ್ನು ನೋಡಬಾರದು, ಕೆಟ್ಟದ್ದನ್ನು ಆಡಬಾರದು, ಕೆಟ್ಟದ್ದನ್ನು ಕೇಳಬಾರದು" ಗಾಂಧೀಜಿಯವರ ಮೂರು ಮಂಗಗಳ ಈ ನೀತಿಗಳಲ್ಲಿ ಕೊನೆಯದು ಕಿವುಡನಿಗೆ ಅನ್ವಯಿಸಲಾರದು. ಶ್ರವಣಾಂಗದಲ್ಲಿನ ನ್ಯೂನತೆಯಿಂದಾಗಿ ಕೆಟ್ಟ ಹಾಗೂ ಒಳ್ಳೇ ಶಬ್ದಗಳ ವ್ಯತ್ಯಾಸ ಇವನಿಗಿಲ್ಲ.

ಪಂಚೇಂದ್ರಿಯಗಳಲ್ಲೊಂದಾದ ಕಿವಿ ಶಬ್ದಗ್ರಹಣದ ಸಾಮರ್ಥ್ಯದಿಂದಾಗಿ ಮಾನವನ ಮುಖ್ಯ ಸಂಪರ್ಕ ಸಾಧನವಾಗಿದೆ. ಇದರಿಂದಾಗಿ ನಾವು ಸಂಗೀತ, ಮತ್ತೊಬ್ಬರ ಮಾತು, ಕರ್ಕಶವಾದ ಶಬ್ದಬೇಕಾದದ್ದು, ಬೇಡವಾದದ್ದು ಎಲ್ಲವನ್ನೂ ಕೇಳಬಹುದಾಗಿದೆ. ಶಬ್ದಗ್ರಹಣ ಶಕ್ತಿಯೇ ಇಲ್ಲದ ವ್ಯಕ್ತಿ ನಮ್ಮ ಯಾವುದೇ ಮಾತುಗಳಿಗೆ ಪ್ರತಿಕ್ರಯಿಸಲಾರ. ಇಂಥವ ಅರ್ಥಶಃ ಮೂಕನೇ ಆಗಿಬಿಡುತ್ತಾನೆ. ಇದೇ ಕಾರಣಕ್ಕೆ ಬಹುಶಃ ಮೂಕರೆಲ್ಲರೂ ಕಿವುಡರೂ ಆಗಿರುತ್ತಾರೆ.

ಕಿವಿಯನ್ನು ಹೊರಕಿವಿ, ಮಧ್ಯಕಿವಿ ಮತ್ತು ಒಳಕಿವಿ ಎಂದು ಮೂರು ಭಾಗವಾಗಿ ವಿಂಗಡಿಸಬಹುದು. ಹೊರಕಿವಿ ಮತ್ತು ಮಧ್ಯಕಿವಿಯಲ್ಲಿ ದೋಷವಿದ್ದರೆ (Conductive deafness) ಇದನ್ನು ಔಷಧಗಳಿಂದ ಅಥವಾ ಶಸ್ತ್ರಚಿಕಿತ್ಸೆಯಿಂದ ಸರಿಪಡಿಸಬಹುದು. ಒಳಕಿವಿಯಲ್ಲೇನಾ

• ರಾಜೇಶ್. ಎಸ್

ಆಧಾರ: 'ಹಿಂದೂ' ಪತ್ರಿಕೆಯಲ್ಲಿ ಡಾ. ಬಿ. ರಾಜಶೇಖರ್ ಹಾಗೂ ಡಾ. ಪಿ. ಝುಕಾರಿಯಾ ಅವರ ಲೇಖನ.

ದರೂ ದೋಷವಿದ್ದರೆ ಶಬ್ದ ಗ್ರಾಹಕ ನರಗಳು ಶಬ್ದ ಗ್ರಹಿಸಲು ಅಸಮರ್ಥವಾಗುತ್ತವೆ. ಇಂಥ ಕಿವುಡ ನಿಗೆ ಅವನ ಕಿವುಡುತನ ಯಾವ ಮಟ್ಟದಲ್ಲಿದೆ (Degree of deafness) ಎನ್ನುವುದರ ಮೇಲೆ ಶಬ್ದವರ್ಧಕ ಶ್ರವಣ ಸಾಧನ (Hearing aid)ವನ್ನು ಅಳವಡಿಸಿ ಕಿವುಡುತನವನ್ನು ಹೋಗಲಾಡಿಸಬಹುದು.

ಉಚ್ಚಮಟ್ಟದಲ್ಲಿರುವ ಕಿವುಡುತನಕ್ಕೆ ಈ ಶಬ್ದವರ್ಧಕ ಶ್ರವಣ ಸಾಧನದಿಂದ ಯಾವುದೇ ಉಪಯೋಗವಿಲ್ಲ. ಈ ದೋಷವಿದ್ದವ ಶಬ್ದಗ್ರಹಣದ ದೃಷ್ಟಿಯಿಂದ ಶಾಶ್ವತವಾಗಿ ವಿಕಲಾಂಗನಾಗುತ್ತಾನೆ. ಇಂಥವರಿಗಾಗಿಯೇ ಈಗ ಭಾರತಕ್ಕೆ ಕಾಲಿಟ್ಟಿದೆ "ಕಾಕ್ಲಿಯರ್ ಇಂಪ್ಲಾಂಟ್" ಎಂಬ ಶ್ರವಣ ಸಾಧನ. ಇದು ಔಷಧಗಳಿಂದ ಅಥವಾ ಶಸ್ತ್ರ ಚಿಕಿತ್ಸೆ (Tympano plasty)ಯಿಂದ ಗುಣಪಡಿಸಲಾಗದ ಕಿವುಡುತನವನ್ನು ನಿವಾರಿಸುವ ವಿದ್ಯುನ್ಮಾನ ಸಾಧನ. ಮಾಮೂಲು ಶ್ರವಣ ಸಾಧನ ಶಬ್ದವರ್ಧಿಸಿ ಕಿವಿ ಕೇಳುವಂತೆ ಮಾಡುತ್ತದೆ. ಆದರೆ ಈ ಸಾಧನ ಹಾಳಾದ ಒಳಕಿವಿ. ಭಾಗಗಳನ್ನು ಬಿಟ್ಟು ನೇರವಾಗಿ ಶಬ್ದಗ್ರಾಹಕ ನರವನ್ನು ಪ್ರಚೋದಿಸುವ ಮೂಲಕ ಕೇಳುವಂತೆ ಮಾಡುತ್ತದೆ. ಶಬ್ದಗ್ರಾಹಕ ನರವನ್ನು ವಿದ್ಯುತ್ ಸಂವೇದನೆಗೆ ಒಳಪಡಿಸಿದರೆ ಕಿವಿ ಕೇಳುವಂತೆ ಮಾಡಬಹುದೆನ್ನುವ ಸಂಶೋಧನೆ "ಕಾಕ್ಲಿಯರ್ ಇಂಪ್ಲಾಂಟ್"ನ ಆವಿಷ್ಕಾರಕ್ಕೆ ಕಾರಣವಾಯಿತು.

"ಕಾಕ್ಲಿಯ" ಎಂದರೆ ಕಿವಿಯ ಗೂಡು ಅಥವಾ ಒಳಕಿವಿ, ಕಾಕ್ಲಿಯರ್ ಎಂದರೆ ಚಮಚಿಯಾಕಾರವುಳ್ಳದ್ದು ಎಂದರ್ಥ. ಇಂಥ ಆಕಾರವುಳ್ಳ ಸಾಧನವನ್ನು ಕಿವಿಯೊಳಗಡೆ ಅಳವಡಿಸುವುದಕ್ಕೆ ಕಾಕ್ಲಿಯರ್ ಇಂಪ್ಲಾಂಟ್ ಎಂದು ಹೆಸರು. ಕಾಕ್ಲಿಯರ್ ಇಂಪ್ಲಾಂಟ್‌ನಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಮೊದಲನೇ ಭಾಗ ಕಾಕ್ಲಿಯ. ಇದನ್ನು ಕಿವಿಯೊಳಗಡೆ ಶಸ್ತ್ರಕ್ರಿಯೆ ಮೂಲಕ ಇರಿಸುವಂಥಾದ್ದು. ಇನ್ನೊಂದು ಭಾಗ ಕಿವಿಯ ಹೊರಗಡೆ ತಲೆಯ ಹಿಂಬದಿಯಲ್ಲಿ ಚಿತ್ರದಲ್ಲಿರು(ಚಿತ್ರ ೧)ವಂತೆ ಧರಿಸಿಕೊಳ್ಳುವಂಥಾದ್ದು.

ಹೊರಗಡೆಯಲ್ಲಿರುವ ಸಾಧನ ಶಬ್ದವನ್ನು ಗ್ರಹಿಸಿ ಒಳಗಡೆಯಿರುವ ಕಾಕ್ಲಿಯಾಕ್ಕೆ ರವಾನಿಸುತ್ತದೆ. ಕಾಕ್ಲಿಯಾದಲ್ಲಿ ೨೨ ಪ್ಲಾಟಿನಂ ಇಲೆಕ್ಟ್ರೋಡುಗಳು, ಒಂದು ಸಂವೇದಕ ಮತ್ತು ಒಂದು ಆಯಸ್ಕಾಂತ ಇವೆಲ್ಲ ಒಂದಕ್ಕೊಂದು ಸಂಬಂಧವಿರುವಂತೆ ಜೋಡಿಸಲ್ಪಟ್ಟಿರುತ್ತವೆ. ಹೊರಗಡೆ ಧರಿಸುವ ಸಾಧನದಲ್ಲಿ ಒಂದು ಮೈಕ್ರೋಫೋನ್, ಪ್ರೇಷಕ ಸುರುಳಿ (Transmitting coil) ಮತ್ತು ಒಂದು ಧ್ವನಿ ಪ್ರಕ್ರಿಯ ಘಟಕ (Speech processor)ವಿರುತ್ತದೆ. ಪ್ರೇಷಕ ಸುರುಳಿಗೆ ಹೊಂದಿಕೊಂಡು ಒಂದು ಸಣ್ಣ ಆಯಸ್ಕಾಂತ ಕಿವಿಯ ಒಳಗಡೆ ಕಾಕ್ಲಿಯಾದಲ್ಲಿರುವ ಆಯಸ್ಕಾಂತಕ್ಕೆ ಅನುಕೂಲವಾಗುವಂತೆ ತಲೆಯ ಹಿಂಭಾಗದಲ್ಲಿ ಕೂಡುತ್ತದೆ.

ಕಿವಿಯ ಹೊರಗಡೆ ಧರಿಸುವ ಸಾಧನದಲ್ಲಿರುವ ಮೈಕ್ರೋಫೋನ್ ಧ್ವನಿಯನ್ನು ಗ್ರಹಿಸಿ ಅದನ್ನು ವಾಹಕಗಳ ಮೂಲಕ ಒಂದು ಸಣ್ಣ ಕ್ಯಾಲ್ಕುಲೇಟರ್‌ನಂತಿರುವ ಧ್ವನಿ ಪ್ರಕ್ರಿಯಾ ಘಟಕಕ್ಕೆ ಕಳಿಸುತ್ತದೆ. ಈ ಘಟಕವು ಧ್ವನಿಯ ಸಾಮರ್ಥ್ಯವನ್ನು ವರ್ಧಿಸಿ ಅದನ್ನೊಂದು ಸಂಕೇತವನ್ನಾಗಿ ಪರಿವರ್ತಿಸುತ್ತದೆ. ಹೀಗೆ ಸಂಕೇತವಾಗಿ ಪರಿವರ್ತಿತವಾದ ಧ್ವನಿ ೨೨ ಇಲೆಕ್ಟ್ರೋಡುಗಳಲ್ಲಿ ಸಂಬಂಧಪಟ್ಟ ಇಲೆಕ್ಟ್ರೋಡನ್ನು ಮಾತ್ರ ಪ್ರಚೋದಿಸುತ್ತದೆ. ಪ್ರತಿಯೊಂದು ಇಲೆಕ್ಟ್ರೋಡಿಗೂ ಒಂದೊಂದು ಸಂಕೇತವಿರುತ್ತದೆ. ಒಟ್ಟಾರೆ ಹೇಳಬೇಕೆಂದರೆ ಧ್ವನಿ ಪ್ರಕ್ರಿಯಾ ಘಟಕವು ಒಂದು ಗಣಕ ಯಂತ್ರದಂತೆ ಕಾರ್ಯ ನಿರ್ವಹಿಸುತ್ತದೆ. ಯಾವ ಧ್ವನಿಗೆ ಯಾವ ಸಂಕೇತವನ್ನು ಉತ್ಪಾದಿಸಬೇಕು, ಆ ಸಂಕೇತದಿಂದ ಯಾವ ಇಲೆಕ್ಟ್ರೋಡನ್ನು ಪ್ರಚೋದಿಸಬೇಕು ಹಾಗೂ ಎಷ್ಟು ಶಕ್ತಿಯ ಸಂಕೇತವನ್ನು ಕಳಿಸಬೇಕು ಎಂಬುದನ್ನದು ನಿರ್ಧರಿಸಿ ಸಂಕೇತವನ್ನು ಕಿವಿಯ ಹೊರಭಾಗದಲ್ಲಿರುವ ಪ್ರೇಷಕ ಸುರುಳಿಗೆ ಕಳಿಸುತ್ತದೆ. ನಂತರ ಪ್ರೇಷಕ ಸುರುಳಿಯ) ಚರ್ಮದ ಮುಖಾಂತರ ಕಿವಿಯ ಒಳಗಡೆ ಇರುವ ಗ್ರಾಹಕಕ್ಕೆ ಸಂಕೇತವನ್ನು ರವಾನಿಸುತ್ತದೆ. ಗ್ರಾಹಕವು ಈ ಸಂಕೇತವನ್ನು ವಿದ್ಯುತ್ ತರಂಗವನ್ನಾಗಿ ಪರಿವರ್ತಿಸಿ ಕಾಕ್ಲಿಯಾದಲ್ಲಿರುವ ಇಲೆಕ್ಟ್ರೋಡನ್ನು ಪ್ರಚೋದಿಸುತ್ತದೆ. ಈ ಇಲೆಕ್ಟ್ರೋಡ್‌ಗಳನ್ನು ಧ್ವನಿಗ್ರಾಹಕ ನರಗಳಿಗೆ ಅಳವ

ಧಿಸಿರುವುದರಿಂದ ಇಲೆಕ್ಟ್ರೋಡ್ ಸಂವೇದನೆಗೊಳಗಾದಾಗಲೆಲ್ಲ ನರವು ಕೂಡ ಪ್ರಚೋದನೆಗೊಳಗಾಗುತ್ತದೆ ಹಾಗೂ ಮಿದುಳು ನರದ ಸಂವೇದನೆಯನ್ನು ಶಬ್ದವೆಂದು ಅರ್ಥೈಸುತ್ತದೆ.

ಹೀಗೆ ಕಿವುಡುತನ ದೂರವಾಗಿ ಕಿವಿ ಕೇಳತೊಡಗುತ್ತದೆ. ಇಷ್ಟೆಲ್ಲಾ ಕ್ರಿಯೆಗಳು ಕೆಲವೇ ಮಿಲಿಸೆಕಂಡ್‌ಗಳಲ್ಲಿ ಮುಗಿಯುತ್ತವೆ.

ಶ್ರೀ ಎಸ್.ಎಮ್. ಎಂಬ ೩೯ ವರ್ಷದ

ತಂತ್ರಜ್ಞ ಕಟ್ಟಡವೊಂದರ ಉಸ್ತುವಾರಿಯಲ್ಲಿದ್ದಾಗ ಸುಮಾರು ಹತ್ತು ಅಡಿ ಎತ್ತರದಿಂದ ಕೆಳಗೆ ಬಿದ್ದು ಗಾಯಗೊಂಡ. ಆಘಾತದಿಂದ ಚೇತರಿಸಿಕೊಂಡರೂ ಬರಬರುತ್ತಾ ತಲೆ ಸುತ್ತುವುದರ ಜೊತೆಗೆ ಕಿವಿ ಮಂದವಾಗತೊಡಗಿತು. ಕೊನೆಗೊಂದು ದಿನ ಆತ ಸಂಪೂರ್ಣವಾಗಿ ಕಿವುಡನಾದ. ವೈದ್ಯಕೀಯ ತಪಾಸಣೆಯ ನಂತರ ಆತನಿಗೆ ಔಷಧಗಳಿಂದಾಗಲಿ ಶಸ್ತ್ರ ಚಿಕಿತ್ಸೆಯಿಂದಾಗಲಿ ಅಥವಾ ಶಬ್ದವರ್ಧಕ ಶ್ರವಣ ಸಾಧನಗಳಿಂದಾಗಲಿ ಗುಣವಾಗದಂತಹ ಉಚ್ಚಮಟ್ಟದ ಕಿವುಡುತನವುಂಟಾಗಿದೆಯೆಂದು ತಿಳಿದುಬಂದಿತು. ಆಗ ಈತನ ನೆರವಿಗೆ ಬಂದಿದ್ದು ೨೨ ಇಲೆಕ್ಟ್ರೋಡುಗಳುಳ್ಳ ಕಾಕ್ಲಿಯರ್ ಇಂಪ್ಲಾಂಟ್. ಇದರ ಸಹಾಯದಿಂದ ಈತ "ನಿಶ್ಶಬ್ದದ ಜಗತ್ತು ಬಿಟ್ಟು ಶಬ್ದದ ಜಗತ್ತಿಗೆ" ಬಂದ ಮೊದಲ ಭಾರತೀಯನಾದ. ಇದಕ್ಕೂ ಮೊದಲು ಅಂದರೆ ೧೯೭೮ರಲ್ಲಿ ಮೆಲ್ಬೋರ್ನ್ ವಿಶ್ವವಿದ್ಯಾನಿಲಯದಲ್ಲಿ ಒಬ್ಬ ವ್ಯಕ್ತಿಗೆ ಪ್ರಥಮವಾಗಿ ಕಾಕ್ಲಿಯರ್ ಇಂಪ್ಲಾಂಟ್ ಅಳವಡಿಸಲಾಗಿತ್ತು. ಆತನಿಗೆ ಮೊದಲು ಶಬ್ದಗ್ರಹಣ ಶಕ್ತಿಯಿದ್ದು ನಂತರ ಕಿವುಡನಾಗಿದ್ದ (Post lingual deafness) ಇವನ ಮೇಲೆ ದೊರಕಿದ ಯಶಸ್ಸಿನಿಂದಾಗಿ ಕಾಕ್ಲಿಯರ್ ಇಂಪ್ಲಾಂಟ್ ಕಿವುಡರ ಕೋಟೆಗೆ ಲಗ್ಗೆಯಿಡಲು ಹೆಬ್ಬಾಗಿಲನ್ನು ತೆರೆದಂತಾಯಿತು.

ತದನಂತರ ಒಂದು ಇಲೆಕ್ಟ್ರೋಡಿನಿಂದ ಹಿಡಿದು ೨೨ ಇಲೆಕ್ಟ್ರೋಡುಗಳಿರುವ ವಿವಿಧ ಶ್ರೇಣಿಗಳ ಕಾಕ್ಲಿಯರ್ ಇಂಪ್ಲಾಂಟುಗಳು ಸುಮಾರು ೨೫ ವರ್ಷಗಳಿಂದ ಕಿವುಡರ ಲೋಕವನ್ನು ಪ್ರವೇಶಿಸಿವೆ. ಈಗಿರುವ ೨೨ ಇಲೆಕ್ಟ್ರೋಡುಗಳ ಇಂಪ್ಲಾಂಟನ್ನು ತಯಾರಿಸಿದವರು ಮೆಲ್ಬೋರ್ನ್‌ನ ಪ್ರೊಫೆಸರ್. ಗ್ರೇಮ್ ಕ್ಲಾರ್ಕ್. ಇದನ್ನು ತಯಾರಿಸಿ ಮಾರಾಟ ಮಾಡುತ್ತಿರುವ ಆಸ್ಟ್ರೇಲಿಯಾದ ಕಾಕ್ಲಿಯರ್ ಪಾರ್ಟ ಲಿಮಿಟೆಡ್ ಕಂಪನಿಗೆ ಅಮೆರಿಕದ ಆಹಾರ ಮತ್ತು ಔಷಧಗಳ ನಿಗಮದಿಂದ ಮಾನ್ಯತೆ ದೊರಕಿದೆ.

ಕಾಕ್ಲಿಯರ್ ಇಂಪ್ಲಾಂಟಿನಿಂದ ಲಾಭ ಪಡೆಯಬಹುದಾದ ವ್ಯಕ್ತಿಗೆ-

೧) ಬೇರಾವುದೇ ಶ್ರವಣ ಸಾಧನಗಳಿಂದ ಉಪಯೋಗವಿಲ್ಲವೆಂಬುದು ಸಿದ್ಧಪಟ್ಟಿರಬೇಕು.

೨) ಉಚ್ಚ ಮಟ್ಟದ ಕಿವುಡು ಅವನಿಗಿದೆಯೆಂದು ಖಚಿತಪಟ್ಟಿರಬೇಕು.

೩) ಕಾಕ್ಲಿಯವನ್ನು ಅಳವಡಿಸಲು ಶಸ್ತ್ರಕ್ರಿಯೆ ಮಾಡಿದರೆ ಅಡ್ಡ ಪರಿಣಾಮಕ್ಕೆ ತುತ್ತಾಗದಂತಹ ದೇಹ ಪರಿಸ್ಥಿತಿಯುಳ್ಳವನಾಗಿರಬೇಕು.

೪) ಹುಟ್ಟು ಕಿವುಡರಾದ ಮಕ್ಕಳಿಗೆ ಕಾಕ್ಲಿಯಾ ಅಳವಡಿಸಿದ ನಂತರ ಅವರು ಮಾತು ಕಲಿಯಲು ಹಾಗೂ ಕೇಳಿದ ಶಬ್ದವನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವಂತಹ ಕಲಿಕಾ ಕೇಂದ್ರಕ್ಕೆ ದಾಖಲು ಮಾಡಲನುಕೂಲವಿರಬೇಕು.

ಕಾಕ್ಲಿಯರ್ ಇಂಪ್ಲಾಂಟಿನ ಯಶಸ್ಸು ಮುಖ್ಯವಾಗಿ ಈ ಕೆಲವು ಗುಣಗಳ ಮೇಲೆ ಅವಲಂಬಿತವಾಗಿದೆ:

೧) ಉಚ್ಚಮಟ್ಟದ ಕಿವುಡುತನ ದೀರ್ಘಾವಧಿಯದೆ ಅಥವಾ ಅಲ್ಪಕಾಲದಿಂದ ಇರುವಂಥಾದ್ದೆ ಎನ್ನುವುದು ಮುಖ್ಯ. ಏಕೆಂದರೆ ಅಲ್ಪಾವಧಿಯಿಂದ ಕಿವುಡುತನವಿರುವ ವ್ಯಕ್ತಿಗೆ ಸ್ವಲ್ಪವಾದರೂ ಶಬ್ದಗಳ ಪರಿಜ್ಞಾನವಿರುತ್ತದೆ.

೨) ಮೊದಲು ಶಬ್ದ ಜ್ಞಾನವಿದ್ದು ನಂತರ ಕಿವುಡರಾದವರಿಗೆ (Post lingual deafness) ಈ ವಿಧಾನ ಹೆಚ್ಚು ಉಪಯೋಗವಾಗುತ್ತದೆ.

೩) ಹುಟ್ಟು ಕಿವುಡರಿಗೆ ಆದಷ್ಟು ಬೇಗ ಅವರ ಬಾಲ್ಯಾವಸ್ಥೆಯಲ್ಲಿಯೇ ಶಸ್ತ್ರಕ್ರಿಯೆ ಮಾಡಿದರೆ ಮಾತ್ರ ಹೆಚ್ಚು ಉಪಯೋಗವಾಗುತ್ತದೆ.

೪) ಸುಸ್ಥಿತಿಯಲ್ಲಿರುವ ಧ್ವನಿಗ್ರಾಹಕ ನರಗಳ ಸಂಖ್ಯೆ.

೫) ಶಸ್ತ್ರಕ್ರಿಯೆಯ ನಂತರ ಕಿವಿತಜ್ಞರ ಹಾಗೂ ಕುಟುಂಬದವರ ಸಹಕಾರ.

ಕಾಕ್ಲಿಯರ್ ಇಂಪ್ಲಾಂಟ್ ಮೂಲಕ ಗ್ರಹಿಸಿದ ಧ್ವನಿ ಮೂಲ ಧ್ವನಿಯಂತಿರದೆ ಗಣಕ ಯಂತ್ರದಿಂದ ಉಂಟುಮಾಡಿದ ಧ್ವನಿಯಂತಿರುವುದರಿಂದ ಕಾಕ್ಲಿಯರ್ ಇಂಪ್ಲಾಂಟ್‌ನಿಂದಾಗಿ ಕಿವುಡು ನಿವಾರಿಸಲ್ಪಟ್ಟರೂ ಸಹಜ ಧ್ವನಿಯನ್ನು ಆಲಿಸಲು ಸಾಧ್ಯವಿಲ್ಲ.

ಅಂದರೆ ಇಂಪ್ಲಾಂಟ್ ನಂತರ ವ್ಯಕ್ತಿ ಸಾಧ್ಯವಾದಷ್ಟು ಬೇರೊಬ್ಬರ ತುಟಿ ಚಲನೆಯನ್ನು ಗ್ರಹಿಸಿ




(Lip reading) ಪದಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದರೆ ಆತನಿಗೆ ಬೇರೆಯವರು ನುಡಿಯುವ ಪದಗಳನ್ನು ತಿಳಿದುಕೊಳ್ಳಲು ಸಾಧ್ಯ.

ಕಾಕ್ಲಿಯರ್ ಇಂಪ್ಲಾಂಟನ್ನು ಅಳವಡಿಸಿಕೊಳ್ಳುವ ವ್ಯಕ್ತಿಯನ್ನು ಮೊದಲು ಆಮೂಲಾಗ್ರವಾಗಿ ತಪಾಸಿಸಲಾಗುತ್ತದೆ. ಆತನಿಗೆ ಉಚ್ಚಮಟ್ಟದ ಕಿವುಡುತನವಿದೆಯೆಂದು ಖಚಿತಪಡಿಸಿಕೊಳ್ಳಲು ಎಲ್ಲಾ ಬಗೆಯ ಶ್ರೇಷ್ಠ ದರ್ಜೆಯ ಶ್ರವಣಸಾಧನಗಳಿಂದ ಪರೀಕ್ಷಿಸಲಾಗುತ್ತದೆ. ಸುಮಾರು ಆರು ವಾರಗಳವರೆಗೆ ಈ ಶ್ರವಣ ಸಾಧನಗಳಿಂದ ರೋಗಿಗೆ ಉಪಯೋಗವಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲಾಗುವುದು. ಕಿವಿಯೊಳಗಡೆ ಕಾಕ್ಲಿಯಾವನ್ನು ಅಳವಡಿಸುವುದರಿಂದ ರೋಗಿಗೆ ಯಾವುದೇ ರೀತಿಯ ಅಪಾಯವಿಲ್ಲವೆಂದು ಮನಗಂಡ ನಂತರವೇ ವ್ಯಕ್ತಿಯನ್ನು ಕಾಕ್ಲಿಯರ್ ಇಂಪ್ಲಾಂಟ್‌ಗೆ ಆಯ್ಕೆ ಮಾಡಲಾಗುವುದು. ಶಸ್ತ್ರಕ್ರಿಯೆ ನಡೆಸಿ ಇಂಪ್ಲಾಂಟನ್ನು ಅಳವಡಿಸಿದ ನಂತರ ಸುಮಾರು ಮೂರರಿಂದ ಐದು ವಾರಗಳೊಳಗೆ ಗಾಯ ಮಾಯುತ್ತದೆ.

ಇಷ್ಟಾದ ನಂತರ ಈ ಉಪಕರಣವನ್ನು ಬಳಕೆಗೆ ಅಣಿಗೊಳಿಸಲಾಗುವುದು. ಅಂದರೆ ಕಿವಿಯ ಹೊರಗಡೆ ಧರಿಸಬೇಕಾದ ಭಾಗವನ್ನು ತಲೆಯ ಹಿಂಬದಿಯಲ್ಲಿ ಚಿತ್ರದಲ್ಲಿ (ಚಿತ್ರ-೧) ತೋರಿಸಿರುವಂತೆ ಕೂಡಿಸಲಾಗುವುದು. ನಂತರ ಧ್ವನಿ ಪ್ರಕ್ರಿಯಾ ಘಟಕವನ್ನು ಅನುಕೂಲಕ್ಕೆ ತಕ್ಕಂತೆ ಪ್ರೋಗ್ರಾಮ್ ಮಾಡಲಾಗುವುದು. ಏಕೆಂದರೆ ಕಿವಿ ಕೇಳುವಂತೆ ಮಾಡುವ ಪ್ರತಿಯೊಂದು ಇಲೆಕ್ಟ್ರೋಡಿಗೆ ಬೇರೆ ಬೇರೆ ಸಾಮರ್ಥ್ಯದ ವಿದ್ಯುತ್ ಬೇಕು. ಮತ್ತು ಇದು ರೋಗಿಯಿಂದ ರೋಗಿಗೆ ಬದಲಾಗುತ್ತದೆ. ಈ ಪ್ರೋಗ್ರಾಮಿಂಗನ್ನು ಮ್ಯಾಪ್ (Map) ಅಥವಾ ಮ್ಯಾಪಿಂಗ್ ಎನ್ನುತ್ತಾರೆ.

ಇದನ್ನು ವಿಶೇಷ ತರಬೇತಿ ಪಡೆದ ಧ್ವನಿತಜ್ಞರು ಮಾತ್ರ ಮಾಡುತ್ತಾರೆ. ಧ್ವನಿತಜ್ಞರು ಮ್ಯಾಪಿಂಗ್ ಮಾಡುವಾಗ ಪ್ರತಿಯೊಂದು ಇಲೆಕ್ಟ್ರೋಡಿಗೂ T-Level ಮತ್ತು C-Level ಎಂಬ ಎರಡು ಮಾಪನವನ್ನು ಗುರುತಿಸುತ್ತಾರೆ. ಟಿ-ಲೆವೆಲ್

ಎಂದರೆ ಧ್ವನಿ ಗ್ರಾಹಕ ನರಗಳಿಗೆ ಧ್ವನಿ ಗುರುತಿಸಲು ಬೇಕಾಗುವ ಕನಿಷ್ಠ ವಿದ್ಯುತ್ ಸಾಮರ್ಥ್ಯ. ಸಿ-ಲೆವೆಲ್ ಎಂದರೆ ರೋಗಿಯ ಧ್ವನಿಗ್ರಾಹಕ ನರಗಳಿಗೆ ಕಿರಿಕಿರಿಯಾಗದಂತೆ ಇಲೆಕ್ಟ್ರೋಡಿಗೆ ಕೊಡಬಹುದಾದ ಗರಿಷ್ಠಮಟ್ಟದ ವಿದ್ಯುತ್ ಸಾಮರ್ಥ್ಯ. ನಂತರ ಎಲ್ಲ ಇಲೆಕ್ಟ್ರೋಡುಗಳಿಗೆ ರೋಗಿ ತಾಳಿಕೊಳ್ಳಬಹುದಾದ ಧ್ವನಿಯ ತೀವ್ರತೆಯನ್ನು (Balancing loudness) ಸಮವಾಗಿ ವಿಭಾಗಿಸಲಾಗುತ್ತದೆ. ಇಷ್ಟೆಲ್ಲ ವಿವರಗಳನ್ನೊಳಗೊಂಡ ಮ್ಯಾಪ್‌ನ ಮುಖ್ಯ ಕೆಲಸವೆಂದರೆ ಧ್ವನಿ ಪ್ರಕ್ರಿಯಾ ಘಟಕಕ್ಕೆ ಧ್ವನಿಯನ್ನು ಸಂಕೇತವಾಗಿ ಪರಿವರ್ತಿಸುವಲ್ಲಿ ಸೂಕ್ತ ಸಹಾಯ ನೀಡುವುದು. ಮ್ಯಾಪನ್ನು ಧ್ವನಿ ಪ್ರಕ್ರಿಯಾ ಘಟಕದ ಜ್ಞಾಪಕ ಕೋಶ (Memory cells)ದಲ್ಲಿ ಶೇಖರಿಸಲಾಗುವುದು. ಧ್ವನಿ ತಜ್ಞರು ಒಬ್ಬ ರೋಗಿಗೆ ಬೇರೆ ಬೇರೆ ಮ್ಯಾಪನ್ನು ಬರೆದು ಆತನಿಗೆ ಸೂಕ್ತವಾಗುವಂಥ ಮ್ಯಾಪನ್ನು ನಿರ್ಧರಿಸುತ್ತಾರೆ. ಇಂಪ್ಲಾಂಟ ಉಪಯೋಗಕ್ಕೆ ಸಂಪೂರ್ಣವಾಗಿ ಸಿದ್ಧವಾದ ನಂತರ ಕಿವುಡ ಇಂಪ್ಲಾಂಟಿನಿಂದ ಕೇಳುವ ಶಬ್ದ ಸಹಜ ವ್ಯಕ್ತಿಯ ಶಬ್ದಗ್ರಹಣಕ್ಕಿಂತ ಕೊಂಚ ಭಿನ್ನವಾಗಿರುತ್ತದೆ. ಹೀಗಾಗಿ ರೋಗಿಗೆ ಇಂಪ್ಲಾಂಟಿನ ನಂತರ ಶಬ್ದ ಗ್ರಹಿಸಲು ತರಬೇತಿ ನೀಡಬೇಕಾಗುತ್ತದೆ. ಈ ತರಬೇತಿಯಲ್ಲಿ ಮೊದಲು ನಮ್ಮ ಪರಿಸರದಲ್ಲುಂಟಾಗುವ ವಿವಿಧ ಶಬ್ದಗಳ ಪರಿಚಯ ಮಾಡಿಕೊಡಲಾಗುವುದು ನಂತರ ಸಂಭಾಷಣೆಯನ್ನು ಗುರುತಿಸುವಂತೆ ಈ ತರಬೇತಿಯನ್ನು ತೀವ್ರಗೊಳಿಸಲಾಗುವುದು.

ಪ್ರಪಂಚದ ವಿವಿಧೆಡೆಗಳಲ್ಲಿ ಸುಮಾರು ೧೦,೦೦೦ ಜನರು ಈಗಾಗಲೇ ಕಾಕ್ಲಿಯರ್ ಇಂಪ್ಲಾಂಟಿನಿಂದ ಲಾಭ ಪಡೆದಿದ್ದಾರೆ. ಇದರಿಂದಾಗಿ ಕಿವುಡರು ಇನ್ನು ವಿಕಲಾಂಗರಲ್ಲ. ಅವರು ಕೂಡ ಸಮಾಜದ ಎಲ್ಲಾ ಸ್ತರಗಳಲ್ಲಿ ಹೆಚ್ಚು ಹೆಚ್ಚಾಗಿ ಆತ್ಮ ವಿಶ್ವಾಸದಿಂದ ಪಾಲ್ಗೊಳ್ಳುತ್ತಿದ್ದಾರೆ.

ಕೆಲವನ್ನು ಪಡೆಯಲು ಕೆಲವನ್ನು ಕಳೆದುಕೊಳ್ಳಬೇಕೆನ್ನುತ್ತದೆ ಒಂದು ಆಡುನುಡಿ. ಕಾಕ್ಲಿಯರ್ ಇಂಪ್ಲಾಂಟ್ ಪಡೆಯಲು ಲಕ್ಷಗಟ್ಟಲೇ ದುಡ್ಡು ಕಳೆದುಕೊಳ್ಳಬೇಕು. ಸಿದ್ಧವಿದ್ದೀರಾ?






• ಆದಿಕೇಶವ

ಅಂದಿನ ಆಟ !
ಇಂದಿನ ನೋಟ !

# ಖಾದಿರ್ ಕೈಚಳಕಕ್ಕೆ ನಲುಗಿದ ಇಂಗ್ಲೆಂಡ್

ಪಾಕಿಸ್ತಾನ ಪ್ರವಾಸ ಕೈಗೊಳ್ಳುವ ಮುನ್ನ ತಾಯ್ನಾಡಿನಲ್ಲಿ ಬದ್ಧ ವೈರಿ ಆಸ್ಟ್ರೇಲಿಯಾವನ್ನು ಮಣಿಸಿ ಆಷಸ್‌ನ್ನು ಮರಳಿ ಗೆದ್ದಿದ್ದ ಇಂಗ್ಲೆಂಡ್ ಅದೇ ಹುರುಪಿನಲ್ಲಿ ಮತ್ತೊಂದು ಸರಣಿ ಜಯ ಪಡೆಯುವ ಗುರಿಯೊಂದಿಗೆ ಲಾಹೋರ್‌ಗೆ ಬಂದಿಳಿದಿತ್ತು.

ಆಸ್ಟ್ರೇಲಿಯದ ವಿರುದ್ಧದ ಕಡೆಯ ಟೆಸ್ಟ್‌ನಲ್ಲಿ ಶತಕ ಬಾರಿಸಿದ್ದ ಗ್ರಾಹಂ ಗೂಚ್ ಪಾಕಿಸ್ತಾನಿಯರಿಗೆ ಸಹಜವಾಗಿಯೇ ಭೀತಿ ಮೂಡಿಸಿದ್ದ. ಆದರೆ ಎಂಥ ಅಪ್ರತಿಮ ಬ್ಯಾಟ್ಸ್‌ಮನ್‌ನೂ ಒಮ್ಮೊಮ್ಮೆ ವಿಫಲನಾಗುವುದುಂಟು ಎಂಬ ನಂಬಿಕೆಯಿಂದ ಅತಿಥೇಯ ಪಾಕ್ ಸಹ ಅವಕಾಶ ಸಿಕ್ಕರೆ ತಿರುಗೇಟು ನೀಡಲು ಸಿದ್ಧವಾಗಿಯೇ ನಿಂತಿತ್ತು.

## ಮೈದಾನದಲ್ಲಿ

ಬ್ಯಾಟಿಂಗ್ ಮಾಡಲು ಕಷ್ಟವಾಗಿದ್ದ ಗಡ್ಡಾಫಿ ಮೈದಾನದಲ್ಲಿ ಟಾಸ್ ಗೆದ್ದು ಬ್ಯಾಟ್‌ನೊಂದಿಗೆ ಇಳಿದ ಮೈಕ್ ಗ್ಯಾಟಿಂಗ್ ನಾಯಕತ್ವದ ಇಂಗ್ಲೆಂಡ್‌ಗೆ ಆರಂಭದಲ್ಲೇ ಶನಿರಾಯ ಬೆನ್ನುಹತ್ತಿದ. ತವರಿನಲ್ಲಿ ಕಾಂಗರೂಗಳ ಮೇಲೆ ಅಟ್ಟಹಾಸ ಮೆರೆದಿದ್ದ ಗೂಚ್ (೧೨) ಅಬ್ದುಲ್ ಖಾದಿರ್‌ರ ಸ್ಪಿನ್ ಮೋಡಿಗೆ ಸ್ಟಂಪ್ ಕಳೆದುಕೊಂಡು ತಂಡದ ಪತನಕ್ಕೆ ಚಾಲನೆ ಕೊಟ್ಟ.

ಮುಂದೆ ಸ್ಕೋರು ೩೬ ದಾಟಿರಲಿಲ್ಲ. ನಾಯಕ ಗ್ಯಾಟಿಂಗ್ (೦) ಸೇರಿದಂತೆ ಇಬ್ಬರು ಖಾದಿರ್‌ನ ಕೈ ಚಳಕಕ್ಕೆ ಬಲಿಯಾಗಿದ್ದರು. ಬೃಹತ್ ಮೊತ್ತ

## ಪಾಕಿಸ್ತಾನ-ಇಂಗ್ಲೆಂಡ್ ಪ್ರಥಮ ಟೆಸ್ಟ್

ಸ್ಥಳ: ಗಡ್ಡಾಫಿ ಮೈದಾನ, ಲಾಹೋರ
ದಿನಾಂಕ: ೧೯೮೭-೮೮ ನವೆಂಬರ್ ೨೫, ೨೬, ೨೭, ೨೮

ಪೇರಿಸುವ ಗುರಿ ಹಾಕಿಕೊಂಡಿದ್ದ ಗ್ಯಾಟಿಂಗ್‌ಗೆ ಇದರಿಂದ ಭಾರೀ ಮುಖಭಂಗವಾಯಿತು.

ಭೋಜನ ವಿರಾಮದ ವೇಳೆಗೆ ಇಂಗ್ಲೆಂಡ್‌ನ ನಾಲ್ವರು ಬ್ಯಾಟ್ಸ್‌ಮನ್‌ಗಳು ಪೆವಿಲಿಯನ್ ಕಂಡಿದ್ದರೆ ಸ್ಕೋರು ಬರೀ ಅರ್ಧ ಶತಕವಾಗಿದೆ ಎಂದು ತೋರಿಸುತ್ತಿತ್ತು. ಆದರೆ ಖಾದಿರ್‌ನ ಮೋಸದ ಎಲ್.ಬಿ.ಡಬ್ಲ್ಯೂ. ಜಾಲಕ್ಕೆ ಗ್ಯಾಟಿಂಗ್ ಬಲಿ ಬಿದ್ದಿದ್ದು ಎದ್ದು ಕಂಡಿತಾದರೂ ಅಂಪೈರ್‌ನ ತೀರ್ಪಿನ ಮುಂದೆ ಪ್ರತಿಭಟನೆಗೆ ಪ್ರಯೋಜನ ದೊರೆಯದೇ ಹೋದದ್ದು ಇಂಗ್ಲೆಂಡ್‌ಗೆ ನಿರಾಶೆ ಉಂಟುಮಾಡಿತು.

ಒಂದೆಡೆ ಅಂಪೈರ್‌ನ ಕೃಪಾಕಟಾಕ್ಷದಿಂದ ಖಾದಿರ್ ಎದುರಾಳಿಗೆ ಸಿಂಹ ಸ್ವಪ್ನವಾಗಿದ್ದರೆ, ಮತ್ತೊಂದು ತುದಿಯಲ್ಲಿ ಆರಂಭಿಕ ಬ್ಯಾಟ್ಸ್‌ಮನ್ ಕ್ರಿಸ್ ಬ್ರಾಡ್ (೪೧) ಅಸಹಾಯಕನಂತೆ ತಮ್ಮವರ ನಿರ್ಗಮನವನ್ನು ನೋಡುತ್ತ ನಿಂತಿದ್ದ.

ಇಂಗ್ಲೆಂಡ್‌ನ ಎಂಟು ಹುದ್ದರಿಗಳು ಕೇವಲ ೯೪ ರನ್‌ಗಳಿಗೆ ಪತನಗೊಂಡಿದ್ದಾಗ ಪ್ರೇಕ್ಷಕ ಗಣದಲ್ಲಿ ಒಂದೇ ತರ್ಕ. ಇವರು ಶತಕ ದಾಟುವರೇ? ಅಥವಾ ಖಾದಿರ್‌ನ ಜಾಲಕ್ಕೆ ಬೀಳುವರೇ? ಎಂಬುದು. ಆಗ ಬಂದ ನೀಲ್ ಫಾಸ್ಟರ್ (೩೯) ಮತ್ತು ಬ್ರೂಸ್ ಫ್ರೆಂಚ್ (ಔಟಾಗದೆ ೩೮) ಆತಿಥೇಯರ ಬೌಲಿಂಗ್ ಆರ್ಭಟವನ್ನು ಸಮರ್ಥವಾಗಿ ಎದುರಿಸಿ ತಮ್ಮ ತಂಡದ ಗೌರವವನ್ನು ಸ್ವಲ್ಪ ಮಟ್ಟಿಗಾದರೂ ಕಾಪಾಡಿಕೊಂಡರು. ತಂಡದ ಪೂರ್ಣ ಆಟ ಮುಗಿದಾಗ ಸ್ಕೋರು ಕೇವಲ ೧೭೫ ಆಗಿತ್ತು.

ಪಂದ್ಯ ಆರಂಭಗೊಂಡ ೪೫ ನಿಮಿಷದ ನಂತರ ದಾಳಿಗಿಳಿದಿದ್ದ ಅಬ್ದುಲ್ ಖಾದಿರ್ ಪ್ರವಾಸಿ ತಂಡಕ್ಕೆ ಉಸಿರಾಡಲೂ ಬಿಡದೇ ಬರೀ ೫೬ ರನ್ ನೀಡಿ ಒಂಭತ್ತು ವಿಕೆಟ್‌ಗಳನ್ನು ಹೆಕ್ಕಿದ. ಇವುಗಳಲ್ಲಿ ನಾಲ್ಕು ಎಲ್.ಬಿ.ಡಬ್ಲ್ಯೂ. ರೂಪದಲ್ಲಿ ಬಂದಿದ್ದವು. ಡೇವಿಡ್ ಕ್ಯಾಪೆಲ್ ಒಂದೂ ರನ್ ಗಳಿಸದಿದ್ದರೂ ಖಾದಿರ್‌ನ ವಂಚನೆಯ ಜಾಲಕ್ಕೆ ಬೀಳಲಿಲ್ಲವಲ್ಲ ಎಂಬ ಸಮಾಧಾನಪಟ್ಟ. ಆದರೆ ತೌಸಿಫ್ ಅಹ್ಮದ್ ಕ್ಯಾಚ್ ಮೂಲಕ ಕ್ಯಾಪೆಲ್‌ನ ವಿಕೆಟ್ ಪಡೆದಿದ್ದು ಕೂಡ ವಿವಾದಾಸ್ಪದವಾಗಿಯೇ ಇತ್ತು. ಆಗಲೂ ಇಂಗ್ಲೆಂಡಿನ ಪ್ರತಿಭಟನೆ ನಿರರ್ಥಕವಾಯಿತು.

ಎರಡನೆ ದಿನದ ಆಟ ಮುಗಿದಾಗ ಪಾಕಿಸ್ತಾನ ನಾಲ್ಕು ವಿಕೆಟ್‌ಗಳಿಗೆ ೨೭೨ ರನ್ ಗಳಿಸಿ ಸಾಕಷ್ಟು ಸುಭದ್ರ ಸ್ಥಿತಿಯಲ್ಲಿದ್ದು ಭಾರೀ ಮುನ್ನಡೆ ಗಳಿಸುವ ಸೂಚನೆ ನೀಡಿತ್ತು.

ಸಡಿಲ ಮತ್ತು ಎರ್ರಾಬಿರ್ರಿ ಬೌಲಿಂಗ್‌ನ ಪ್ರಯೋಜನ ಪಡೆದುಕೊಂಡ ಮುದಸ್ಸರ್ ನಜರ್ (೧೨೦) ಮತ್ತು ನಾಯಕ ಜಾವೇದ್ ಮಿಯಾಂದಾದ್ (೬೫) ಮೂರನೇ ಹುದ್ದರಿ ಜೊತೆಯಾಟದಲ್ಲಿ (೧೪೨) ರನ್ ಸೇರಿಸಿ ತಂಡಕ್ಕೆ ಉತ್ತಮ



ಖಾದಿರ್



**ಮೈಕ್ ಗ್ಯಾಟಿಂಗ್**

ಲೀಡ್ ತಂದುಕೊಟ್ಟರು.

ಪಂದ್ಯದ ಮೂರನೇ ದಿನ. ತಮ್ಮ ಕಳಪೆ ಪ್ರದರ್ಶನವನ್ನು ಸ್ವಲ್ಪ ಮಟ್ಟಿಗೆ ಸುಧಾರಿಸಿಕೊಂಡ ಇಂಗ್ಲೆಂಡ್ ಪಾಕಿಸ್ತಾನದ ಕಡೆಯ ಆರು ಹುದ್ದರಿಗಳನ್ನು ೧೨೦ ರನ್‌ಗೆ ಉರುಳಿಸಿದರು. ಬೌಲಿಂಗ್‌ನಲ್ಲಿ ಪ್ರವಾಸಿಗರ ಒಂಭತ್ತು ಮಂದಿಯನ್ನು ಬಲಿಹಾಕಿದ್ದ ಅಬ್ದುಲ್ ಖಾದಿರ್ ಬ್ಯಾಟಿಂಗ್‌ನಲ್ಲಿ ಮಿಂಚಿ ಕುಕ್‌ಗೆ ವಿಕೆಟ್ ಒಪ್ಪಿಸುವ ಮುನ್ನ ೩೮ ರನ್ ಹೊಡೆದ. ಇವನಿಗೆ ಉತ್ತಮ ಕಂಪನಿ ನೀಡಿದ ವೇಗದ ಬೌಲರ್ ವಸೀಂ ಅಕ್ರಂ ತನ್ನ ಖಾತೆಗೆ ೪೦ ರನ್ ಸೇರಿಸಿಕೊಂಡಿದ್ದ.

ಇಂಗ್ಲೆಂಡ್ ಆತಿಥೇಯರನ್ನು ಪೂರ್ಣವಾಗಿ ಕೆಡವಿದಾಗ ಸ್ಕೋರು ೩೯೨ ರನ್ ತೋರಿಸುತ್ತಿತ್ತು. ಯಾವೊಬ್ಬ ಬೌಲರನ ಚಮತ್ಕಾರ ಕಾಣಬರದೆ ಇಂಗ್ಲೆಂಡ್ ನಾಯಕ ಗ್ಯಾಟಿಂಗ್ ತುಂಬಾ ಬೇಜಾರು ಪಟ್ಟ.

ಆದರೆ ಈ ಆಟದಲ್ಲಿ ಅಬ್ದುಲ್ ಖಾದಿರ್, ಮೈಕ್ ಗ್ಯಾಟಿಂಗ್‌ನೊಂದಿಗೆ ಜಗಳಕ್ಕಿಳಿದಿದ್ದು ಅವನ ಮುಂಗೋಪಿತನ, ಅಸಭ್ಯ ವರ್ತನೆ ಪಾಕ್ ಕ್ರಿಕೆಟ್ ಅಭಿಮಾನಿಗಳಿಗೂ ಬೇಸರ ತರಿಸಿತು. ನೀಲ್ ಕುಕ್ ಬೌಲಿಂಗ್‌ನಲ್ಲಿ ಫ್ರೆಂಚ್ ಸ್ಟಂಪ್ ಮಾಡಿದಾಗ ಅಂಪೈರ್ ಖಾದಿರ್‌ಗೆ ಔಟೆಂದು ತೀರ್ಪು ನೀಡಿದ್ದ. ಆದರೆ ಇದರಿಂದ ಸಿಟ್ಟು ಬಂದ ಖಾದಿರ್ ಅಂಪೈರ್ ಹಾಗೂ ಗ್ಯಾಟಿಂಗ್ ಜತೆ ವಾಗ್ವಾದಕ್ಕಿಳಿದಿದ್ದ. ಏನೇ ಆದರೂ ಅಂಪೈರ್ ತೀರ್ಮಾನ ಬದಲಾಗಲಿಲ್ಲವಲ್ಲ ಎಂದು ಇಂಗ್ಲೆಂಡ್ ಸಮಾಧಾನ ಪಟ್ಟಿತು.

ಇಂಗ್ಲೆಂಡಿನ ಎರಡನೇ ಸರದಿ. ೨೧೭ ರನ್‌ಗಳಿಂದ ಹಿಂದೆ ಉಳಿದಿದ್ದ ಇಂಗ್ಲೆಂಡ್ ಪರಿಸ್ಥಿತಿ ಇಲ್ಲಿಯೂ ಸುಧಾರಿಸಲಿಲ್ಲ. ವಿವಾದಾಸ್ಪದ ತೀರ್ಪಿಗೆ ಬಲಿಯಾಗಿ ಜಗಳ ಆಡಿದ್ದ ಖಾದಿರ್ ಪ್ರವಾಸಿಗರಿಗೆ ಮತ್ತೆ ಮಾರಕವಾಗಿ ಕಂಡ. ಇವನ ಅಟ್ಟಹಾಸದಿಂದ ಸ್ಫೂರ್ತಿಗೊಂಡ ಖಾಸಿಮ್ ತಾನೇನು ಕಡಿಮೆ ಇಲ್ಲ ಎನ್ನುವಂತೆ ಆರಂಭದ ಜೋಡಿ ಗೂಚ್ (೧೫) ಮತ್ತು ಬ್ರಾಡ್ (೧೩) ವಿಕೆಟ್‌ಗಳನ್ನು ಕಬಳಿಸಿ ಗ್ಯಾಟಿಂಗ್‌ಗೆ ಪರಿಹಾರ ಕಾಣದಂತಹ ಚಿಂತೆ ಮೂಡಿಸಿದ. ಇವರಿಬ್ಬರ ಕ್ಯಾಚ್‌ಗಳನ್ನು ವಿಕೆಟ್ ಹಿಂದೆ ಬಕಪಕ್ಷಿಯಂತೆ ಕಾದುನಿಂತಿದ್ದ ಅಶ್ರಫ್ ಅಲಿ ತೆಗೆದುಕೊಂಡಿದ್ದ.

ಇಲ್ಲಿಯೂ ಅಂಪೈರ್ ನಿರ್ಣಯ ಅನುಮಾನ ಹುಟ್ಟಿಸಿತ್ತು. ಬ್ರಾಡ್‌ನ ಕ್ಯಾಚ್‌ನ್ನು ಅಶ್ರಫ್ ಅಲಿ ತೆಗೆದುಕೊಂಡಾಗ ಅಂಪೈರ್ ಔಟೆಂದು ಕೈ ಬೆರಳು ಮೇಲೆತ್ತಿದ್ದ. ಆದರೆ ಬ್ರಾಡ್ ನಾನು ಚೆಂಡು ಮುಟ್ಟೇ ಇಲ್ಲ ಎಂದು ಪ್ರತಿಭಟಿಸಿ ಗ್ರೌಂಡಿನಲ್ಲಿಯೇ ನಿಂತಿದ್ದ. ಕಥೆಗೆ ಇನ್ನೊಬ್ಬ ಆರಂಭಿಕ ಬ್ಯಾಟ್ಸ್‌ಮನ್ ಗೂಚ್ ಬ್ರಾಡ್‌ನನ್ನು ಸಮಾಧಾನ ಪಡಿಸಿ ಪೆವಿಲಿಯನ್‌ಗೆ ಕಳಿಸಿದ. ಮುಂದೆ ಈ ರೀತಿಯ ವರ್ತನೆಯಿಂದ ಬ್ರಾಡ್ ಛೀಮಾರಿ ಹಾಕಿಸಿಕೊಂಡ. ಜಗಳಗಳ ಮೇಲೆ ಜಗಳ. ಅಂಪೈರ್‌ನ ಏಕಪಕ್ಷೀಯ ತೀರ್ಪುಗಳಿಂದ ಬೇಸತ್ತಿದ್ದ ಗ್ಯಾಟಿಂಗ್ (೨೩) ಪಿಚ್‌ನಲ್ಲಿ ಬಹಳ ಹೊತ್ತು ನಿಲ್ಲದೆ ಖಾದಿರ್‌ಗೆ ಎಲ್.ಬಿ.ಡಬ್ಲ್ಯೂ ರೂಪದಲ್ಲಿ ವಿಕೆಟ್ ಒಪ್ಪಿಸಿದ್ದು ಪಾಕಿಸ್ತಾನಿಯರಿಗೆ ಬುದ್ಧಿ ಕಲಿಸಬೇಕೆನ್ನುವ ಇಂಗ್ಲೆಂಡ್ ಆಟಗಾರರ ಆಸೆಗೆ

ಭಾರೀ ಹಿನ್ನಡೆ ಉಂಟಾಯಿತು.

ಒಬ್ಬರಾದ ಮೇಲೊಬ್ಬರಂತೆ ಪೆವಿಲಿಯನ್‌ಗೆ ಪರೇಡ್ ನಡೆಸುತ್ತಿದ್ದಂತೆ ಇಂಗ್ಲೆಂಡ್‌ನ ಹಣೆಬರಹ ನಿರ್ಧಾರವಾಗಿಬಿಟ್ಟಿತು. ಇಂತಹ ಪರಿಸ್ಥಿತಿಯಲ್ಲಿ ಬೌಲರ್ ಎಂಬುರೆ (ಅಜೇಯ ೩೮) ಎದುರಾಳಿಯ ಬೌಲಿಂಗ್‌ನಲ್ಲಿ ಯಾವ ರೀತಿ ಆಡಬೇಕೆಂದು ತೋರಿಸಿಕೊಟ್ಟ. ಎಂಬುರೆ ಪ್ರತಿರೋಧ ಒಡ್ಡದಿದ್ದರೆ ಇಂಗ್ಲೆಂಡ್‌ನ ಸ್ಕೋರು ನೂರೂ ದಾಟುತ್ತಿರಲಿಲ್ಲ.

ಪಾಕಿಸ್ತಾನಿಯರ ಸ್ಪಿನ್ ಮೋಡಿಗೆ ಮತ್ತು ಸಿಟ್ಟು ತರಿಸುವಂತಹ ಅಂಪೈರ್ ತೀರ್ಪುಗಳಿಂದ ಬಸವಳಿದಿದ್ದ ಇಂಗ್ಲೆಂಡ್ ಇನಿಂಗ್ಸ್ ಮತ್ತು ೮೭ ರನ್‌ಗಳಿಂದ ಸೋಲಿನ ಮಾಲೆ ಧರಿಸಿತು. ಖಾದಿರ್ ಈ ಪಂದ್ಯದಲ್ಲಿ ಒಟ್ಟಾರೆ ೧೦೧ ರನ್‌ಗಳಿಗೆ ೧೩ ವಿಕೆಟ್ ಎಗುರಿಸಿ ತಂಡದ ಭರ್ಜರಿ ಜಯಕ್ಕೆ ಕಾರಣೀಭೂತನೆನಿಸಿದ.

ಮೈಕ್ ಗ್ಯಾಟಿಂಗ್ ಹೇಳುತ್ತಾರೆ: "ನಾನೆಂದೂ ಈ ರೀತಿಯ ದರಿದ್ರ, ಏಕಪಕ್ಷೀಯವಾದ ಅಂಪೈರಿಂಗ್ ನೋಡಿರಲಿಲ್ಲ. ಮುಂದಿನ ಎರಡು ಟೆಸ್ಟ್‌ಗಳಿಗೆ ಇದೇ ರೀತಿಯ ಅಂಪೈರಿಂಗ್ ಇದ್ದರೆ ನಾವು ಗೆಲ್ಲುವದಂತೂ ಸಾಧ್ಯವೇ ಇಲ್ಲ. ಅದನ್ನು ಕನಸು ಮನಸ್ಸಿನಲ್ಲಿಯೂ ಎಣಿಸಲಾರೆವು. ಇದೊಂದು ಸಂಪೂರ್ಣ ಹಾಸ್ಯಮಯ ನಾಟಕವಲ್ಲದೆ ಮತ್ತೇನು ಅಲ್ಲ."

ಜಾವೇದ್ ಮಿಯಾಂದಾದ: "ಅಬ್ಬಾ! ಅಬ್ದುಲ್ ಖಾದಿರ್‌ನ ಬೌಲಿಂಗ್ ಅಮೋಘ, ಅತ್ಯದ್ಭುತ. ಅದರಲ್ಲಿಯೂ ಪ್ರಥಮ ಇನಿಂಗ್ಸ್‌ನಲ್ಲಿ ಅವನು ಮಾಡಿದ ಬೌಲಿಂಗ್ ವರ್ಣನಾತೀತ. ಆತ ಇಂಗ್ಲೆಂಡಿನ ಪ್ರತಿಯೊಬ್ಬ ಬ್ಯಾಟ್ಸ್‌ಮನ್‌ನನ್ನೂ ತನ್ನ ಬಲಿಯಲ್ಲಿ ಹಿಡಿದಿಟ್ಟಿದ್ದ" ಎಂದು ನೆನೆಯುತ್ತಾರೆ.

## ದಾಖಲೆಯಲ್ಲಿ ಎರಡನೆ ಟೆಸ್ಟ್

ಯಾವುದೇ ಫಲಿತಾಂಶ ಬರದೆ ಡ್ರಾದಲ್ಲಿ



ಮುಕ್ತಾಯಗೊಂಡ ಈ ಪಂದ್ಯದ ಎರಡನೇ ... ಇಂಗ್ಲೆಂಡ್‌ನ ನಾಯಕ ಮೈಕ್ ಗ್ಯಾಟಿಂಗ್ ಮತ್ತು ಅಂಪೈರ್ ಶಕೂರ ರಾಣಾ ನಡುವೆ ನಡೆದ ಭಾರೀ ಮಾತಿನ ಚಕಮಕಿ ಕ್ರಿಕೆಟ್ ಇತಿಹಾಸದಲ್ಲಿ ಕಪ್ಪು ಚುಕ್ಕೆಯಾಗಿ ಉಳಿಯಿತು. ಇವರಿಬ್ಬರ ನಡುವಿನ ಬಾಯಿ ಮಾತಿನ ಜಗಳದಿಂದ ಮೂರನೇ ದಿನವ ಆಟ ಮುಂದೂಡಲ್ಪಟ್ಟಿತ್ತು. ಈ ಪಂದ್ಯದಲ್ಲಿ ಇಂಗ್ಲೆಂಡ್ ಪರ ಬ್ರಾಡ್ (೧೧೬) ಶತಕ ಬಾರಿಸಿದ್ದ.

## ಮೂರನೇ ಟೆಸ್ಟ್

ಮತ್ತೊಮ್ಮೆ ತನ್ನ ಕೈ ಚಳಕ ಪ್ರದರ್ಶಿಸಿದ ಅಬ್ದುಲ್ ಖಾದಿರ್‌ನಿಂದ ಇಂಗ್ಲೆಂಡ್ ಸ್ವಲ್ಪದರಲ್ಲೇ ಸೋಲಿನಿಂದ ಪಾರಾಯಿತು. ರೌಪೆಲ್ (೯೮), ಗೂಚ್ (೯೩) ಮತ್ತು ಎಂಬುರೆ (೭೦ ಹಾಗೂ ಔಟಾಗದೆ ೭೪) ತಂಡವನ್ನು ಎರಡನೆ ಸೋ... ನಿಂದ ಪಾರು ಮಾಡಿದರು. ಈ ಪಂದ್ಯದಲ್ಲಿ ಖಾದಿರ್ ೧೮೬ ರನ್‌ಗಳಿಗೆ ೧೦ ವಿಕೆಟ್‌ಗಳನ್ನು ಉರುಳಿಸಿದ್ದ.





# ಮಹಾತ್ಮ ಗಾಂಧಿ ಕ್ರಿಕೆಟ್ ಆಡಿದಾಗ....



• ಎನ್.ಡಿ. ಶಾಂತಕುಮಾರ್

(ಪಿಟಿಐ ಫೀಚರ್‌ನಿಂದ)

ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ದೇಶದಾದ್ಯಂತ ಪ್ರವಾಸ ಕೈಗೊಂಡಿದ್ದ ಮಹಾತ್ಮಾ ಗಾಂಧೀಜಿಗೆ ಒರಿಸ್ಸಾಗೆ ಹೋದಾಗ ಅಂಗುಲ್ ಎಂಬ ಚಿಕ್ಕ ವಿರಳ ಜನವಸತಿಯ ಕುಗ್ರಾಮದಲ್ಲಿ ದಿನ ಕಳೆಯಬೇಕಾದ ಸಂದರ್ಭ ಬಂತು. ದಟ್ಟ ಕಾಡಿನಿಂದ ಆವೃತವಾದ ಈ ವಲಯದಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರ ಆದೇಶವೇ ಅಂತಿಮ ವಾಕ್ಯವಾಗಿತ್ತು.

ಬಾಪೂಜಿಗೆ ಸಾರ್ವಜನಿಕ ಧರ್ಮಛತ್ರದಲ್ಲಿ ಉಳಿದುಕೊಳ್ಳಲು ಅನುಮತಿ ದೊರೆತಿರಲಿಲ್ಲ. ಹಾಗಾಗಿ ಬಯಲಿನಲ್ಲೇ ಒಂದು ಡೇರೆ ಹಾಕುವ ಪರಿಸ್ಥಿತಿ ಬಂದಿತ್ತು. ಅವರು ಆ ಪ್ರದೇಶಕ್ಕೆ ಬರುವುದನ್ನು ತಿಳಿದಿದ್ದ ಬ್ರಿಟಿಶ್ ಸರಕಾರ ಅಲ್ಲಿ ನಿಷೇಧಾಜ್ಞೆಯನ್ನು ಜಾರಿಗೆ ತಂದು ಸ್ಥಳೀಯರೊಂದಿಗೆ ಗಾಂಧೀಜಿಗೆ ಸ್ನೇಹ ಸಂಪರ್ಕ ಉಂಟಾಗದಂತೆ ವ್ಯವಸ್ಥೆ ಮಾಡಿತ್ತು.

ಆದರೆ ಇದರಿಂದ ಗಾಂಧೀಜಿಯನ್ನು ಭೆಟ್ಟಿಯಾಗಬೇಕೆಂಬ ಆ ಭಾಗದ ಆದಿವಾಸಿಗಳ ಉತ್ಸಾಹವೇನೂ ಕುಂದಿರಲಿಲ್ಲ. ಅಷ್ಟಕ್ಕೂ ಗಾಂಧೀಜಿ ಅಂದು ಬಯಲಿನಲ್ಲಿ ಹಾಕಿದ ಡೇರೆಯಲ್ಲಿಯೇ ಇರಬೇಕಾಗಿತ್ತಲ್ಲ....

ಈ ಸಂದರ್ಭದಲ್ಲಿ ಬಹುದೂರದಿಂದ ಆದಿವಾಸಿಗಳೂ ಸೇರಿದಂತೆ ಸ್ಥಳೀಯ ಜನರು ಗಾಂಧಿ ದರ್ಶನಕ್ಕೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಆಗಮಿಸತೊಡಗಿದ್ದರು. ಅವರೆಲ್ಲ ಅತ್ಯಂತ ಬಡವರಾಗಿದ್ದರೂ ತಮ್ಮ ಶಕ್ತ್ಯಾನುಸಾರ ಹಣವನ್ನು ಬಾಪೂಜಿಗೆ ನೀಡಿ ಸ್ವಾತಂತ್ರ್ಯ ಚಳವಳಿಗೆ ತಮ್ಮ ಅಳಿಲು ಸೇವೆ ಸಲ್ಲಿಸಲು ಕಾತರಿಸುತ್ತಿದ್ದರು.

ಇದರಿಂದ ಸಂತೋಷಗೊಂಡ ಗಾಂಧೀಜಿ ತರಾತುರಿಯಲ್ಲಿ ನಿರ್ಮಿಸಿದ್ದ ಡೇರೆಯಲ್ಲಿಯೇ ಮೂರು ಗಂಟೆಗಳ ಕಾಲ ಏಳು ಅಡಿ ಎತ್ತರದ ವೇದಿಕೆಯ ಮೇಲೆ ಕುಳಿತು, ಕಾಣಿಕೆ ಸ್ವೀಕರಿಸಲು ಮುಂದಾದರು.

ಸರತಿಯ ಸಾಲಿನ ಕೊನೆಯ ವ್ಯಕ್ತಿಯಿಂದ ಕಾಣಿಕೆ ಸ್ವೀಕರಿಸಿದ ಗಾಂಧೀಜಿ, "ಈ ಪ್ರತಿಯೊಂದು ಪೈಸೆಗೂ ಚಿನ್ನದ ಮೌಲ್ಯವಿದೆ. ಈ

ಜನ ಅದೆಷ್ಟು ಪ್ರೀತಿ, ಆತ್ಮೀಯತೆ, ಆದರ ಅಭಿಮಾನಗಳಿಂದ ಈ ಹಣ ಸಂಗ್ರಹಿಸಿದ್ದಾರೋ ಏನೋ, ನನಗೆ ಕೊಡುವ ಉದ್ದೇಶದಿಂದಲೇ ದೂರದೂರದ ಸ್ಥಳಗಳಿಂದ ನಡೆದುಕೊಂಡು ಬಂದಿದ್ದಾರೆ. ಇದು ದೇಶದ ಒಳಿತಿಗಾಗಿ ಅವರು ನೀಡಿರುವ ಅಪೂರ್ವ ಕೊಡುಗೆ. ಹೀಗಿರುವಾಗ ನಾನು ಮೂರು ಗಂಟೆಗಳ ಕಾಲ ಕುಳಿತಲ್ಲಿಯೇ ಕುಳಿತು ಅದನ್ನು ಪಡೆದೆನೆಂಬುದೇನೂ ದೊಡ್ಡಸ್ತಿಕೆಯಲ್ಲ. ನಾನು ಈ ಕೆಲಸ ಮಾಡದಿದ್ದರೆ ಅವರ ಮನಸ್ಸು ನೋಯಿಸಿದಂತಾಗುತ್ತಿತ್ತು. ಹಣವು ಪರಸ್ಪರ ಪವಿತ್ರ ಅರಿವಿನ ಸಂಕೇತ," ಎಂದು ಭಾವಪರವಶರಾಗಿ ನುಡಿದರು.

* * *

ಇನ್ನೊಂದು ಸಂದರ್ಭ. ಬಾಪೂಜಿ ನೇತೃತ್ವದ ಸತ್ಯಾಗ್ರಹಿಗಳ ತಂಡ ದಿಲ್ಲಿಯಿಂದ ವರ್ಧಾಕ್ಕೆ ಹೊರಟಿತ್ತು. ತಾವು ರಾತ್ರಿ ಊಟವನ್ನು ರೈಲಿನಲ್ಲಿಯೇ ಮಾಡುವುದಾಗಿ ಗಾಂಧೀಜಿ ಮುಂಚಿತವಾಗಿಯೇ ತಿಳಿಸಿದ್ದರು. ಅವರ ಊಟದ ಜವಾಬ್ದಾರಿಯನ್ನು ರಾಜಕುಮಾರಿ ಅಮೃತ ಕೌರ್ ವಹಿಸಿಕೊಂಡಿದ್ದರು.

ಗಾಂಧೀಯವರಿಗಾಗಿ ಒಂದು ಫ್ಲಾಸ್ಕ್‌ನಲ್ಲಿ ಬಿಸಿ ನೀರು, ಮತ್ತೊಂದು ಫ್ಲಾಸ್ಕ್‌ನಲ್ಲಿ ಬಿಸಿ ಹಾಲನ್ನು ಯಾವಾಗಲೂ ಇಟ್ಟುಕೊಂಡಿರಬೇಕಾಗಿತ್ತು. ಆದರೆ ಅಂದು ಒಂದು ಫ್ಲಾಸ್ಕ್ ಒಡೆದು ಹೋಗಿದ್ದರಿಂದ ಇದರಲ್ಲಿ ವ್ಯತ್ಯಯ ಉಂಟಾಗುವ ಭಯವಿತ್ತು. ಇದನ್ನು ಗಮನಿಸಿದ ಜಿ.ಡಿ. ಬಿರ್ಲಾ ಆಗತಾನೇ ತಾವು ಕೊಂಡಿದ್ದ ಹೊಸ ಫ್ಲಾಸ್ಕ್‌ಅನ್ನು ಗಾಂಧೀಜಿಯ ಉಪಯೋಗಕ್ಕೆಂದು ಅಮೃತ ಕೌರರಿಗೆ ನೀಡಿದರು.

ಗಾಂಧಿಯವರಿಗೆ ಹಾಲನ್ನು ಕೊಡಲು ಕೌರ್ ಫ್ಲಾಸ್ಕ್‌ಅನ್ನು ಕೈಗೆತ್ತಿಕೊಳ್ಳುತ್ತಿರುವಂತೆಯೇ ಅವರ ಹದ್ದಿನ ಕಣ್ಣುಗಳು ಹೊಸ ಫ್ಲಾಸ್ಕ್‌ನ್ನು ಗಮನಿಸಿದವು. ಈ ಬಗ್ಗೆ ಪ್ರಶ್ನಿಸಿದಾಗ ಕೌರ್ ನಡೆದುದನ್ನು ಹೇಳಲೇಬೇಕಾಯಿತು.

ಬಿರ್ಲಾ ಅವರಿಂದ ಅಮೃತ ಕೌರ್ ಈ ಕಾಣಿಕೆಯನ್ನು ಸ್ವೀಕರಿಸಿದ್ದು ಗಾಂಧೀಜಿಯ ಮನಸ್ಸಿಗೆ ಬರಲಿಲ್ಲ. ಕೋಪಗೊಂಡ ಅವರು, "ನನಗಾಗಿ ಬೇರೆಯವರು ಹಣ ಖರ್ಚು ಮಾಡುವಷ್ಟು ಭಿಕಾರಿಯೇ ನಾನು? ಅದನ್ನವರು ಆತ್ಮೀಯತೆಯಿಂದಲೇ ಕೊಟ್ಟಿರಬಹುದು ಅಥವಾ ಅದಷ್ಟು ಬೆಲೆಯುಳ್ಳದ್ದಿಲ್ಲದಿರಬಹುದು. ದೇವರು ಯಾರಿಗೆ ಸಂಪತ್ತನ್ನು ಕೊಟ್ಟಿದ್ದಾನೋ ಅವರಿಗೆ ಹಣ ಎನ್ನುವುದು ಪವಿತ್ರ ಸಂಬಂಧಗಳ ಪ್ರತೀಕವೆಂಬುದನ್ನು ನೀವು ಅರಿತಿರಬೇಕಿತ್ತು. ಯಾರಿಗೆ ಅಗತ್ಯವಿಲ್ಲವೋ ಮತ್ತು ಯಾರಿಗೆ ಅದರ ಅವಶ್ಯಕತೆ ಇಲ್ಲವೋ ಅವರಿಗಾಗಿ ಒಂದು ಪೈಸೆಯನ್ನೂ ವೆಚ್ಚ ಮಾಡಬಾರದು," ಎಂದು ಸಿಡಿದೆದ್ದರು.

ಕೌರ್ ಮರುಮಾತನಾಡದೇ ಆ ಹೊಸ ಫ್ಲಾಸ್ಕ್‌ಅನ್ನು ಬಿರ್ಲಾರಿಗೆ ಹಿಂದಿರುಗಿಸಿದರು.

* * *

ಗಾಂಧಿಯವರಿಗೆ ಕ್ರಿಕೆಟ್ ಆಟದಲ್ಲಿ ಬಹಳ ಆಸಕ್ತಿ ಇತ್ತೆಂಬುದೂ ಅವರೊಬ್ಬ ಉತ್ತಮ ಕ್ರಿಕೆಟ್ ಪಟುವಾಗಿದ್ದರೆಂಬುದೂ ಅನೇಕರಿಗೆ ತಿಳಿದಿರಲಿಕ್ಕಿಲ್ಲ. ರಾಜಕೋಟದ ಆಲ್‌ಫ್ರೆಡ್ ಪ್ರೌಢಶಾಲೆಯಲ್ಲಿ ಅವರ ಸಹಪಾಠಿಯಾಗಿದ್ದ ರತಿಲಾಲ್ ಘೇಲಾಭಾಯಿ ಮೆಹ್ತಾ ಅವರು ೧೯೪೮ರ ಜನವರಿ ೨೪ರ 'ಫ್ರೀ ಪ್ರೆಸ್ ಜರ್ನಲ್' ಸಂಚಿಕೆಯಲ್ಲಿ ಗಾಂಧೀಜಿಯ ಕ್ರಿಕೆಟ್ ಆಸಕ್ತಿಯನ್ನು ಸ್ಮರಿಸಿಕೊಳ್ಳುತ್ತ, "ಕ್ರಿಕೆಟ್‌ನಲ್ಲಿ ಅಪಾರ ಜ್ಞಾನ ಹೊಂದಿದ್ದ ಅವರು ಉತ್ತಮ ಬ್ಯಾಟ್ಸ್‌ಮನ್ ಮತ್ತು ಬೌಲರ್ ಆಗಿದ್ದರು," ಎಂದು ಹೇಳಿದ್ದಾರೆ.

ನೀಳವಾದ ಕಾಲುಗಳಿದ್ದುದರಿಂದ ಗಾಂಧೀಜಿ ವಿಕೆಟ್‌ಗಳ ಮಧ್ಯೆ ಚುರುಕಾಗಿ ಓಡುತ್ತಿದ್ದರು. ಕವರ್ಸ್ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಕ್ಷೇತ್ರ ರಕ್ಷಣೆಗೆ ನಿಲ್ಲುತ್ತಿದ್ದರು. ಬ್ರಿಟನ್ನಿನ ಖ್ಯಾತ ಕ್ರಿಕೆಟ್‌ಪಟು ಡಗ್ಲಾಸ್ ಜಾರ್ಡಿನ್ ಗಾಂಧೀಜಿಯ ಅಚ್ಚುಮೆಚ್ಚಿನ ಆಟಗಾರರಾಗಿದ್ದರು.

೧೯೩೨-೩೩ರಲ್ಲಿ ಬಾಪೂಜಿ ಇಂಗ್ಲೆಂಡಿನಲ್ಲಿದ್ದಾಗ ಮೆಲ್ಬೊರ್ನ್ ಕ್ರಿಕೆಟ್ ಕ್ಲಬ್ (ಎಂ.ಸಿ.ಸಿ.ಯು) ಲಂಡನ್ನಿನಲ್ಲಿರುವ ಭಾರತೀಯ ಮೂಲದವರ ಜೊತೆ ಸೌಹಾರ್ದ ಕ್ರಿಕೆಟ್ ಪಂದ್ಯವೊಂದನ್ನು ಏರ್ಪಡಿಸಿತ್ತು. ಸಹಜವಾಗಿಯೇ ಭಾರತ ತಂಡದ

ಪರ ಆಡಲು ಬಯಸಿದ್ದ ಗಾಂಧೀಜಿಯವರನ್ನು ಎಂ.ಸಿ.ಸಿ. ತನ್ನ ಪರವಾಗಿ ಆಡುವಂತೆ ಮನವಿ ಮಾಡಿಕೊಂಡಿತ್ತು. ಆ ಇಳಿ ವಯಸ್ಸಿನಲ್ಲಿಯೂ ಅವರು ಉತ್ತಮವಾಗಿ ಬ್ಯಾಟಿಂಗ್ ಮಾಡಿ ಮೂರು ಬೌಂಡರಿಗಳನ್ನೊಳಗೊಂಡ ೨೭ ರನ್ ಗಳಿಸಿದರಲ್ಲದೆ ಬ್ಯಾಟ್ಸ್‌ಮನ್‌ನನ್ನು ಕ್ಲೀನ್ ಬೌಲ್ಡ್ ಮಾಡುವುದರ ಮೂಲಕ ಒಂದು ವಿಕೆಟ್ಟನ್ನೂ ಪಡೆದರು.

ಈ ಪಂದ್ಯದಲ್ಲಿ ಗಾಂಧಿ ಅವರು ಬಿಳಿಯ ಸಮವಸ್ತ್ರದ ಹೊರತಾಗಿ ಪ್ಯಾಡ್, ಗ್ಲೌಸ್ ಏನನ್ನೂ ಧರಿಸಿರಲಿಲ್ಲ. ಈ ಸೌಹಾರ್ದ ಪಂದ್ಯದಲ್ಲಿ ಎಂ.ಸಿ.ಸಿ. ಜಯಗಳಿಸಿತು. ಪಂದ್ಯದ ಸ್ಮರಣಾರ್ಥ ಗಾಂಧೀಜಿ ಬ್ಯಾಟಿನ ಮೇಲೆ, "ಎಂ.ಸಿ.ಸಿ.ಯ ೧೭ನೆಯ ಆಟಗಾರ" ಎಂದು ಬರೆದು ಎಂ.ಕೆ. ಗಾಂಧಿ ಎಂದು ಸಹಿ ಹಾಕಿದರು. ಆಟೋಗ್ರಾಫ್ ಪುಸ್ತಕದಲ್ಲಿಯೂ ಸಹಿಮಾಡಿದರು. ಈ ಬ್ಯಾಟ್ ಮತ್ತು ಆಟೋಗ್ರಾಫ್ ಪುಸ್ತಕಗಳನ್ನು ಎಂ.ಸಿ.ಸಿ.ಯ ಕೇಂದ್ರ ಕಛೇರಿಯಲ್ಲಿ ಅಪೂರ್ವ ವಸ್ತುಗಳೆಂದು ಕಾಯ್ದಿರಿಸಲಾಗಿದೆ.

"ನಾನು ಅಲ್ಲಿ ಅವರನ್ನು ಗೌರವದಿಂದ ಭೇಟಿಯಾಗಲು ಹೋದಾಗ ಗಾಂಧೀಜಿ ಕ್ರಿಕೆಟ್ ಬಗ್ಗೆಯೆ ಲೋಕಾಭಿರಾಮವಾಗಿ ಹರಟಿದರು," ಎಂದು ಪಟೌಡಿ ನವಾಬ(ಹಿರಿಯ)ರು ಸ್ಮರಿಸಿಕೊಂಡಿದ್ದಾರೆ.

" ಸಿಂಗಲ್ ವಿಕೆಟ್ ಪಂದ್ಯದಲ್ಲಿ ನಿಮಗೆ ಸವಾಲೊಡ್ಡಲು ಬಯಸುತ್ತೇನೆ' ಎಂದು ನಾನು ಗಂಭೀರವಾಗಿ ಆಹ್ವಾನ ನೀಡಿ ಒಂದು ಶರತ್ತನ್ನು ಹಾಕಿದೆ. ಈ ಸಿಂಗಲ್ ವಿಕೆಟ್ ಪಂದ್ಯ ಮುಗಿದ ನಂತರ ರಾಜಕೀಯದಲ್ಲಿಯೂ ನಿಮ್ಮನ್ನು ಎದುರಿಸುವ ಸವಾಲೊಡ್ಡುತ್ತೇನೆ ಎಂದೆ.

"ನನ್ನ ಆಹ್ವಾನವನ್ನು ಒಪ್ಪಿಕೊಂಡ ಅವರಿಗೆ ನಾನು ಹೇಳಿದೆ: 'ನೀವು ನನ್ನನ್ನು ಕ್ರಿಕೆಟ್‌ನಲ್ಲಿ ಸೋಲಿಸುವುದು ಎಷ್ಟು ಸಲುಭವೋ, ಹಾಗೆ ನಾನು ನಿಮ್ಮನ್ನು ರಾಜಕೀಯದಲ್ಲಿ ಸೋಲಿಸುವುದೂ ಶತಃಸಿದ್ಧ."

ಆಗ ಗಾಂಧೀಜಿ ಮುಗ್ಧ ಮಗುವಿನಂತೆ ಗೊಳ್ಳೆಂದು ನಗುತ್ತ ಆತ್ಮೀಯತೆಯಿಂದ ಬೆನ್ನು ನೇವರಿಸಿ, "ನವಾಬ್ ಸಾಹೇಬರೆ, ನೀವು ಈಗಾಗಲೇ ಕ್ರಿಕೆಟ್‌ನಲ್ಲಿ ನನ್ನನ್ನು 'ಔಟ್' ಮಾಡಿಬಿಟ್ಟಿದ್ದೀರಿ," ಎಂದರಂತೆ.

ಇದನ್ನು ಪಟೌಡಿ ನವಾಬರು ತಮ್ಮ ನೆನಪುಗಳಲ್ಲಿ ನಮೂದಿಸಿದ್ದಾರೆ.



# ದೇವರು ಮತ್ತು ಧರ್ಮ

ಕನ್ನಡದ ಶ್ರೇಷ್ಠ ವಿಚಾರವೇತ್ತರಾದ ಡಿ.ವಿ.ಜಿ. ಮತ್ತು ಎ.ಎನ್. ಮೂರ್ತಿರಾವ್ ಅವರು ಪ್ರತ್ಯೇಕವಾಗಿ ಬರೆದ "ದೇವರು" ಹೆಸರಿನ ಕೃತಿಗಳನ್ನು ಓದಿದ ಮೇಲೆ ಆ ವಿಷಯದ ಕುರಿತು ಮರುಚಿಂತನೆ:

• ಡಾ. ಎಸ್.ಆರ್. ತರ್ಲಗಟ್ಟಿ   ಅನುವಾದ: ಸರಸ್ವತಿ ರಿಸಬೂಡ

ಸಾಮಾನ್ಯವಾಗಿ ತತ್ವಜ್ಞಾನದಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳು ಇದ್ದೇ ಇರುತ್ತವೆ. ಯಾವುದೇ ನಿಲುವು ಅಂತಿಮವಾದದ್ದೆಂದು ಪರಿಗಣಿಸುವುದಿಲ್ಲ. ಪ್ರಾರಂಭದಲ್ಲಿ ಬೌದ್ಧಿಕವಾಗಿ ನಂಬಿದ್ದನ್ನು (Belief) ನಾವು ಯಾವಾಗ ಅಂತಃಕರಣದಿಂದ ಸ್ವೀಕರಿಸುತ್ತೇವೆಯೋ ಆಗ ಅದು ನಿಷ್ಠೆ ಅಥವಾ ಶ್ರದ್ಧೆ (Faith)ಯಾಗಿ ಪರಿಗಣಿಸುತ್ತದೆ. ಈ ದೃಷ್ಟಿಯಿಂದ ಈಶ್ವರವಾದವೇ ಆಗಲಿ, ನಿರೀಶ್ವರವಾದವೇ ಆಗಲಿ ಜೀವನದಲ್ಲಿ ಅಳವಡಿಸಲು ನಿಷ್ಠೆಯು ಅಗತ್ಯವಾಗಿ ಬೇಕಾಗುವುದು.

ನಿರೀಶ್ವರವಾದಿಗಳು ಮಾತ್ರ ಈ ಮಾತನ್ನು ಸುಲಭವಾಗಿ ಒಪ್ಪುವುದಿಲ್ಲ. ಏಕೆಂದರೆ ಅವರ ದೃಷ್ಟಿಯಲ್ಲಿ ದೇವರ ಅಸ್ತಿತ್ವವನ್ನು ಮೂಲತಃ ಒಪ್ಪಿಕೊಳ್ಳುವುದೇ ಅಂಧಶ್ರದ್ಧೆ. ದೇವರ ಅಸ್ತಿತ್ವವನ್ನು ಅನುಭವ ಹಾಗೂ ಬುದ್ಧಿಯ ಸಹಾಯದಿಂದ ಮನುಷ್ಯ ಒಪ್ಪಬಲ್ಲ-ಎಂಬುದನ್ನು ಅವರು ನಿರಾಕರಿಸುತ್ತಾರೆ. ಆದರೆ ಸಾಕಷ್ಟು ಆಲೋಚನೆ ಮಾಡಿಯೇ ಮನುಷ್ಯನು ದೇವರ ಅಸ್ತಿತ್ವವನ್ನು ಒಪ್ಪಿದ್ದಾನೆ. ಮೊದಲಿಗೆ ಪ್ರಕೃತಿಯ ಆಗು ಹೋಗುಗಳ ಸ್ಪಷ್ಟೀಕರಣಕ್ಕಾಗಿ, ಅದರಂತೆ ತೀವ್ರವಾದ ಜೀವನ ಸಂಘರ್ಷದಲ್ಲಿ ಸಂರಕ್ಷಣೆಗೆಂದು ಆದಿ ಮಾನವನು ದೇವರನ್ನು ಶಕ್ತಿರೂಪದಲ್ಲಿ ಕಂಡುಕೊಂಡನೆಂದು ಕಾಣುತ್ತದೆ. ದೇವರ ಈ ಆರಾಧನೆಯಲ್ಲಿ ನಂತರ ಧರ್ಮದ ವಿಚಾರವೂ ಸೇರಿಕೊಂಡಿತು. ದೇವರು ಈ ಧರ್ಮದ ಕೇಂದ್ರ ಸ್ಥಾನ ಎಂಬುದು ಜಗತ್ತಿನ ಧರ್ಮಗಳನ್ನು ಪರೀಕ್ಷಿಸಿದಾಗ ಎದ್ದು ಕಾಣುವ ಸಂಗತಿ. (ಇದಕ್ಕೆ ಅಪವಾದ ಎಂದರೆ ಜೈನ ಮತ್ತು ಬೌದ್ಧ ಧರ್ಮಗಳು)

ಜಗತ್ತಿನಲ್ಲಿ ದೇವರು ಇದ್ದಾನೆಯೆ, ಇಲ್ಲವೆ? ಈ ಪ್ರಶ್ನೆಯ ಉತ್ತರವನ್ನು ಕಂಡುಹಿಡಿಯುವ ಮುನ್ನ ನಾವು ದೇವರೆಂದರೆ ಏನು ಎಂಬುದನ್ನು ಸ್ಪಷ್ಟಪಡಿಸೋಣ. ಸಾಮಾನ್ಯವಾಗಿ ದೇವರನ್ನು ಕಾಣುವಲ್ಲಿ ಎರಡು ಬಗೆಗಳಿವೆ. ಒಂದು ತಾತ್ವಿಕ ದೃಷ್ಟಿಕೋನವಾದರೆ ಇನ್ನೊಂದು ಧಾರ್ಮಿಕ ದೃಷ್ಟಿಕೋನ. ತಾತ್ವಿಕ ದೃಷ್ಟಿಕೋನದ ಪ್ರಕಾರ ಈಶ್ವರನನ್ನು ಸತ್ ತತ್ವ (reality) ಎಂದು ಒಪ್ಪಿಕೊಂಡು ಚರ್ಚಿಸಲಾಗುತ್ತದೆ. ಇತ್ತ ಧಾರ್ಮಿಕ ದೃಷ್ಟಿಯಲ್ಲಿ 'ಆರಾಧ್ಯ ದೇವತೆ' ಎಂಗು ಗಣಿಸಲಾಗುತ್ತದೆ. ಈ ಆರಾಧ್ಯ ದೇವರು ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕರ್ತೃ ಆಗಿರುವನೆಂದು ತಿಳಿಯಲಾಗುತ್ತದೆ. ಅಂತಿಮವಾದ ಸತ್-ವಸ್ತು ಎಂದರೂ ಈತನೇ ಎಂಬ ತಾತ್ವಿಕ ವಿಚಾರವು ಕೂಡ ಧಾರ್ಮಿಕ ತತ್ವಜ್ಞಾನದಲ್ಲಿದೆ. ಈಶ್ವರನು ಕೇವಲ ಸತ್ ತತ್ವವಾಗಿರದೆ ಆತನಿಗೆ ತನ್ನದೇ ಆದ ವ್ಯಕ್ತಿತ್ವವಿರುತ್ತದೆ. ಈ ದೃಷ್ಟಿಯಿಂದ ಧರ್ಮ, ತತ್ವಜ್ಞಾನದಲ್ಲಿ ಈಶ್ವರನು attributed ಸಗುಣನಾಗಿರುವ ವಿಚಾರ ಬಹಳಷ್ಟು ನಡೆಯುತ್ತದೆ. ಸ್ವಲ್ಪದರಲ್ಲಿ ಹೇಳುವುದಾದರೆ ಆರಾಧ್ಯ ದೇವರು ಅಮೂರ್ತವಾಗಿ, ನಿರ್ಗುಣ ತತ್ವವಾಗಿ ಉಳಿಯದೇ ಮೂರ್ತ ಸ್ವರೂಪದ ಸುಗುಣ ವ್ಯಕ್ತಿ ಆಗುತ್ತಾನೆ.

ಇಲ್ಲಿ ನಾವು ಸಗುಣ ಮತ್ತು ಸಾಕಾರ-ಇವುಗಳಲ್ಲಿಯ ಅಂತರವನ್ನು ತಿಳಿದಿರುವುದು ಅವಶ್ಯವಾಗುತ್ತದೆ. ವ್ಯವಹಾರದಲ್ಲಿ ಸಗುಣ-ಸಾಕಾರ

ಮತ್ತು ನಿರ್ಗುಣ-ನಿರಾಕಾರವೆಂಬ ಭೇದಗಳಿದ್ದರೂ ಅವು ಪೂರ್ಣವೆನಿಸವು. ಅವುಗಳಲ್ಲಿಯ ಸಗುಣ-ನಿರಾಕಾರ ಎಂಬ ಇನ್ನೊಂದು ಲಕ್ಷಣವನ್ನು ಗುರುತಿಸಬೇಕು. ಕ್ರೈಸ್ತರು ಹಾಗೂ ಮಹಮ್ಮದೀಯರಲ್ಲಿ ದೇವರು ಸಗುಣ ನಿರಾಕಾರನಾಗಿದ್ದಾನೆ. ನಿರ್ಗುಣಕ್ಕೂ ಆಕಾರವಿರುವುದಿಲ್ಲ. ಏಕೆಂದರೆ ಆಕಾರವೂ ಕೂಡ ಒಂದು ಗುಣವೇ ತಾನೇ. ತಾತ್ಪರ್ಯವೆಂದರೇನೆಂದರೆ ದೇವರು ಸಗುಣ ಎನಿಸಿದರೆ ಭಕ್ತಿಯ ವಿಷಯವಾಗುತ್ತಾನೆ.

ಹಿಂದುಗಳಿಗೆ ವೇದಗಳು ಮೂಲ ಧರ್ಮಗ್ರಂಥಗಳಾಗಿವೆಯಷ್ಟೆ. ಈ ವೇದಗಳ ಪ್ರಾಮಾಣ್ಯದ ವಿಷಯವಾಗಿ ವಾದ ನಡೆದು ಆಸ್ತಿಕ ಮತ್ತು ನಾಸ್ತಿಕ ಎಂಬ ಎರಡು ಸ್ಪಷ್ಟವಾದ ದರ್ಶನಗಳು ಹುಟ್ಟಿಕೊಂಡಿವೆ. ಆಸ್ತಿಕ ದರ್ಶನವು ವೇದ ಪ್ರಾಮಾಣ್ಯವನ್ನು ಮನ್ನಿಸುವುದು. ಆದೇ ನಾಸ್ತಿಕ ದರ್ಶನವು ವೇದ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ . ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ ಮತ್ತು ವೇದಾಂತ ಈ ಷಟ್-ದರ್ಶನಗಳು ಆಸ್ತಿಕ ಎನಿಸಿದರೆ, ಜೈನ, ಬೌದ್ಧ ಚಾರ್ವಾಕ-ಇವು ಪ್ರಮುಖ ದರ್ಶನಗಳಾಗಿವೆ. ವ್ಯವಹಾರದಲ್ಲಿ ಆಸ್ತಿಕನೆಂದರೆ ದೇವರನ್ನು ಒಪ್ಪುವವ, ನಾಸ್ತಿಕ ಎಂದರೆ ನಿರೀಶ್ವರವಾದಿ-ಎಂಬ ಅರ್ಥ.

ಈ ವೇದಗಳಲ್ಲಿ, ಅದರಲ್ಲಿಯೂ ವಿಶೇಷವಾಗಿ ಋಗ್ವೇದದಲ್ಲಿ ಬರುವ ದೇವತೆಗಳ ಬಗ್ಗೆ ವಿದ್ವಾಂಸರು ಸಾಕಷ್ಟು ವಿವರಿಸಿದ್ದಾರೆ. ವೇದಗಳಲ್ಲಿ ಇಂದ್ರ, ಅಗ್ನಿ, ಸೂರ್ಯ, ವರುಣ, ರುದ್ರ, ಮರುತ್, ವಿಶ್ವೇದೇವ ಮೊದಲಾದ ಶಕ್ತಿಗಳನ್ನು ದೇವರೆಂದು ಕರೆಯಲಾಗಿದೆ ಮತ್ತು ಯಜ್ಞಗಳ ಯಾಗಗಳ ಮೂಲಕ ಆ ದೇವತೆಗಳನ್ನು ಪ್ರಸನ್ನೀರಿಸುವುದು ಕಂಡುಬಂದಿತು. ಪ್ರಾರಂಭದಲ್ಲಿ ಈ ದೇವತೆಗಳು ಭಿನ್ನವಾಗಿವೆ ಎಂಬ ನಂಬುಗೆ ಇತ್ತು. ಅದನ್ನು ಬಹುದೇವತಾವಾದ (polytheism) ಎಂದು ಕರೆಯುತ್ತಾರೆ. ಅನಂತರ ಸ್ತುತಿ ವಿಷಯವಾದ ದೇವತೆಯನ್ನು ಶ್ರೇಷ್ಠವೆಂದು ಭಾವಿಸಿ, ಇನ್ನಿತರ ದೇವತೆಗಳು ಆ ಮುಖ್ಯ ದೇವತೆಯ ರೂಪಗಳು-ಎಂದು ಬಗೆಯಲಾಯಿತು. ಈ ಗ್ರಹಿಕೆಯನ್ನು ಮ್ಯಾಕ್ಸ್‌ಮುಲ್ಲರ್ (henotheism) ಎಂದು ಕರೆದಿದ್ದಾನೆ.

ಈಶ್ವರ ಸಂಬಂಧವಾದ ಈ ವಿಚಾರವು ನಿಜವಾಗಿ ಪರಿಣತವಾದದ್ದೆಂದರೆ ಅದರ ಏಕೇಶ್ವರವಾದದಲ್ಲಿ (monotheism) ಇದರ ಪ್ರಕಾರ ದೇವರು ಒಬ್ಬನೇ ಆಗಿದ್ದು, ವಿವಿಧ ರೂಪಗಳಲ್ಲಿ ಪ್ರಕಟನಾಗಿದ್ದಾನೆ. ಅಖಿಲ ಚರಾಚರ ವಿಶ್ವದಲ್ಲಿ ಏಕೈಕ ನಿಯಾಮಕ ಶಕ್ತಿಯು ಕಾರ್ಯಪ್ರವೃತ್ತವಾಗಿರುತ್ತದೆ. ಇದು ನಿಯಂತ್ರಿಸುವ ಮತ್ತು ಆಡಳಿತ ವ್ಯವಸ್ಥೆಯನ್ನೀಡುವ ಶಕ್ತಿ ಆಗಿರುವುದು. ಈ ಶಕ್ತಿಯ ಅರಿವು ವೈದಿಕ ವಿಚಾರ ಮತದಲ್ಲಿದ್ದು ಅದನ್ನು ಅವರು (ಋತ್) ಎಂದು ಕರೆದಿದ್ದಾರೆ. ಸಂಪೂರ್ಣ ವಿಶ್ವದ ರಚನೆ ಮತ್ತು ಅದರ ಕಾರ್ಯದಲ್ಲಿ ಋತುತುಮತಿ ಆದಿಶಕ್ತಿಯು ಅಂತರ್ಬಾಹ್ಯವಾಗಿಯೂ ಅನಂತಕೋಟಿ ಬ್ರಹ್ಮಾಂಡವನ್ನೇ ಆವರಿಸಿಕೊಂಡಿದೆ.

ಈ ಋತ್ ಮತ್ತು ಸತ್ಯ- ಇವೆರಡೂ ಅಭಿನ್ನವಾಗಿದೆ. ಸತ್ಯವೆಂದರೆ ಸನಾತನ ತತ್ವ; ಋತ್ ಎಂದರೆ ತೀವ್ರಗತಿ ಇದ್ದ ಈ ಜಗತ್ತಿನ ಸಕಲ ವ್ಯಾಪಾರಗಳಲ್ಲಿ ಕಂಡು ಬರುವ ನಿಯಮಬದ್ಧ ತತ್ವ. ಇವೆರಡೂ ಸೇರಿಕೊಂಡು ಸೃಷ್ಟಿ ಜ್ಞಾನವನ್ನು ಪೂರ್ಣಗೊಳಿಸುತ್ತವೆ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ಉಪನಿಷದ್ವಾಕ್ಯವನ್ನು ಗಮನಿಸಬೇಕು. ಇಲ್ಲಿ ದೇವ, ಈಶ್ವರ ಪರಮೇಶ್ವರ ಈ ಶಬ್ದಗಳನ್ನು ಬಳಸದೇ 'ಸತ್' ಎಂಬ ತಾತ್ವಿಕ ಶಬ್ದವನ್ನು ಬಳಸಲಾಗಿದೆ. ಇದೇ ನಿಲುವು ಉಪನಿಷತ್ಕಾಲದಲ್ಲಿ ಇನ್ನಷ್ಟು ವಿಸ್ತೃತಗೊಂಡಿದೆ. ಇದನ್ನು ಲಕ್ಷಿಸಿದರೆ ವೇದದಲ್ಲಿ ಕಂಡುಬರುವ 'ಈಶ್ವರ' ವಿಚಾರವು ಎಷ್ಟೊಂದು ಮುಂದುವರಿದ ವಿಚಾರವಾಗಿತ್ತು ಎಂಬುದರ ಅರಿವಾಗುತ್ತದೆ.

ಈಶ್ವರನ ಲಕ್ಷಣಗಳನ್ನು ನಿರ್ದೇಶಿಸುವ ಒಂದು ಮಹತ್ವದ ಶ್ಲೋಕವು 'ಶ್ವೇತಾಶ್ವತರ' ಉಪನಿಷತ್ತಿನಲ್ಲಿ ಬಂದಿದೆ. ಅದಕ್ಕೆ 'ದೇವಃ' ಎಂಬ ನಿಖರವಾದ ಉಲ್ಲೇಖವಿದೆ. ಇದು ಮಹತ್ವ ಪೂರ್ಣವಾ

ದದ್ದು. ಏಕೆಂದರೆ 'ಏಕೋದೇವಃ ಸರ್ವ ಭೂತೇಷು ಗೂಢಃ ಸರ್ವವ್ಯಾಪಿ ಸರ್ವ ಭೂತಾಂತರಾತ್ಮಾ ಕರ್ಮಾಧ್ಯಕ್ಷಃ ಸರ್ವ ಭೂತಾದಿವಾಸಃ ಸಾಕ್ಷಿ ಚೇತಾಕೇವಲೋನಿರ್ಗುಣಶ್ಚ'. ಡಿ.ವಿ.ಜಿ ಅವರು ಈ ಲಕ್ಷಣಗಳನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ. ಅದರಂತೆ ಮೂರ್ತಿರಾವ್ ಅವರೂ ಕೂಡ. ಆದರೆ ಅದರಲ್ಲಿ 'ಸಾಕ್ಷಿ' ಮತ್ತು 'ಕರ್ಮಾಧ್ಯಕ್ಷ' ಇವುಗಳ ಬಗ್ಗೆ ಮೂರ್ತಿರಾಯರು ಆಕ್ಷೇಪಿಸಿದ್ದಾರೆ.

## ದೇವತಾರಾಧನೆ

ಉಪನಿಷತ್ತುಗಳಲ್ಲಿ ಆತ್ಮಜ್ಞಾನಕ್ಕೆ ಅತಿಶಯ ಮಹತ್ವವನ್ನು ಕೊಟ್ಟಿದ್ದು ಕರ್ಮ ಹಾಗೂ ಆರಾಧನೆ ಇವುಗಳಿಗೆ ಗೌಣಸ್ಥಾನವಿದ್ದಿತು. ಮುಂದೆ ಮಧ್ಯ ಯುಗದ ಪುರಾಣ ಕಾಲದಲ್ಲಿ ಆರಾಧನೆಯು ಭಕ್ತಿಯ ರೂಪವನ್ನು ತಾಳಿತು; ದೊಡ್ಡ ಪ್ರಮಾಣದಲ್ಲಿ ಪ್ರಸಾರವಾಯಿತು. ಪುರಾಣಗಳ ಮೂಲಕ ಹಲವಾರು ದೇವತೆಗಳ ಅವತಾರ ಕಾರ್ಯದ ಮಹತ್ವವನ್ನು ಹಾಡಿ ಹೊಗಳಿ ಪ್ರಚಾರಗೊಳಿಸಲಾಯಿತು. ಇಂದಿನ ಪ್ರಚಲಿತ ಹಿಂದೂ ಧರ್ಮವು ಮುಖ್ಯವಾಗಿ ಪೌರಾಣಿಕ ಧರ್ಮವಾಗಿದೆ. ಇದರಲ್ಲಿ ಭಾಗವತ ಧರ್ಮ ಎಂದರೆ ಭಕ್ತಿಧರ್ಮ ಅಡಕವಾಗಿದ್ದು ಅದರ ಪ್ರಭಾವವು ಇತಿಹಾಸ ಕಾಲದಲ್ಲಿ, ಭಾರತದ ಪ್ರಾಂತಪ್ರಾಂತಗಳಲ್ಲಿ ಆಗಿ ಹೋದ ಸಂತ-ಮಹಂತರಿಂದ ಬೆಳೆಯಿತು. ಸಾರಾಂಶ: 'ಈಶ್ವರ' ಈ ತತ್ವವು ಆರಾಧನೆಯ ಈಶ್ವರ ಎಂದಾಯಿತು.

ಈ ಸಂದರ್ಭದಲ್ಲಿ 'ಧರ್ಮ' ಇದರ ಸ್ವರೂಪವನ್ನು ಭಾರತೀಯ ಹಿನ್ನೆಲೆಯಲ್ಲಿ ಆಲೋಚಿಸತಕ್ಕದ್ದು. ಈ ಧರ್ಮವು ಪಾಶ್ಚಾತ್ಯರು ಹೇಳುವ Religion ಅಲ್ಲ. ಅವರ ಧರ್ಮ ವಿಚಾರವನ್ನು ಆಧರಿಸಿ ನಾವು (Secular State) ಜಾತ್ಯತೀತ ರಾಷ್ಟ್ರದ ಕಲ್ಪನೆಯನ್ನು ಮುಂದಿಟ್ಟುಕೊಂಡಿದ್ದೇವೆ. ನಮ್ಮ ಸಂವಿಧಾನದಲ್ಲಿ ಉಕ್ತವಾದ ಈ ನಿಲುವು ಭಾರತೀಯರ ಧರ್ಮದ ಕಲ್ಪನೆಗೆ ಹೊಂದಿಕೊಳ್ಳುವುದೇ ಇಲ್ಲ. ನಮ್ಮಲ್ಲಿ 'ಧರ್ಮ' ಎಂದರೆ ಸ್ಥೂಲ ರೂಪದಲ್ಲಿ ವ್ಯಕ್ತಿ ಮತ್ತು ಸಮಾಜ ಇವುಗಳ ಅಸ್ತಿತ್ವಕ್ಕಾಗಿ ಮತ್ತು ಏಳಿಗೆಗಾಗಿ ಆವಶ್ಯಕವಿದ್ದ ಜೀವನ ಮೌಲ್ಯಗಳು ಹಾಗೂ ಆಚಾರ ತತ್ವಗಳು ಇವುಗಳ ಸಮುಚ್ಚಯ. ಈ ಧರ್ಮ ಸಂಕಲ್ಪನೆಯಲ್ಲಿ 'ದೇವರು' ಎಂಬ ಉಲ್ಲೇಖವೇ ಇಲ್ಲ. Religion ಎಂಬಲ್ಲಿಯ ಧರ್ಮವು ಆರಾಧನೆಯ ಮಾರ್ಗವಾಗಿದೆ. ಹೀಗಿರುವುದರಿಂದ ಆ ಸಂದರ್ಭದಲ್ಲಿ ಮಾತ್ರ ದೇವರು ಆವಶ್ಯಕನಾಗುತ್ತಾನೆ. ಇದುವೆ ಭಕ್ತಿಮಾರ್ಗ.

ಭಾರತದಲ್ಲಿ ಈ ಭಕ್ತಿಮಾರ್ಗವನ್ನು ಮನೆಮನೆಗೆ ತಲುಪಿಸಲು ಕೆಲವು ಅಪರಿಹಾರ್ಯ ಸಾಧನಗಳನ್ನು ಎಂದರೆ ಕಥೆ, ದಂತಕಥೆ, ಆಖ್ಯಾನ, ಉಪಾಖ್ಯಾನ- ಇವುಗಳನ್ನು ಬಳಸಲಾಯಿತು. ಆದರೆ ಇವುಗಳಲ್ಲಿಯ ತಾತ್ವಿಕ ನಿಲುವನ್ನು ಬದಿಗಿರಿಸಿ, ಸಾಮಾನ್ಯ ಭಕ್ತಿ ಮಾರ್ಗವು ಭಜನೆ, ಕೀರ್ತನೆಗಳತ್ತ ಹೆಚ್ಚು ವಾಲಿತು. ಅದಕ್ಕಿಂತ ಹೆಚ್ಚಾಗಿ ಅಂಧಶ್ರದ್ಧೆಯು ಆವರಿಸಿತು. ಈ ಅಂಧಶ್ರದ್ಧೆಯ ಕಾರಣದಿಂದ ಸಾಮಾಜಿಕ ಅನ್ಯಾಯಗಳು ನಡೆದುವು. ಧರ್ಮದ ಬಗ್ಗೆ, ದೇವರ ಬಗ್ಗೆ ವಿಪರೀತ ಕಲ್ಪನೆಗಳು ಹುಟ್ಟಿಕೊಂಡವು. ಜೊತೆಗೆ ಕರ್ಮಕಾಂಡವು ಅತಿರೇಕಗೊಂಡು, ಪರಿಶುದ್ಧ ಭಕ್ತಿ ಮತ್ತು ಕರ್ಮ ಮಲಿನಗೊಂಡವು. ಈ ರೂಪವನ್ನು ತಾಳಿದ ವಿಕೃತಿಯನ್ನೇ ಪ್ರಕೃತಿ ಎಂದು ಬಗೆಯುವುದು ತಪ್ಪಾಗುತ್ತದೆ. ಪೌರಾಣಿಕ ಕಥೆಗಳಲ್ಲಿ, ದೃಷ್ಟಾಂತಗಳಲ್ಲಿ ಕಂಡುಬರುವ ದೇವರ ಬಾಹ್ಯ ಆಕೃತಿ, ರೂಪಗಳನ್ನಷ್ಟೆ ನಾವು ಗ್ರಹಿಸಲಾಗದು.

ತಿಳಿಯಬೇಕಾದ ಮಾತೆಂದರೆ, ಅಂಥ ರೂಪಗಳನ್ನು (ನಾಲ್ಕು ಕೈಗಳು, ಸೊಂಡಿಲು, ಬಾಲ, ಇತ್ಯಾದಿ) ರಚಿಸಿದವರು ದೃಷ್ಟಾರರೇ ಆಗಿದ್ದರು. 'ದೇವರು ಒಬ್ಬನೇ, ಆತನ ರೂಪಗಳು ಹಲವು' ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು. ಆದರೆ ಭಿನ್ನರುಚಿರ್ಹಿಲೋಕಃ' ಮತ್ತು 'ಮಾನವರ ತಿಳಿವಳಿಕೆಯ ಮಟ್ಟವು ಒಂದೇ ಇಲ್ಲ' ಎಂಬ ಮಾತು ಅವರಿಗೆ ತಿಳಿದಿತ್ತು. ಆದರೆ ಪೂರ್ಣತೆಯತ್ತ ಸಾಗುವ ಆಸಕ್ತಿ ಇರುವ ಅಪೂರ್ಣ ಮಾನವನನ್ನು ಆತ್ಮೋನ್ನತಿಯ ಮಾರ್ಗದತ್ತ ಕೊಂಡೊಯ್ಯಲು, ಅವನಲ್ಲಿದ್ದ ಅರ್ಹತೆಯ ಮಟ್ಟವನ್ನು ಗಮನಿಸಿ

ಸೂಕ್ತ ರೀತಿಯಲ್ಲಿ ಅವನಿಗೆ ಮನದಟ್ಟು ಮಾಡಿ ಕೊಡಬೇಕೆನ್ನುವ ಪ್ರಯತ್ನ ಅಲ್ಲದೆ ಸಾಮಾನ್ಯರ ಬುದ್ಧಿಗೆ ದೇವರ ನಿರಾಕಾರ, ಅಮೂರ್ತ ಸ್ವರೂಪವು ಎಟಕುವದಿಲ್ಲವಾದ್ದರಿಂದ, ಸಾಕಾರದ ಸಗುಣ ಸ್ವರೂಪದ ದೇವರ ಮೂರ್ತಿ(ಗಳು) ಅವುಗಳ ವಿವಿಧ ರೂಪಗಳು ಸಾಧನಸಾಮಗ್ರಿಯಾಗುತ್ತವೆ; ಪ್ರತೀಕಗಳೆನಿಸುತ್ತವೆ.

## ದೇವರನು ಕುರಿತ ಬುದ್ಧಿವಾದ

ದೇವರನ್ನು ನಂಬುವವರು-ಈಶ್ವರ ವಾದಿಗಳು- ಭಾವುಕತನದಿಂದ ಹಾಗೆ ಮಾಡುವರೆಂದೂ ದೇವರ ಅಸ್ತಿತ್ವವನ್ನು ಒಪ್ಪದೇ ಇರುವವರು ಬುದ್ಧಿವಾದಿಗಳಾಗಿ ಹಾಗೆ ತಿಳಿದವರೆಂದೂ ಸಾಮಾನ್ಯ ಗ್ರಹಿಕೆ ಇದೆ.

ಈ ಬುದ್ಧಿವಾದದಿಂದಲೇ ಮೂರ್ತಿರಾಯರು ತಮ್ಮ ವಿಚಾರಗಳನ್ನು ಮಂಡಿಸುತ್ತ 'ನಮಗೆ ಜೀವನ ಮೌಲ್ಯದ ಮೂರ್ತಿ ರೂಪ-- ಆದರೆ ಈಶ್ವರವಾದಿಗಳು ಪೂರ್ಣ ಅದರಲ್ಲಿಯೂ ಪ್ರೇಮಸ್ವರೂಪನಾದ ದೇವರು ನಮಗೆ ಬೇಕಾಗಿದ್ದಾನೆ. ಅವನೆಲ್ಲಿ?' ಎಂದು ಕೇಳುತ್ತಾರೆ. ವಿಚಾರ ಮಾಡಿಯೇ ದೇವರ ಅಸ್ತಿತ್ವವನ್ನು ಮನ್ನಿಸುತ್ತಾರೆಯೆ ಹೊರತು ಅಂಧಶ್ರದ್ಧೆಯಿಂದಲ್ಲ. ಡಿ.ವಿ.ಜಿ. ಅವರ ವಿಚಾರ ಪ್ರಗಲ್ಭತೆಯನ್ನು ನಾವು ಪ್ರಶ್ನಿಸಿ ಅವರನ್ನು ಅಂಧಶ್ರದ್ಧೆಯವರು ಎಂದು ಹೇಳಲು ಸಾಧ್ಯವೆ? ದೇವರ ಸಾಕ್ಷಾತ್ಕಾರವು ಬುದ್ಧಿಯಿಂದ ಆಗುವದಿಲ್ಲವೆಂಬುದನ್ನು ಬುದ್ಧಿಯೇ ಹೇಳುತ್ತದೆ.' ದೇವರ ಮಾತಂತಿರಲಿ, ಸಮಾಜವು ಒಪ್ಪಿಕೊಂಡ ಮೌಲ್ಯಗಳಲ್ಲಿಯ ಒಂದಾದರೂ ಸಿದ್ಧಿಯನ್ನು ಬುದ್ಧಿಯು ಸಿದ್ಧಪಡಿಸಿದೆಯೆ? ಬುದ್ಧಿ ಅಂದರೆ ವಿಚಾರ, ಗ್ರಹಿಕೆ ಪರಾವಲಂಬಿಯಾದುದು, ಅದಕ್ಕೆ ಪ್ರತ್ಯಕ್ಷ ಅನುಭವ ಬೇಕಾಗುತ್ತದೆ ದೇವರು ಇಲ್ಲ- ಎಂದು ಸಿದ್ಧಪಡಿಸುವರ ಅದಕ್ಕೆ ಆಳವಾಗಿ ಮಥನ ಮಾಡಬೇಕಾಗುತ್ತದೆ, ಅನುಭವದ ಹಿನ್ನೆಲೆಯಲ್ಲಿ, ಕೇವಲ ಇಂದ್ರಿಯಗಳ ಮೂಲಕ ಅಥವಾ ಬಾಹ್ಯ ಸ್ವರೂಪದ ಮೂಲಕ ಅಲ್ಲ. ಇನ್ನೊಬ್ಬರ ದೇಹವನ್ನು ನಾವು ಕಣ್ಣಿನಿಂದ ಕಾಣಬಹುದು. ಆದರೆ ಅವನ ಮನಸ್ಸನ್ನು ಅದು ಕಾಣಿಸುವದಿಲ್ಲವೆಂದು ಮನಸ್ಸೇ ಇಲ್ಲ, ಅವನಿಗೆ ಎಂದು ಅನ್ನಲಿಕ್ಕಾಗುವುದೆ? ಹಾಗೆ ಇದೆ ಎಂದು ಒಪ್ಪುವವರು ಯಾವ ಯುಕ್ತಿವಾದದಿಂದಲೂ ಸಿದ್ಧಪಡಿಸಲು ಸಾಧ್ಯವಿಲ್ಲ. ಬುದ್ಧಿ-ವಿಚಾರ ಶಕ್ತಿ ಮಾನವನ ಪ್ರಗತಿಯ ಲಕ್ಷಣವೇ ನಿಜ. ಆದರೆ ಭಾವನೆಯ ಸ್ಥಾನ ಜೀವನದಲ್ಲಿ ಅಷ್ಟೇ ಮಹತ್ವದ್ದು. ಇವೆರಡರ ಹಾಗೂ ಕ್ರಿಯಾಶಕ್ತಿ ಸಂಯೋಗವೇ ಜೀವನವನ್ನು ಮುನ್ನಡೆಸುತ್ತದೆ.

ಮೂರ್ತಿರಾಯರಿಗೆ ಮಾನವತಾವಾದದ ಬಗ್ಗೆ ವಿಶೇಷ ಆಕರ್ಷಣೆ ಇದೆ. ಅದು ಬೇಕು. ಆದರೆ ಇಡೀ ವಿಶ್ವಕ್ಕೆ ಅನ್ವಯಿಸಿ ದೇವರ ಅಸ್ತಿತ್ವದ ಬಗ್ಗೆ ನಾವು ಗ್ರಹಿಸುವಾಗ ಮಾನವತಾವಾದವು ಒಂದು ಸಂಕುಚಿತ ವಿಚಾರ ಎನಿಸುವುದಿಲ್ಲವೆ? ವಿಶ್ವಾತ್ಮಕ ದೇವರು ಸಕಲ ಪ್ರಾಣಿ ಹಾಗೂ ಅಚಲವಾದ ವಿಶ್ವವನ್ನು ತುಂಬಿಕೊಂಡಿದ್ದಾನೆ. 'ದೇವರು' ಪರಿಕಲ್ಪನೆಯಲ್ಲಿ ವಿಶ್ವಬಂಧುತ್ವವಿದೆ. ನಮ್ಮ ತತ್ವಪ್ರಣಾಲಿಯಲ್ಲಿ ಸರ್ವೇಪಿ ಸುಖಿನಃ ಸಂತು' ಎಂಬ ಮಾತಿದೆ. ಈ ಸುಖದ ಆಶಯವು ಮಾನವರಿಗೆ ಮಾತ್ರವಲ್ಲ, ಎಲ್ಲ ಚರಾಚರ ವಸ್ತುಗಳಿಗೆ, ಸಮಸ್ತ ವಿಶ್ವಕ್ಕೆ ಅನ್ವಯಿಸುವಂತಿರಬೇಕು. ಅವಕ್ಕೆ ಬುದ್ಧಿಯು ಸಹಾಯಕವಾಗಬಲ್ಲುದು.

ಮನುಷ್ಯನು ಎಷ್ಟೆಂದರೂ ಅಪೂರ್ಣನು. ದೇವರ ಇರುವಿಕೆಯನ್ನು ಅಲ್ಲಗಳೆದು ಆ ಸ್ಥಾನದಲ್ಲಿ ಮಾನವನನ್ನು ಕಲ್ಪಿಸುವುದಗಲ್ಲಿ ಈ ಅಪೂರ್ಣತೆ ವ್ಯಕ್ತವಾಗುವುದು. ಉಚ್ಚಮಟ್ಟದ, ಉದಾತ್ತ ಹಾಗೂ ದಿವ್ಯ ಆಧ್ಯಾತ್ಮಿಕ ಪ್ರೇರಣೆಯೇ ಮಾನವನ್ನು 'ಅಸತ್'ದಿಂದ 'ಸತ್' ಕಡೆಗೆ, ಅಂಧಕಾರದಿಂದ ಪ್ರಕಾಶದತ್ತ, ಮೃತ್ಯುವಿನಿಂದ ಅಮೃತದತ್ತ, ದುಃಖತ್ರಯದಿಂದ ಮುಕ್ತಮಾಡಿ ಪರಮಾನಂದ ಪ್ರಾಪ್ತಿಯತ್ತ ಕೊಂಡೊಯ್ಯುವುದು. ಈ ಪರಮ ಪ್ರಾಪ್ತಿಯೇ ದೇವರು. ಅದರ ಅನ್ವೇಷಣೆ ಮತ್ತು ಪ್ರಾಪ್ತಿ ನಮ್ಮ ಜೀವನಕ್ಕೆ ಮಾನವ ಬಂಧುತ್ವವೂ ಸೇರಿದಂತೆ-ತಾರಕವಾದದ್ದು.

●

ಹರಟೆ

# ಮುದುಕರು

• ಡಿ. ಗುಂಡೂರಾವ್

**ಈ** ಪ್ರಪಂಚದಲ್ಲಿ ಮುದುಕರಷ್ಟು ಅಲಕ್ಷಕ್ಕೆ ಗುರಿಯಾದವರು ಯಾರೂ ಇಲ್ಲ. ಹಲವಾರು ವರ್ಷ ಸಂಸಾರದ ಹಿರಿಯರೆನಿಸಿಕೊಂಡು ಯಜಮಾನಿಕೆಯನ್ನು ನಡೆಸಿದವರಿಗೆ ವೃದ್ಧಾಪ್ಯದ ಕಾರಣದಿಂದಾಗಿ ಎಲ್ಲವೂ ಶೂನ್ಯ. ಮಗ-ಸೊಸೆ ತಮ್ಮ ಪ್ರಪಂಚದಲ್ಲಿ ಮುಳುಗಿರುವಾಗ ಇವರನ್ನು ಕೇಳುವವರು ಯಾರು? ಎಲ್ಲರೂ ತಮ್ಮನ್ನು ಅನಾದರ ಮಾಡುತ್ತಿದ್ದಾರೆಂದು ಇವರೇ ಕಲ್ಪಿಸಿಕೊಳ್ಳುವರೋ, ಅಥವಾ ವಾಸ್ತವವಾಗಿ ಕುಟುಂಬದ ಸದಸ್ಯರ ಉಪೇಕ್ಷೆಗೆ ಗುರಿಯಾಗಿದ್ದಾರೋ ಎನ್ನುವುದನ್ನು ಆ ಮನಃಶಾಸ್ತ್ರಜ್ಞರೇ ಹೇಳಬೇಕು. ಕೆಲಸದಲ್ಲಿದ್ದಾಗ ತಗ್ಗಿ ಬಗ್ಗಿ ನಡೆಯುತ್ತಿದ್ದವರು ಈಗ ರಾಜಾರೋಷವಾಗಿ ಅವರನ್ನು ಅಲಕ್ಷ ಮಾಡುತ್ತಾರೆ. ಅವರಿವರು ಹೋಗಲಿ, ಕೈ ಹಿಡಿದ ಹೆಂಡತಿಯೇ ಅನಾದರ ಮಾಡುತ್ತಿದ್ದಾಳೆಂಬ ಶಂಕೆ ಇವರಿಗೆ. ಆ ಗೃಹ ಲಕ್ಷ್ಮಿ ಒಮ್ಮೊಮ್ಮೆ ಬೇಜಾರಾದಾಗ, 'ಮನೆಯಲ್ಲಿ ಇಷ್ಟು ವರ್ಷ ಮೂಗೆತ್ತಿನಂತೆ ದುಡಿಯುವ ಬದಲು ನಾನು ಯಾವುದಾದರೂ ಸರ್ಕಾರಿ ಕೆಲಸಕ್ಕೆ ಸೇರಿದ್ದರೆ ಇಷ್ಟೊತ್ತಿಗೆ ನನಗೂ ಪೆನ್ಷನ್ ಬರುತ್ತಿತ್ತು. ಹಾಗೂ ಕೆಟ್ಟೆ, ಹೀಗೂ ಕೆಟ್ಟೆ ರಂಗಧಾಮ' ಎಂದು ನಿಟ್ಟುಸಿರು ಬಿಡುವುದುಂಟು. ಪತಿರಾಯ ಹೆಂಡತಿಯ ಮಾತು ಕೇಳಿ ಶೂನ್ಯದತ್ತ ನೋಡುವರು. ಮೊಮ್ಮಗಳು ಸುನಂದನಿಗೆ ಏನಾದರೂ ಕೆಲಸ ಹೇಳಿದರೆ, "ಹೋಗಿ ತಾತ, ನಿಮಗೆ ಮಾಡೋಕ್ಕೆ ಕೆಲಸವಿಲ್ಲ" ಎಂದು ಹೇಳಿ ಜಾಗ ಖಾಲಿ ಮಾಡುವಳು. ಕುಟುಂಬದ ಸದಸ್ಯರೊಡನೆ ಸಾಕು ನಾಯಿ ಕೂಡ ತಾತನನ್ನು ಅನಾಥರನ್ನಾಗಿ ಮಾಡಿ ಪೇಟೆಗೆ ಕಂಬಿಕೀಳುತ್ತದೆ. "ಇವರೆಲ್ಲಾ ಯಾಕೆ ನನ್ನ ಕಂಡ್ರೆ ಹೀಗಾಡುತ್ತಾರೆ ಎನ್ನುವುದು ನನಗೆ ಗೊತ್ತು. ಬರೋ ಸಂಬಳದಲ್ಲಿ ಈಗ ಅರ್ಧಕ್ಕರ್ಧ ಬರುತ್ತಲ್ಲ ಅದಕ್ಕೆ. ಹಾಳು ಈ ರೋಗ ಒಂದು ಇಲ್ಲದಿದ್ದರೆ, ನಾನೂ ಕೆಲಸಕ್ಕೆ ಸೇರಿ ಸಂಪಾದಿಸುತ್ತಿದ್ದೆ. ಈಗ ಅದಕ್ಕೂ ಕಲ್ಲು ಬಿತ್ತು" ಎಂದು ಅವರು ಕೊರಗುವುದುಂಟು.

ಕುಟುಂಬದ ಹಿತ ಶತ್ರುಗಳ ಕಾಟದಿಂದ ಇವರು ಬೇಸತ್ತು ಹೋಗಿರುತ್ತಾರೆ. ಸ್ವತಂತ್ರವಾಗಿ ತಿನ್ನುವುದಕ್ಕಾಗಲಿ ಉಣ್ಣುವದಕ್ಕಾಗಲಿ ಇವರಿಗೆ ಸ್ವಾತಂತ್ರ್ಯವಿಲ್ಲ. 'ಜಿಲೇಬಿ ನಿಮ್ಮ ಮೈಗೆ ಆಗುವುದಿಲ್ಲ. ಸಕ್ಕರೆ ಪದಾರ್ಥ ತಿನ್ನಬೇಡಿ. ಬೋಂಡ, ಪಕೋಡ ಅಂತ ಪ್ರಾಣ ಬಿಡುತ್ತೀರಲ್ಲಾ ನಾಳೆ ಬಿಪಿ ಹೆಚ್ಚಾದರೆ ಯಾರು ಮಾಡೋರು ನಿಮಗೆ?' ಎಂದು ಮೂಗು ಮುರಿಯುವುದುಂಟು. 'ದಿನಾ ಯಾರು ಇವರಿಗೆ ಚಪಾತಿ ಬಡಿಯೋರು ಎಲ್ಲರ ಹಾಗೆ ಅನ್ನ ತಿಂದುಕೊಂಡು ಹೋದರೆ ಅದೊಂದು ಥರಾ. ದಿನಾ ಗೋಧಿ ಅನ್ನದ ನೈವೇದ್ಯ ಆಗಬೇಕು ಈ ಮುದಿ ದೇವರಿಗೆ. ಸಾಕಪ್ಪ ಸಾಕು ಈ ಬವಣೆ' ಎಂದು ಸೊಸೆ ಅಂದಿದ್ದನ್ನು ಅನ್ನಿಸಿಕೋ ಬೇಕು.

ಇನ್ನು ಕೆಲವು ಘಟವಾಣಿ ಸೊಸೆಯರು ಅತ್ತೆ ಮಾವನಿಗೆ ಹೆಚ್ಚಾಗಿ ಹಾಕಿದರೆ ಹಾಸಿಗೆಯಲ್ಲಿ ಕಕ್ಕಸು ಮಾಡಿಕೋತಾರೆ ಎಂದು ಬಹಳ ಹಿಡಿತವಾಗಿ ಬಡಿಸಿ ಅವರನ್ನು ದಯಾಹತ್ಯೆಗೀಡು ಮಾಡುವರು. ಈ ಕಿರುಕುಳವನ್ನು ಸಹಿಸುತ್ತ 'ಅಯ್ಯೋ ದೇವರೇ ನಾನು ಯಾರಿಗೂ ಬೇಡವಾದೆನೆ, ಇವರಿಗೆಲ್ಲ ನನ್ನ

ಪೆನ್ಷನ್ ಬೇಕು, ನಾನು ಮಾತ್ರ ಬೇಡ. ಪರಮಾತ್ಮಾ ಈ ಶರಪಂಜರದಿಂದ ಎಂದಿಗೆ ನಮ್ಮ ಬಿಡುಗಡೆ?' ಎಂದು ಈ ವೃದ್ಧ ದಂಪತಿಗಳು ಪಲುಬುವರು. ಮಗನಲ್ಲಿ ದೂರು ಹೇಳಿದರೆ ಏನೂ ಪ್ರಯೋಜನವಿಲ್ಲ ಏಕೆಂದರೆ ಅವನು ಪತ್ನಿ ಪಕ್ಷಪಾತಿ.

ಸ್ವಲ್ಪ ಗಟ್ಟಿಮುಟ್ಟಾಗಿರುವ ವಿಧುರರ ಕತೆಯೇ ಬೇರೆ. ಅವರು ಪುನರ್ ವಿವಾಹವಾಗಿ ಮತ್ತೊಮ್ಮೆ ಸಂಸಾರದ ಕೆಸರನ್ನು ತುಳಿಯುವ ಸಂಭ್ರಮದಲ್ಲಿರುತ್ತಾರೆ. ಪುರೋಹಿತರಿಗೆ ಲಂಚ ಕೊಟ್ಟಾದರೂ ಬಾಸಿಂಗ ಕಟ್ಟಿಕೊಳ್ಳಲು ದುಡುಕುತ್ತಾರೆ.

ಕಾಮವೆನ್ನುವುದು ಮನುಷ್ಯ ಜೀವದೊರಸೆಯಿಂದ ಇರುವವರೆಗೂ ಬೆನ್ನು ಹತ್ತಿದ ಬೇತಾಳ. ನಮ್ಮ ಬೀದಿಯಲ್ಲಿ ಒಬ್ಬ ರಿಟೈರಾದ ಮುದುಕರಿದ್ದಾರೆ. ಸುಂದರವಾದ ಹೆಂಡತಿಯಿದ್ದರೂ ಪ್ರತಿದಿನ ಇವರು 'ಪರಸ್ತ್ರೀ ವೀಕ್ಷಣಾ ಕೇಂದ್ರ'ಕ್ಕೆ ತಪ್ಪದೇ ಭೇಟಿ ನೀಡುತ್ತಾರೆ. ಅವರೇ ಅದರ ಸ್ಥಾಪಕ-ನಿರ್ದೇಶಕರು. ಅಯ್ಯೋ, ಹಾಗಂದರೆ ನಿಮಗೆ ಅರ್ಥವಾಗಲಿಲ್ಲವೇ? ಅದು ನಮ್ಮ ಮನೆಯ ಹತ್ತಿರದಲ್ಲೇ ಇರುವ ಕೆ.ಎಸ್.ಆರ್.ಟಿ.ಸಿ. ಬಸ್ ಷೆಲ್ಟರ್. ಈ ಖಯಾಲಿ ವೃದ್ಧರು ಅಲ್ಲಿ ಬಸ್ ಕಾಯುತ್ತಿರುವಂತೆ ನಟಿಸುತ್ತಾ ನಿಂತಿರುತ್ತಾರೆ. ಅವರಿಗೆ ಬಸ್ಸಿನಲ್ಲಿ ಹೋಗುವ ಯಾವ ಆತುರದ ಕೆಲಸವೂ ಇರುವುದಿಲ್ಲ. ಅಲ್ಲಿ ನಿಂತುಕೊಂಡು ಬಸ್ ಹತ್ತುವ, ಇಳಿಯುವ ಚೆಂದದ ಸುಂದರಿಯರ ಮುಖಾರವಿಂದವನ್ನು ನೋಡುವ ಘನಕಾರ್ಯ ಇವರದ್ದು. ಬಸ್ಸಿಗೆ ಹತ್ತುವ ವೀಳ್ಯದೆಲೆ ಮಾರುವ ಕಪ್ಪು ಕುರೂಪಿಗಳನ್ನು ಇವರು ಕಣ್ಣೆತ್ತಿಯೂ ನೋಡುವುದಿಲ್ಲ! ಬೆಳಗ್ಗಿನಿಂದ ಬೈಗಿನವರೆಗೆ ಅಲ್ಲಿಯೇ ನಿಂತಿರುತ್ತಾರೆ. ಮನೇಲಿ ಮಡದಿ ತಿಂಡಿ ಮಾಡುವುದಕ್ಕೆ ಸ್ವಲ್ಪ ಹಸಿಮೆಣಸಿನಕಾಯಿ, ಕೊತ್ತಂಬರಿ - ತನ್ನಿರೆಂದು ಹೇಳಿದರೆ, "ನನಗೆ ಟೈಂ ಇಲ್ಲ, ಕೆಲಸವಿದೆ" ಎಂದು ಹೇಳಿ ಹೊರಟು ಹೋಗುವರು. ಆದರೆ ಅಪ್ಸರೆಯರ ಉಬ್ಬುತಗ್ಗುಗಳನ್ನು ನೋಡುತ್ತ ನಿಲ್ಲುವುದೆಂದರೆ ತುಂಬಾ ಖುಷಿ.

ಬರುತ್ತಿದ್ದ ಸಂಬಳ ಅರ್ಧಕ್ಕೆ ಕುಗ್ಗಿ ಹೋದ ಮೇಲೆ ಈ ಮುದುಕರಿಗೆ ಲಾಟರಿ ಟಿಕೆಟ್ಟಿನ ಮೇಲೆ ಬಹಳ ಮೋಹ. ದಿಢೀರನೆ ಶ್ರೀಮಂತರಾಗುವ ಬಯಕೆ. ಅದು ಸಹಜವೂ ಹೌದು ಎನ್ನಿ. ಮೂವತ್ತು ವರ್ಷ ಸರ್ಕಾರದಲ್ಲಿ ದುಡಿದು ಅದು ಕೊಡುವ ಗೋಪಾಳ ಯಾವುದಕ್ಕೂ ಸಾಲದೆ, ಸಾಹುಕಾರರಾಗಲು ಲಾಟರಿಯೆಂಬ ಸುಲಭೋಪಾಯ ಅವರಿಗೆ ಬಹಳ ಅಪ್ಯಾಯಮಾನವಾಗಿ ಕಂಡಿರಬೇಕು. ಸೀತೆಯ ಮಾಯಾ ಮೃಗದಂತೆ ಇನ್ನೇನು ಸಿಕ್ಕೇಬಿಡ್ತು ಅನ್ನುವಾಗ ದೂರ ಹೊರಟುಹೋಗುತ್ತದೆ. ನೀವು ಯಾವುದೇ ಲಾಟರಿ ಟಿಕೆಟ್ಟು ಮಾರುವ ಕಡೆ ಹೋಗಿ ಅಲ್ಲಿ ವೃದ್ಧ ಗಿರಾಕಿಗಳೇ ಬಹಳವಾಗಿ ಘೇರಾಯಿಸಿರುತ್ತಾರೆ. ಆದರೆ ಲಾಟರಿ ಲಕ್ಷ್ಮಿಗೆ ಬಡವರು, ಮಧ್ಯಮ ವರ್ಗದವರೆಂದರೆ ಒಂದು ಬಗೆಯ ಅಲರ್ಜಿ. ಎಷ್ಟೇ ಆಗಲಿ, ಬಡವರು ಬಿಕನಾಸಿಗಳಲ್ಲವೆ? ಆದ್ದರಿಂದ ಅವಳು ಶ್ರೀಮಂತರನ್ನು ಒಲ್ಲೈಸುವಂತೆ ಬಡವರನ್ನು ಒಲ್ಲೈಸುವುದಿಲ್ಲ. ಲಾಟರಿಯಲ್ಲಿ ಬಂಪರ್ ಬಹುಮಾನ ಬರಲೆಂದು, ತಿರುಪತಿ ತಿಮ್ಮಪ್ಪನಿಗೆ, ಧರ್ಮಸ್ಥಳದ ಮಂಜುನಾಥನಿಗೆ, ಉಡುಪಿ ಕೃಷ್ಣನಿಗೆ ಹರಕೆ ಹೊತ್ತವರು ಎಷ್ಟೋ ಜನ. ಆದರೆ ಫಲಿತಾಂಶ ಬಂದಾಗ ತಿರುಪತಿ ತಿಮ್ಮಪ್ಪನಿಗೆ ಮುಡಿ ಕೊಟ್ಟವರ ಪಾಡೇ ಇವರಿಗೂ ಆಗಿರುತ್ತದೆ. ಈ ಕಡೆ ಕಾಸೂ ಹಾಳು, ಆ ಕಡೆ ತಲೆಯೂ ಬೋಳು.

ಒಬ್ಬ ಮುದುಕರಿಗೆ ಕನಸಿನಲ್ಲಿ ಬಂಪರ್ ಬಹುಮಾನ ಬಂತು. ಅವರ ಸಡಗರಕ್ಕೆ ಮಿತಿಯೇ ಇಲ್ಲ. ಕೂಡಲೇ ಒಂದು ಕಾಂಟೆಸ್ಸಾ ಕಾರನ್ನು ಕೊಂಡು ತಮ್ಮ ಪ್ರೀತಿಯ ನಲ್ಲೆಯನ್ನು ಕೂರಿಸಿಕೊಂಡು ಹೋಗುತ್ತಿದ್ದಾಗ ಎದುರಿಗೆ ಬಂದ ರಾಕ್ಷಸಾಕಾರವಾದ [illegible]ಒಂದು ಇವರ ಕಾರಿಗೆ ಡಿಕ್ಕಿ ಹೊಡೆಯಿತು. ಇವರು ಗಾಬರಿಯಿಂದ ತಮ್ಮ ಮುರುಕು ಮಂಚದಿಂದ ಕೆಳಕ್ಕೆ ಬಿದ್ದರು! ಇವರ ಹೆಂಡತಿ ಗಾಬರಿಯಿಂದ [illegible]ತೂರೀ ಏನಾದರೂ ಕನಸು-ಗಿನಸು [illegible] ಎಂದು ವಿಚಾರಿಸಿದಾಗ, 'ಏನಿಲ್ಲ, ಏನಿಲ್ಲ ಏನೋ ತೆದರಿಕೆ ಯಾಯ್ತು ಅಷ್ಟೇ' ಎಂದರು. ಅವರಿಗೆ ಕನಸಿನ ಸಾರಾಂಶವನ್ನು ಹೇಳಲು ನಾಚಿಕೆ. ಮಡದಿಯ ಮುಖ ಕೈ ಕಾಲುಗಳನ್ನು ಮುಟ್ಟಿಮುಟ್ಟಿ ನೋಡಿ,

'ಸದ್ಯ ನಿನಗೇನೂ ಆಗಲಿಲ್ಲವಲ್ಲ. ದೇವರು ದೊಡ್ಡವನು' ಎಂದರು. ಹೆಂಡತಿಯಂಥ ಆತ್ಮೀಯ ವಸ್ತು ಯಾವುದಿದೆ ಜಗತ್ತಿನಲ್ಲಿ? ಲಾಟರಿಯಲ್ಲಿ ಬರದಿದ್ದರೂ ಚಿಂತೆಯಿಲ್ಲ ಎಂದುಕೊಂಡು ಸಮಾಧಾನಪಟ್ಟುಕೊಂಡರು. ಮಾರನೇ ದಿನದ




ಪತ್ರಿಕೆಯಲ್ಲಿ, ನಗರದ ತ್ರೀಸ್ಟಾರ್ ಹೋಟೇಲಿನ ಮಾಲಿಕರಿಗೆ ೧೨ ಲಕ್ಷ ಬಂಪರ್ ಬಹುಮಾನ ಬಂದಿತೆಂದು ಓದಿ ಅವರ ಮನಸ್ಸಿಗೆ ತುಂಬಾ ನೋವಾಯಿತು. ಹಳ್ಳ ಇದ್ದ ಕಡೆಗೇನೇ ಯಾವಾಗಲೂ ನೀರು ಹರಿಯುವುದು ಎಂದು ಹೇಳಿಕೊಂಡು ಪೇಪರನ್ನು ಉಂಡೇ ಮಾಡಿ ಬಿಸಾಕಿದರು!

ಇನ್ನು ಕೆಲವು ಮುದುಕರು ಬಿಸಿನೆಸ್ಸಿನ ಓನಾಮ ಗೊತ್ತಿರದಿದ್ದರೂ ತಮಗೆ ಬಂದ ಪ್ರಾವಿಡೆಂಟ್ ಫಂಡ್, ಗ್ರಾಚ್ಯುಯಿಟಿ ಹಣದಿಂದ ಡೈರಿ ಪ್ರಾರಂಭಿಸಿ, ಪಾಪರ್ ಆಗಿ ಡೈಲಿ ಪಶ್ಚಾತ್ತಾಪ ಪಟ್ಟುಕೊಂಡರು. ಮತ್ತೆ ಕೆಲವು ಸಾಹಸಿಗರು ಮಾರ್ವಾಡಿಯೊಡನೆ ಒಪ್ಪಂದ ಮಾಡಿಕೊಂಡು, ಲಕ್ಷ ರೂಪಾಯಿ ಸಾಲ ತೆಗೆದುಕೊಂಡು ಟ್ಯಾಕ್ಸಿ ಓಡಿಸಿದರು. ಒಂದಾರು ತಿಂಗಳು ಈ ಉದ್ಯಮ ಚೆನ್ನಾಗಿಯೇ ನಡೆಯಿತು. ಅನಂತರ ಏಳರಾಟದ ಶನಿ ಪ್ರಾರಂಭವಾಯಿತು. ಒಂದು ದಿನ ಡ್ರೈವರು ಮನೆಯ ಮುಂದೆ ಕಾರನ್ನು ನಿಲ್ಲಿಸಿ, ಪರಾರಿಯಾದ. ಪುಣ್ಯಾತ್ಮ ಕಾರನ್ನು ಹೊಡೆದುಕೊಂಡು ಹೋಗಲಿಲ್ಲವೆಂದು ಸಮಾಧಾನ ಪಟ್ಟುಕೊಳ್ಳುತ್ತಿರುವಾಗಲೇ ಅವರಿಗೆ ವಿಷಯ ತಿಳಿದದ್ದು -ಕಾರಿನ ಅಂತರಂಗದ ಸಾರವತ್ತಾದ ಭಾಗವನ್ನೆಲ್ಲಾ ಲಪ

ಟಾಯಿಸಿಕೊಂಡು, ಮಿರುಗುತ್ತಿದ್ದ ತಗಡಿನ ಹೊರಮೈ ಕವಚ ಮಾತ್ರ ಬಿಟ್ಟು ಹೋಗಿದ್ದಾನೆಂದು.

ಈ ಜಾತಿಯ ಇನ್ನೊಂದು ರಖಂ ಇದೆ. ಅವರಿಗೆ ದುಡ್ಡೆಂದರೆ ಪಂಚಪ್ರಾಣ. ಬ್ಯಾಂಕಿನಲ್ಲಿ ಕೂಡಿ ಹಾಕಿ ಹಾಕಿ ಪಾಸ್‌ಬುಕ್ಕನ್ನು ನೋಡಿ ಆನಂದಪಡುವುದು. ಆ ನಿರ್ಜೀವವಾದ ಪಾಸ್ ಬುಕ್‌ನಲ್ಲಿ ಇದೆ ನೋಡಿ ಅದೇ ಇವರ ಪ್ರಾಣ. ನಮ್ಮ ಮನೆಯ ಹತ್ತಿರದಲ್ಲೇ ಒಬ್ಬ ದಂಪತಿಗಳಿದ್ದಾರೆ. ಇಬ್ಬರೂ ದೊಡ್ಡ ಕೆಲಸದಲ್ಲಿದ್ದು ರಿಟೈರಾದವರು. ಕೈ ತುಂಬಾ ಪೆನಷನ್ ಬರುತ್ತದೆ. ಮಕ್ಕಳಿಲ್ಲ. ಅವರು ಸರಿಯಾಗಿ ತಿನ್ನಲ್ಲ ಉಣ್ಣಲ್ಲ ಉಡೋಲ್ಲ. ಮಕ್ಕಳಿಲ್ಲದ್ದು ಒಳ್ಳೆಯದೇ ಆಯಿತು. ಹೆಚ್ಚು ದುಡ್ಡು ಕೂಡಿ ಹಾಕಬಹುದು ಎಂದು ಸಮಾಧಾನ ಪಟ್ಟುಕೊಳ್ಳುತ್ತಾರೆ. ಒಬ್ಬರಿಗೆ ಒಂದು ಹತ್ತು ಪೈಸಾ ಕೊಡುವುದಿಲ್ಲ, ತಮ್ಮ ಸ್ವಂತಕ್ಕೂ ಖರ್ಚು ಮಾಡಿಕೊಳ್ಳುವುದಿಲ್ಲ. ಡಾಕ್ಟರರು, "ನಿಮ್ಮಿಬ್ಬರಿಗೂ ಬಿ.ಪಿ. ಇದೆ. ಆದಷ್ಟು ಮಟ್ಟಿಗೆ ಎಳ್ನೀರು ಕುಡಿಯಿರಿ ಒಳ್ಳೇದು" ಎಂದು ಹೇಳಿದರೆ, "ಮಾಡೋಕೆ ಕೆಲಸವಿಲ್ಲ. ಗಡ್ಡಕ್ಕೆ ಬೇರೆ ಸೀಗೇಕಾಯಿ" ಎಂದು ಬಿಡುವರು. ತಮ್ಮ ಸಕ್ಕರೆ ರೋಗಕ್ಕೆ ಚಿಕಿತ್ಸೆ ಮಾಡಿಸಿಕೊಳ್ಳಲಿಲ್ಲ; ಬಿ.ಪಿ. ಹತೋಟಿಯಲ್ಲಿಡಲು ಮಾತ್ರೆ ನುಂಗಲಿಲ್ಲ. ಡಾಕ್ಟರಿಗೇನು ಗೊತ್ತು ಅವರ ತಲೆ? ಎಂದು ಉಪೇಕ್ಷೆ ಮಾಡಿ ಒಂದು ವಾರದ ಅಂತರದಲ್ಲಿ ಗಂಡ ಹೆಂಡಿರಿಬ್ಬರೂ ಹರೋಹರ ಎಂದುಬಿಟ್ಟರು.

ನಮ್ಮೂರಲ್ಲಿ 'ವೃದ್ಧರಸಂಜೆಸಂಘ'ವೊಂದಿದೆ. ಎಲ್ಲಾ ಮುದುಕರು ಅಲ್ಲಿ ಸೇರಿ ತಮ್ಮ ಕಾಲದ ಗತವೈಭವವನ್ನು ಜ್ಞಾಪಿಸಿಕೊಂಡು ಸುಖಿಸುತ್ತಾರೆ.

ಯಾರಾದರೂ ಒಬ್ಬರು ಶುರು ಮಾಡ್ತಾರೆ: 'ಏನಂತೀರಿ ಸುಬ್ಬಣ್ಣನವರೆ, ನಮ್ಮ ಕಾಲದ ತಿಂಡಿ ತೀರ್ಥದ ಹಾಗೆ ಈಗೆಲ್ಲಿದೆ? ಮದ್ದೂರು ವಡೆ ಅಂತ ಮಾಡ್ತಾ ಇದ್ದರು. ತಿನ್ನೋದಕ್ಕೆ ಹತ್ತು ನಾಲಿಗೆ ಆದರೂ ಸಾಲದು. ಈಗಲೂ ಮಾಡ್ತಾರೆ ಮದ್ದೂರು ವಡೆ ಅಂತ, ಬೆರಣಿ ಇದ್ದ ಹಾಗೆ ಇರತ್ತೇ.' 'ಅದೀಗ ಸರಿಯಾದ ಮಾತು' ಎಂದು ಇನ್ನೊಬ್ಬರು ಡೋಲು ಬಡಿಯುತ್ತಾರೆ. 'ಆ ಕಾಲ ಈಗೆಲ್ಲಿ ಬರುತ್ತೆ, ಭೀಮರಾಯರೇ, ಮೈಸೂರಿನ ವಿದ್ಯಾರ್ಥಿ ಭವನ ಗೊತ್ತಲ್ಲ ಅಲ್ಲಿ ರವೆ ವಡೆ ಅಂತ ಮಾಡ್ತಾ ಇದ್ದ ಮುಂಡೇಗಂಡ! ಬಾಯಲ್ಲಿಟ್ಟರೆ ಕರಗಿಹೋಗುತ್ತಿತ್ತು. ಅದಕ್ಕೆ ಕೇವಲ ಆರು ಕಾಸು ನೋಡಿ. ಆ ಸುವರ್ಣಯುಗ ಮತ್ತೆಲ್ಲಿ ಬರುತ್ತೆ! ಕಾಲ ಅಷ್ಟೊಂದು ಸುಲಭವಾಗಿದ್ದುದರಿಂದ ಆರು ಹೆಣ್ಣು ಮಕ್ಕಳ ಮದುವೆ ಮಾಡಿದೆ. ಈ ಕಾಲದಲ್ಲಾಗಿದ್ದರೆ ಗೋವಿಂದ! ಇನ್ನೊಬ್ಬ ಸಿನಿಮಾಪ್ರಿಯ ಮುದುಕರು 'ಏನ್ರೀ ಈಗಿನ ಕಾಲದ ಅಧ್ವಾನದ ಸಿನಿಮಾಗಳು! ಬರೀ ಫೈಟಿಂಗು, ರೇಪಿಂಗು, ಇದು ಒಂದು ಸಿನಿಮಾನೇ? ನಮ್ಮ ಕಾಲದಲ್ಲಿ ಶಾಂತಾರಾಂ ಡೈರೆಕ್ಷನ್ನಿನ ಪಿಕ್ಚರ್ರುಗಳು ಬರುತ್ತಿತ್ತು. ಏನು ಚೆನ್ನಾಗಿ ಡೈರೆಕ್ಟ್ ಮಾಡೋನ್ರಿ, ಆ ಮಹಾರಾಯ. ದುನಿಯಾ ನ ಮಾನೆ, ಅಮರಜ್ಯೋತಿ, ಸಿಕಂದರ್ ಪುಕಾರ್ ಮುಂತಾದ ಚಿತ್ರಗಳನ್ನು ಮೂರು ಮೂರು ಸಲ ನೋಡ್ತಾ ಇದ್ದೆವು. ಒಂದು ಸಲ ಏನಾಯ್ತು ಅಂತೀರಿ. ಆಗಿನ ಹಿಂದೀ ಚಿತ್ರದ ಸುಪ್ರಸಿದ್ಧ ತಾರೆ ಶಾಂತಾ ಆಪ್ಟೇನ ಬೆಂಗಳೂರು ಪ್ಯಾರಾಮೌಂಟ್ ಟಾಕೀಸಿಗೆ ಕರೆಸಿದ್ದರು. ಆಗ ನಾನಿನ್ನೂ ಹುಡುಗ. ಅವಳ ಆಟೋಗ್ರಾಫ್ ಕೇಳಿ ಪಡೆದಿದ್ದೆ. ಅದನ್ನು ಈಗಲೂ ಇಟ್ಟುಕೊಂಡಿದೀನಿ. ಒಂದು ಸಲ ಏನಾಯ್ತು ಅಂತೀರಿ. ಫಿಲ್ಮಿಂಡಿಯಾದ ಸಂಪಾದಕ ಬಾಬುರಾವ್ ಪಟೇಲ್ ಎಂಬುವವರು ಶಾಂತಾ ಆಪ್ಟೆಯ ಬಗ್ಗೆ ಏನೋ ಅಶ್ಲೀಲವಾದ್ದನ್ನು ಬರೆದ ಎಂದು ಅವರ ಆಫೀಸಿಗೆ ಹೋಗಿ ಕೆನ್ನೆಗೆ ಬಾರಿಸಿದಳು ಈ ಘಟವಾಣಿ. ನಮ್ಮ ಕಾಲದಲ್ಲಿ ಎವರ್‌ಗ್ರೀನ್ ಹೀರೋ ಅಶೋಕ್ ಕುಮಾರ್‌ನ ಬಂಧನ್, ಕಂಗನ್ ಮುಂತಾದುವು ಬಹಳ ಜನಪ್ರಿಯವಾಗಿದ್ದುವು. ಅವನು ನೋಡ್ರಿ ಮುದುಕ ಆಗಿದ್ದಾನೆ. ಆದರೂ ಇನ್ನೂ ನಾಟ್‌ಔಟ್. ದೇವಿಕಾರಾಣಿ, ಲೀಲಾ ಚಿಟ್ನಿಸ್, ಕಾನನಬಾಲಾ, ಶಾಂತಾ ಹುಬ್ಳೀಕರ್, ಒಬ್ಬರಿಗಿಂತ ಒಬ್ಬರು ಚೆನ್ನಾಗಿ ಮಾಡೋರು,' ಎಂದು ತಮ್ಮ ಸಿನಿಮಾ ಪಾಂಡಿತ್ಯವನ್ನು ಪ್ರದರ್ಶಿಸಿದರು. 'ನಾಟಕ ಅಂತೂ ಎಷ್ಟು ಚೆನ್ನಾಗಿ ರೋದು? ವರದಾಚಾರ್ರು, ವೀರಣ್ಣ, ಮಹಮದ್

ಪೀರ್ ಮುಂತಾದ ಅಭಿಜಾತ ನಟರ ಅಭಿನಯವನ್ನು ನೋಡಲು ಎರಡು ಕಣ್ಣೂ ಸಾಲದು, ಅದಿರಲಿ 'ನಟ ಭಯಂಕರ' ಗಂಗಾಧರ ರಾಯರು ನಾಗೇಂದ್ರರಾಯರು, ಸುಬ್ಬಯ್ಯನಾಯ್ಡು... ಅಂದ ಹಾಗೆ ನೀವು ವಸಂತ ಸೇನೆ ನೋಡಿದ್ದೀರೋ ಇಲ್ಲವೋ, ನಾಗೇಂದ್ರ ರಾಯರ ವಿದೂಷಕನ ಪಾತ್ರವಂತೂ ಸೂಪರ್ಬ್. ಲಕ್ಷ್ಮೀಬಾಯಿಯ ಅಭಿನಯವಂತೂ ಈಗಲೂ ಕಣ್ಣಿಗೆ ಕಟ್ಟಿದ ಹಾಗಿದೆ,' ಎಂದು ಮಗದೊಬ್ಬರು. 'ಬೀದಿ ದೀಪಗಳು ಹತ್ತಿಕೊಂಡಿತು. ಈ ನಾಟಕ ಪ್ರವಚನವನ್ನು ನಾಳೆಗೆ ಮುಂದುವರಿಸೋಣ. ಏಳಿಏಳಿ ಹೋಗೋಣ,' ಎಂದರು ಇನ್ನೊಬ್ಬರು.

ಮರಣವೆಂದರೆ ಎಲ್ಲರಿಗೂ ಭಯ ತಾನೇ? ವಯಸ್ಸಾದವರಿಗೆ ಮರಣವೆಂದರೆ ಇನ್ನೂ ಹೆದರಿಕೆ. ಸಾವಿಗಿಂತ ಭೀತಿಯೇ ಅವರನ್ನು ಹೆಚ್ಚು ಕಂಗಾಲು ಮಾಡುವುದು. ನಮ್ಮ ಬೀದಿಯಲ್ಲಿ ಯಾರೋ ಒಬ್ಬ ವೃದ್ಧರು ಸತ್ತು ಹೋದರು. ಈ ಸುದ್ದಿಯನ್ನು ಕೇಳಿದ ಇತರ ವೃದ್ಧರು ತಾವೇ ಸತ್ತು ಹೋದರೇನೋ ಎಂದು ನಿಶ್ಚೇಷ್ಟಿತರಾದರು. ಮುದುಕರ ಸಾವೇ ನೋಡೋಕೆ ಚೆಂದ ಎಂದು ಒಬ್ಬ ಕವಿ ಹೇಳಿದ್ದಾನೆ. ಇನ್ನೂ ಕೆಲವು ಧೈರ್ಯಶಾಲಿಗಳಾದ ಮುದುಕರು, ಹುಟ್ಟಿದ ಮೇಲೆ ಚಟ್ಟ ಸ್ವತಃ ಸಿದ್ಧ; ಅದಕ್ಯಾಕೆ ಹೆದರಿಕೊಳ್ಳಬೇಕು? ಎಂದು ಹೇಳಿಕೊಂಡು ತಮಗಿಲ್ಲದ ಧೈರ್ಯವನ್ನು ತಂದುಕೊಳ್ಳುತ್ತಾರೆ. ಅಂತೂ ಸಾವು ಎಂಬ ಗುಮ್ಮ ಇವರನ್ನು ಹೆದರಿಸಿ ಹೆದರಿಸಿ ಇನ್‌ಸ್ಟಾಲ್‌ಮೆಂಟ್‌ಗಳಲ್ಲಿ ಸಾಯುವಂತೆ ಮಾಡುತ್ತದೆ.

ಅಲ್ಲ, ವೈದ್ಯ ವಿಜ್ಞಾನ ಇಷ್ಟು ಮುಂದುವರೆದಿದೆಯಲ್ಲಾ ಈಗ ಮನುಷ್ಯರು ಚಿರಂಜೀವಿಗಳಾಗಿರುವಂತೆ ಏನನ್ನಾದರೂ ಏಕೆ ಕಂಡು ಹಿಡಿಯಬಾರದು. ಈ ಧನ್ವಂತರಿ ಶಿಖಾಮಣಿಗಳು? ಎಂದು 'ಒನ್ ಫೂಟ್ ಇನ್ ದಿ ಗ್ರೇವ್'ನಲ್ಲಿರುವ ವೃದ್ಧ ಶಿಖಾಮಣಿಗಳೊಬ್ಬರು ಕೇಳುತ್ತಾರೆ. ಅವರಿಗೆ ಮರಿಮಕ್ಕಳ ಮದುವೆ ನೋಡುವ ಆಸೆ. ●

"ಪ್ರಿಯೆ, ನಿನ್ನ ಮುಖ ನೋಡ್ತಾ ಕುಳಿತ್ರೆ
ಬಿಲ್‌ಕುಲ್ ಟೈಂ ಹೋದದ್ದೇ ಗೊತ್ತಾಗೊಲ್ಲ.
ಬಿಲ್ ಬೆಳೀತಾ ಹೋದದ್ದೂ ತಿಳಿಯಲ್ಲ."

# ನೇಣಿನ
# ನೆಂಟನ
# ನೋವಿನ
# ಕಥೆ



ಆತ
ಜನ ಭಾವಿಸಿದಂತೆ
ಕ್ರೂರಿಯಲ್ಲ....

"**ನೂ**ರ್ರುಪಾಯ್ ಕೊಡ್ತಾರೆ. ಜತೇಗೆ ಹೋಗ್-ಬರೋ ಗಾಡಿ ಖರ್ಚು. ದಿನಕ್ಕೆ ಹತ್ರುಪಾಯ್ ಭತ್ಯ. ಉಳಿಯೋಕೆ-ಊಟಕ್ಕೆ ವ್ಯವಸ್ಥೇನೂ ಮಾಡಿರ್‍ತಾರೆ. ತಿಂಗಳಿಗೆ ಎಂಟ್‌ನೂರ್ರುಪಾಯ್ ವಿಶೇಷ ಭತ್ಯನೂ ಸಿಕ್ಕತ್ತೆ.... ಆದ್ರೆ...."

ಆತ ಮಾತು ಕತ್ತರಿಸಿ ಮೌನವಾದದ್ದಕ್ಕೆ ನೀವು ಬೇರೆ ಅರ್ಥವನ್ನೇ ಕಟ್ಟುತ್ತೀರಿ ಅಂತ ನನಗೆ ಗೊತ್ತು. "ಇಷ್ಟು ಕೊಟ್ರೂ ಇನ್ನೂ ಬೇಕು ಅಂತಾನೆ ತಾನೆ?" ಅಂತ ನೀವು ಕೇಳೋ ಮುಂಚೆ ಅವನ ಮುಂದಿನ ಮಾತನ್ನ ಸ್ವಲ್ಪ ಲಕ್ಷ್ಯವಿಟ್ಟು ಆಲಿಸಿ.

"ಆದ್ರೆ.... ಇಂಥಾ ಕೆಲಸಾ ಮಾಡ್ಬೇಕಲ್ಲಾ ಸಾಹೇಬ್ರೆ.... ನಿದ್ದೆ ಎಲ್ಬರತ್ತೆ? ಊಟಾನಾದ್ರೂ ಹ್ಯಾಗ್ ರುಚಿಸತ್ತೆ ಹೇಳಿ ಸಾಹೇಬ್ರೆ.... ರಾತ್ರೆಯೆಲ್ಲಾ ನಾನು ಮರುದಿನಾ ಮಾಡ್ಬೇಕಾಗಿರೋದನ್ನ ನೆನಿಸ್ಕೋಳ್ತಾನೇ, ಮಗ್ಗುಲು ಬದಲಿಸ್ತಿರ್ತೀನಿ. ಆ ದೈನ್ಯ ಮುಖಾನೇ ಕಣ್ಣು ಮುಂದೆ ಬಂದು ನಿಲ್ಲತ್ತೆ. ಅಣಕ್ಸತ್ತೆ. ಅವ್‌ಡುಗಟ್ಟೆ ಅಮಚಿಕೊಳ್ಳೋಕ್ ಬರತ್ತೆ.... ಆದೇ ಹಳವಂಡದಲ್ಲಿ ಅಪ್ಪುಗ್ಗೆ ಹಚ್ಚೆ ಕೂತು ಬಿಡ್ತೀನಿ. ಹಾಗೆ ಕೂತೂ ಕೂತೂ ಸಾಕಾಗಿ ಒಂದ್ ಬೀಡಿ ಹಚ್ತೀನಿ. ಆಗ ಸ್ವಲ್ಪ ಸಮಾಧಾನ. ಆದ್ರೆ.... ಆದಾದ್ರೂ ಎಷ್ಟು ಹೊತ್ತಿನದು? ಅಂತೂ ಹೀಗೆ ಬೆಳಗಿನ ಮೂರು ಗಂಟೇವರ್ಗೂ ಬೀಡಿ ಸೇತ್ತಾನೇ ಇರ್ತೀನಿ... ಹ್ಯಾಗೋ ಕಣ್ಣು ಮುಚ್ಕೊಳ್ತವೆ.... ಆದ್ರೆ.... 'ಅಹ್ಮದ್... ಉಠೋ.... ತಯಾರಿ ಕರ್‌ನಾ ಹೈ..., ಅಂತ ಲಾರಿಯಿಂದ

ರೂಮ್ಯಾಗ್ಲು ಬಡೀತಾರಲ್ಲ ಅವರು.... ಒಂದೊಂದ್ಸಲ ಇದನೆಲ್ಲಾ ಬಿಟ್ಟು ಓಡ್ಹೋಗಿಬಿಡ್ಬೇಕು ಅನ್ಸತ್ತೆ... ಆದ್ರೆ.... ಆ ಅನಿಸಿಕೆ ಬಂದಾಗಲೆಲ್ಲ ನನ್ನಾಕೆಯ ಮುಖ- ನನ್ನ ಮಕ್ಕಳ ಮುಖಗಳು ತೇಲಿಬಂದು 'ತಂದ್ರಾ? ಬೇಗ ಕೊಡಿ... ಹಸ್ವೆ ತಾಳಕ್ಯಾಗಲ್ಲ...' ಅಂದ್ಹಾಗ್ ಅನ್ಸತ್ತೆ... ಮನಸ್ಸನ್ನ ಕಲ್ಲು ಮಾಡ್ಕೊಂಡ್ ಹೊರಡ್ತೀನಿ...."

ಹಾಗಾದ್ರೆ ಅಹ್ಮದ್ ಅನ್ನೋ ಹೆಸರಿನ ಈ ವ್ಯಕ್ತಿ ಮಾಡ್ತಿರೋ ಕೆಲಸವಾದರೂ ಏನು?

"ನೇಣು ಹಾಕೋದು."

ಅವನ ಮಾತಿನಿಂದ ಬೆಚ್ಚಿ ಬೀಳಬೇಡಿ. ಅದು ಆತ ತನ್ನ ಅಪ್ಪನ ಕಾಲದಿಂದಲೂ ಮಾಡಿಕೊಂಡು ಬಂದಿರುವ ವೃತ್ತಿ. ಬಿಡಬೇಕೆಂದುಕೊಂಡಷ್ಟೂ ಗಟ್ಟಿಯಾಗಿ ಇವನನ್ನು ಅಪ್ಪಿಕೊಂಡಿರುವ ವೃತ್ತಿ ಅದು. ಹೀಗಾಗಿ ತನಗೆ ಗೊತ್ತುಬಲ್ಲ ಜಾಗಗಳಲ್ಲಿ, ಬೀದಿಗಳಲ್ಲಿ, ಜನಗಳಲ್ಲಿ ಆತ ಮೈಚಳಿಬಿಟ್ಟು ತಿರುಗಾಡುವಂತೆಯೇ ಇಲ್ಲ. ಭಯಮಿಶ್ರಿತ ಹಾಗೂ ಸಂಶಯಗ್ರಸ್ತ ಕಣ್ಣುಗಳು ತನ್ನನ್ನು ಇರಿಯುತ್ತಿವೆ ಅನ್ನಿಸಿ ತಲೆ ತಗ್ಗಿಸಿಕೊಂಡೇ ಓಡಾಡುತ್ತಾನೆ. ಈತನ ಮಕ್ಕಳೋ ಜನರಾಡುವ ಕುತ್ಸಿತ ಮಾತುಗಳನ್ನು ಕೇಳಿ ಕೇಳಿ ಕುಬ್ಜರಾಗಿ ಹೋಗಿದ್ದಾರೆ. ಅಹ್ಮದ್‌ನ ಹೆಂಡತಿಗೆ ಗೆಳತಿಯರೆಂಬುವವರಿಲ್ಲ. ಸಂಬಂಧಿಕರಂತೂ ಮೊದಲೇ ಇಲ್ಲ. ಈತನ ಮನೆಗೆ ಬರಹೋಗುವವರೂ ಇಲ್ಲ. ನೇಣು ಹಾಕಬೇಕಾದ ಸಂದರ್ಭಗಳಲ್ಲಿ ಮಾತ್ರ ಪೊಲೀಸು ಜೀಪು ಧೂಳು ಹಾರಿಸುತ್ತ ಬಂದು, ನಿಂತು, ಧೂಳು ಹಾರಿಸುತ್ತಲೆ ಹೋಗುತ್ತದೆ, ಅಷ್ಟೆ.

ಹೀಗೆ ಬದುಕಿನಲ್ಲಿ 'ಇಲ್ಲ' ಎಂಬುದರ ಪಾಲನ್ನೇ ಶತಶಃ ಪಡೆದುಬಂದಿರುವ ನತದೃಷ್ಟ ಅಹ್ಮದ್. ಮ್ಲಾನವದನದ, ಐವತ್ತರಂಚಿನ, ಈ ತೆಳ್ಳನೆಯ ವ್ಯಕ್ತಿಯನ್ನು ನೋಡಿದ ಯಾರೇ ಆದರೂ 'ಈತ ಇಂಥ ಕೆಲಸ ಮಾಡುತ್ತಾನೆ' ಎಂದು ಊಹಿಸಲೂ ಸಾಧ್ಯವಿಲ್ಲ.

ಉತ್ತರ ಪ್ರದೇಶದಲ್ಲಿ ಇಬ್ಬರು ಹಗ್ಗ ಹೊಸೆಯುವವರಿದ್ದಾರೆ. ಆ ಪೈಕಿ ಒಬ್ಬ ಈ ಅಹ್ಮದ್. ತನ್ನ ವೃತ್ತಿಯಿಂದ ರೋಸಿ ಹೋಗಿದ್ದಾನಾದರೂ ಮತ್ತೆ ಮತ್ತೆ ಈತನಿಗೇ ಕರೆ ಬರುತ್ತದೆ. ಆದಕ್ಕೆ ಕಾರಣ ಈತನ ಇನ್ನೊಬ್ಬ ವೃತ್ತಿ ಬಾಂಧವ, ಮೇರಠ್ ನಿವಾಸಿ, ಕಾಲೂಗೆ ವೃದ್ಧಾಪ್ಯ ಅಡರಿ, ಕಣ್ಣು ಮಂಜಾಗಿರುವುದು. ಕೈಗಳ ದೃಢತೆ ಕುಂದಿರುವುದು.

"ಬುದ್ಧಿ ತಿಳಿಯುವ ಹೊತ್ತಿಗಾಗಲೇ ನಾನು ನೇಣಿನ ನೆಂಟಸ್ತನ ಬೆಳೆಸಿಬಿಟ್ಟಿದ್ದೆ ಸಾಹೇಬ್ರೆ. ಅಪ್ಪ ಅದೇ ಕೆಲಸ ಮಾಡುತ್ತಿದ್ದನಲ್ಲ. ನೇಣಿನ ಹಗ್ಗ ತಯಾರಿಸುವುದನ್ನು ಆತ ಹೇಳಿಕೊಟ್ಟ. ಫಾಸಿಗೆ ಒಳಗಾಗುವ ವ್ಯಕ್ತಿಯನ್ನು ಅವಲಂಬಿಸಿ ಹಗ್ಗ ಹೊಸೆಯಬೇಕಾಗುತ್ತದೆ. ನೇಣಿನ ಅಳತೆ ಮತ್ತು ಹಗ್ಗದ ಮುಪ್ಪುರಿ ಹಾಕುವಿಕೆ ಒಂದು ರೀತಿಯಲ್ಲಿ ಕುಶಲ ಕೆಲಸವೆ. ನೇಣು ಹಾಕಬೇಕಾದ್ದು ಯಾರಿಗೆ, ಆತನ ಎತ್ತರವೆಷ್ಟು, ದೇಹದ ಭಾರವೆಷ್ಟು, ಕತ್ತು ತೆಳ್ಳಗಿದೆಯೋ-ದಪ್ಪವಿದೆಯೋ, ಈ ಎಲ್ಲಾ ಅಂಶಗಳನ್ನೂ ಗಮನಿಸ್ಬೋಬೇಕು. ಇದರಲ್ಲೇನಾದರೂ ತುಸುವೆ ತಪ್ಪಾದರೂ ವ್ಯಕ್ತಿಯ ಕುತ್ತಿಗೆ ಕತ್ತರಿಸಿಬಿಡುತ್ತದೆ. ಮಳೆಗಾಲದಲ್ಲೂ ಅಷ್ಟೆ. ನೀರಿನಲ್ಲಿ ತೊಯ್ದು ಕತ್ತಿಗಿಂತಲೂ ಹರಿತಗೊಂಡಿರುತ್ತದೆ," ಅಹ್ಮದ್ ಹೇಳುತ್ತಾನೆ.

ನೇಣು ಹಗ್ಗ ತಯಾರಿಸುವುದರಿಂದ ಅದನ್ನು ಫಾಸಿಗೊಳಗಾದ ವ್ಯಕ್ತಿಯ ಕತ್ತಿಗೆ ತೊಡಿಸಿ ಎಳೆಯುವವರೆಗಿನ ಕೆಲಸ ಅಹ್ಮದ್‌ನದು. ಈವರೆಗೆ ತಾನು ಹಾಕಿದ ನೇಣುಗಳು ಎಷ್ಟೆಂಬ ಕರಾರುವಾಕ್ಕಾದ ಲೆಕ್ಕವನ್ನಾತ ಇಟ್ಟಿಲ್ಲ.

"ಏನಿಲ್ಲೆಂದರೂ ಐವತ್ತಾದರೂ ಆಗಿರಬೇಕು. ಮೂವತ್ತು ವರ್ಷಗಳ ಹಿಂದೆ ೧೯೬೫ರಲ್ಲಿ, ಕಾನಪುರದಲ್ಲಿ, ಮಜೀದ್ ಎಂಬಾತನಿಗೆ ನೇಣು ಹಾಕಿದ್ದೇ ಮೊದಲ ಅನುಭವ. ಅಪ್ಪನ ಜತೆಗೆ ಇಂಥ ಕೆಲಸಕ್ಕೆ ಹೋಗ್ತಾ ಇದ್ನಲ್ಲ, ಹೀಗಾಗಿ ಏನೂ ಅನಿಸ್ಲಿಲ್ಲ. ಆದರೆ ಅಂದು ಮೊದಲ ಸಲ ನೇಣಿನ ಹಗ್ಗ ಎಳೆಯೋವಾಗ ಸ್ವಲ್ಪ ಮೈ ನಡುಕ ಉಂಟಾಗಿತ್ತು. ಅಪ್ಪ ಮಾಡುತ್ತಿದ್ದ ಹಾಗೆ ಕಣ್ಣು ಮುಚ್ಚಿಕೊಂಡೇ ಹಗ್ಗ ಎಳೆದೆ."

ಬರಿ ಉತ್ತರ ಪ್ರದೇಶವಲ್ಲ, ಬೇರೆ ರಾಜ್ಯಗ

---

● ಸೂರ್ಯವಂಶಿ

('ಧರ್ಮಯುಗ'ದಿಂದ ಸಾಭಾರ)

ಳಿಗೂ ಈ ಕೆಲಸಕ್ಕಾಗಿ ಅಹ್ಮದ್ ಆಮಂತ್ರಿಸಲ್ಪಟ್ಟಿದ್ದಾನೆ. ಆಸಾಮ, ಮಧ್ಯಪ್ರದೇಶ ಹೀಗೆ. ಪ್ರಧಾನಿ ಇಂದಿರಾರನ್ನು ಹತ್ಯೆಗೈದ ಸತ್ವಂತ್‌ಸಿಂಗ್ ಮತ್ತು ಕೇಹರ್ ಸಿಂಗ್ ಫಾಸಿಗೇರಿಸಲ್ಪಟ್ಟಾಗ 'ಅತಿರಿಕ್ತ ವ್ಯವಸ್ಥೆ'ಗೆಂದು ಅಹ್ಮದ್ ಕರೆಸಲ್ಪಟ್ಟಿದ್ದ.

"ನೇಣುಗಂಬದ ಬಳಿ ಬಂದವನ ಕೊನೆಯ ಕ್ಷಣಗಳ ಮಾನಸಿಕ ಸ್ಥಿತಿ ಹ್ಯಾಗಿರುತ್ತದೆ?" ಎಂದು ಕೇಳಿದರೆ ಅಹ್ಮದ್ ಮೊದಲ ಉತ್ತರವಾಗಿ ನಿಟ್ಟುಸಿರೊಂದನ್ನು ಹೊರಗೆಡುವುತ್ತಾನೆ. ಆಮೇಲೆ ತಲೆ ಅಲ್ಲಾಡಿಸುತ್ತ 'ತ್‌ಚ್' ಎನ್ನುತ್ತಾನೆ.

"ಏನಂತ ಹೇಳ್ಳಿ ಸಾಹೇಬ್ರೆ? ಸಾಯುವವನ ಸ್ಥಿತಿ ಇನ್ ಹ್ಯಾಗಿರುತ್ತೆ? ಬರಿ ಒಂದು ಕಲ್ಲು ಬಡದ್ರೂ ಜೀವ ಎಲ್ಲಿ ಹೋಗತ್ತೋಂತ ಭಯ ಪಡೋದು ಮನುಷ್ಯನ ಸ್ವಭಾವ. ಅಂಥದ್ರಲ್ಲಿ ಇನ್ನು ಗಲ್ಲುಗ್ಗಂಬದ ಬಳಿ ನಿಂತವನ ಪರಿಸ್ಥಿತೀನ ನೀವೇ ಅಂದಾಜು ಮಾಡ್ಕೊಳ್ಳಿ. ನನಗಂತೂ ನೇಣು ಹಾಕಿಸ್ಕೊಳ್ಳೋನ ಮುಖಾ ನೋಡೋ ಧೈರ್ಯಾನೇ ಇರಲ್ಲ. ಬಹುತೇಕ ಕೈದಿಗಳಿಗೆ ಒಂದ್ ರೀತಿ ಸ್ಥೈರ್ಯ ಬಂದ್ಬಿಟ್ಟಿರತ್ತೆ. ಶಾಂತವಾಗೇ ಸಾವಿಗೆ ತಲೆಕೊಡ್ತಾರೆ. ನಾನಂತೂ ತಲೆತಗ್ಗಿಸ್ಕೊಂಡೇ ಈ ಕೆಲಸಾ ಮಾಡೋದು. ಇಲ್ಲ ಅಂದ್ರೆ ಆತನತ್ತ ಬೆನ್ನು ತಿರುಗಿಸಿರ್ತೀನಿ. ಕೈದಿಯ ಮುಖದ ಮೇಲೆ ತಲೆ ಮುಚ್ಚೋ ಹಾಗೆ ಕರಿ ಬಟ್ಟೆ ಗವಸು ಹಾಕಿದ್ಮೇಲೆ ಕುತ್ತಿಗೆಗೆ ನೇಣು ಬಿಗೀತೀನಿ. ಆಗೆಲ್ಲಾ 'ಥತ್ ನನ್ನ ಜನ್ಮಕ್ಕಿಷ್ಟು...' ಅಂದ್ಕೊಳ್ತೀನಿ... 'ಇಂಥಾ ಪಾಪವನ್ನ ಮಾಡ್ತೀದ್ದೀನಲ್ಲಾ ಏ ಖುದಾ, ನನ್ನನ್ನು ಕ್ಷಮ್ಸು' ಅಂತ ಒಳಗೊಳಗೇ ಅಳ್ತೀರ್ತೀನಿ. ಕೈದಿಯ ಕಾಲ ಕೆಳಗಿನ ಹಲಗೆ ಸರಿಸಲ್ಪಟ್ಟು ದೇಹ ಅಂತರಾಳದಲ್ಲಿ ತೂಗ್ತಿದ್ದಾಗೇ ನಾನಲ್ಲಿಂದ ಬಡಬಡ ನಡದುಬಿಡ್ತೀನಿ... ಗಲ್ಲಿಗೇರಿದವನ ಕೊನೆಯ ಯೋಚನೆ ಏನಿರತ್ತೊ ಗೊತ್ತಿಲ್ಲ. ಆದ್ರೆ ನಾನು ಮಾತ್ರ ಮುಂದೊಂದು ದಿನ ಗರಬಡಿದವರ ಹಾಗಿರ್ತೀನಿ. ಯಾರ್ಜತೇಗೂ ಮಾತಿಲ್ಲ, ಕತೆಯಿಲ್ಲ...."

ತನ್ನ ಕೈಯಿಂದ ನೇಣು ಹಾಕಿಸಿಕೊಂಡು ಸತ್ತವ ಇಂಥಿಂಥವ ಅಂತ ಗೊತ್ತಾದಾಗ ಅಹ್ಮದ್‌ಗೆ ಅನ್ನಿಸುವುದಾದರೂ ಏನು?

"ಕೊಲೆ ಮಾಡಿದ್ದ, ಸಾಲು ಸಾಲು ಮಾನ ಭಂಗ ಮಾಡಿದ್ದ, ದೇಶದ್ರೋಹದ ಕೆಲಸ ಮಾಡಿದ್ದ ಅಂತ ಗೊತ್ತಾದಾಗ ಅಂಥ ಅಧಮನಿಗೆ ನನ್ನ ಕೈಯಿಂದ ಸಾವು ಬಂತಲ್ಲ ಅಂದುಕೋತೀನಿ. ಆದರೆ ನಿರಪರಾಧಿಯಾಗಿದ್ರೂ, ಯಾರ್‍ಯಾರದೋ ಕೈವಾಡದಿಂದ ಮರಣ ದಂಡನೆಗೆ ಗುರಿಯಾಗಿದ್ದ ಅಂತ ತಿಳಿದಾಗ ಅಂಥವನಿಗೆ ನೇಣು ಹಾಕಿ ನಾನು ಪಾಪದ ಹೊರೆ ಹೆಚ್ಚಿಸ್ಕೊಂಡೆನಲ್ಲ ಅಂತ ಚಡಪಡಿಸ್ತೀನಿ...."

ಹಾಗಾದರೆ ಅಂಥ ಅನುಭವ ಎಂದಾದರೂ ಆದದ್ದುಂಟೆ ಅಹ್ಮದ್‌ಗೆ?

"ಹೂಂ.... ಒಂದು ಪ್ರಕರಣದಲ್ಲಿ ಅಪ್ಪ ಹಾಗೂ ಆತನ ಮೂವರು ಮಕ್ಕಳು ಫಾಸಿ ಶಿಕ್ಷೆಗೊಳಗಾದರು.... ಹಮೀರಪುರದೋರು. ಮೂವರು ಮಕ್ಕಳಲ್ಲಿ ಒಬ್ಬ ಇನ್ನೂ ಹದಿವಯದ ತರುಣ. ನೋಡಿದರೇನೇ ಮುಗ್ಧ ಅಂತ ಗೊತ್ತಾಗಿಬಿಡೋವಂಥಾ ಮುಖ. ಅವನು ನಿರಪರಾಧಿ ಅಂತ ಹೇಳಿದ್ದನ್ನ ಕೇಳಿದ್ದೆ. ನೇಣು ಹಾಕೋವಾಗ ಕುತೂಹಲದಿಂದ ಅವನ ಮೋರೆಯತ್ತ ಕಣ್ಣು ಹಾಯಿಸಿದೆ. ಸಾಹೇಬ್ರೆ.... ಆ ಮುಖ ಮುಂದೆ ಆರು ತಿಂಗಳವರ್ರೂ ಕಣ್ಣಮುಂದೆ ಕಟ್ಟಿದ್ದಾಂಗಿತ್ತು....."

ಅಹ್ಮದ್ ಇಂಥ ಹಲವಾರು ಅನುಭವಗಳೊಂದಿಗೆ ದಿನ ದೂಡುತ್ತಿದ್ದಾನೆ. ಇದು ಬಿಟ್ಟು ಬೇರೆ ವೃತ್ತಿಗೆ ಹೋಗಬೇಕೆಂದರೆ ಆತನಿಗೆ ಅಂಟಿದ ಅಭಿಶಾಪ ಅಡ್ಡಗಾಲು ಹಾಕುತ್ತದೆ.

"ಇಷ್ಟು ಹಣದಲ್ಲೇ ಬಾಳುತ್ತಿದ್ದೇವೆ ಸಾಹೇಬ್ರೆ. ನಾಲ್ವರು (೨ + ೨) ಮಕ್ಕಳು, ನಾವಿಬ್ಬರು. ಒಟ್ಟು ಆರು ಮಂದಿಯ ಹೊಟ್ಟೆ ತುಂಬಬೇಕು. ಹುಡುಗಿಯರಿಬ್ಬರೂ ಮದುವೆಯ ವಯಸ್ಸಿಗೆ ಬಂದಿದ್ದಾರೆ. ದೊಡ್ಡ ಮಗ ಎಲ್ಲೆಲ್ಲೋ ದಿನಗೂಲಿಗೆ ಹೋಗುತ್ತಾನೆ. ನಾನೂ ಉಳಿದ ದಿನಗಳಲ್ಲಿ ಅಂಗಡಿಯೊಂದರಲ್ಲಿ ಬೆಳ್ಳಿಯ ಕಾಗದದ ಕೆಲಸ (ಸಿಹಿ ತಿಂಡಿ, ಪಾನ್ ಬೀಡಾಗಳೊಂದಿಗೆ ಬಳಸುವಂಥದು) ಮಾಡುತ್ತೇನೆ. ಒಮ್ಮೊಮ್ಮೆ ಅನಿಸುತ್ತದೆ ಇದೇ ಕೆಲಸದಲ್ಲಿ ಮುಂದುವರೀಬೇಕು ಅಂತ. ಆದರೆ ಆಗೀಗ ಪೊಲೀಸರು ಬಂದು ನೇಣುಗೆಲಸಕ್ಕೆ ಕರೆದೊಯ್ಯುತ್ತಾರಲ್ಲ...."

ಬೆಳ್ಳಿಗೆಲಸದ ಬಯಕೆ ಬಯಕೆಯಾಗೇ ಉಳಿದು ಹೊಟ್ಟೆ ಪಾಡಿಗಾಗಿ ಮತ್ತೆ "ಹೇಸಿಗೆಲಸ"ಕ್ಕೆ ಓಡುತ್ತಾನೆ ಅಹ್ಮದ್.

•

## ಔದಾರ್ಯ

೧೯೭೦ನೇ ಇಸವಿ ನವೆಂಬರ್ ತಿಂಗಳ ಒಂದು ಸಂಜೆ ನಮ್ಮ ಮನೆಯವರು ಮತ್ತು ನಾನು ಜೊತೆಯಲ್ಲಿ ಬೆಂಗಳೂರಿನ ಶೇಷಾದ್ರಿಪುರಂ ಬಡಾವಣೆಯಲ್ಲಿ ವಾಯುವಿಹಾರಕ್ಕೆಂದು ಹೊರಟಿದ್ದೆವು. ನಮ್ಮಿಂದ ಕೆಲವೇ ಗಜ ಅಂತರದಲ್ಲಿ ಕನ್ನಡದ ಸುಪ್ರಸಿದ್ಧ ಗಾಯಕ ಪಿ. ಕಾಳಿಂಗರಾವ್ ಅವರು ಹೋಗುತ್ತಿದ್ದರು. ನಮ್ಮ ಮನೆಯವರು ಪಿಸುಮಾತಿನಲ್ಲಿ, "ಅವರೇ ನೋಡು, ಗಾಯಕ ಕಾಳಿಂಗರಾಯರು," ಎಂದು ಹೇಳಿದರು. ಇದನ್ನು ಕೇಳಿಸಿಕೊಂಡ ಅವರು ನಮ್ಮ ಕಡೆ ತಿರುಗಿ, ಕೈ ಜೋಡಿಸಿ, "ನಮಸ್ಕಾರ ಸಾರ್," ಎಂದು ನುಡಿದಾಗ ಆನಂದಾಶ್ಚರ್ಯವಾಯಿತು. ಮುಂದೆ ನಮ್ಮ ಮನೆಯವರು ತಾನು ದ. ಕನ್ನಡ ಜಿಲ್ಲೆಯ ಪುತ್ತೂರಿನವನು ಎಂದು ನುಡಿವಾಗ ಕಾಳಿಂಗರಾಯರು ತಾನು ಸಹ ಮಂಗಳೂರಿನ ಪಾಂಡೇಶ್ವರದವನು ಎಂದು ತಮ್ಮನ್ನು ತಾವೇ ಪರಿಚಯಿಸಿಕೊಂಡರು. ಆತ್ಮೀಯತೆಯಿಂದ ಐದು ನಿಮಿಷ ನಮ್ಮೊಡನೆ ಮಾತನಾಡಿ, "ನಿಮ್ಮ ನೆನಪು ನನಗೆ ಯಾವಾಗಲೂ ಇರುತ್ತದೆ," ಎಂದು ಹೇಳಿ ಬೀಳ್ಕೊಟ್ಟರು.

ಇಂದು ಕಾಳಿಂಗರಾವ್ ನಮ್ಮೊಡನೆ ಇಲ್ಲ, ಆದರೆ ತಮ್ಮ ಅಭಿಮಾನಿಗಳನ್ನು ತಾವೇ ಗುರುತಿಸಿ ವಿಶ್ವಾಸದಿಂದ ನಡೆದುಕೊಂಡ ಅವರ ಔದಾರ್ಯವನ್ನು ನಾವು ಇಂದಿಗೂ ಜ್ಞಾಪಿಸಿಕೊಳ್ಳುತ್ತಿರುತ್ತೇವೆ.

• ಶಾಂತಾ ಯಸ್. ನಾಯಕ್



ಡಾ. ಶಿವರಾಮ ಕಾರಂತರ ಕಾದಂಬರಿ

# ಧರ್ಮರಾಯನ ಸಂಸಾರ

ಸಂಗ್ರಹ: ಶ್ರೀ. ಹಾ.

# ಪುಸ್ತಕ ವಿಭಾಗ

## ಧರ್ಮರಾಯನ ಸಂಸಾರ

ಕಾರಂತರ 'ಮರಳಿ ಮಣ್ಣಿಗೆ'ಯ ನಡೆಯಲ್ಲಿ ರಚಿತವಾದ ಈ ಕಾದಂಬರಿ ೧೯೭೭ರಲ್ಲಿ ಪ್ರಕಟವಾಯಿತು. 'ಮರಳಿ ಮಣ್ಣಿಗೆ'ಯಲ್ಲಿ ಮೂರು ತಲೆಮಾರಿನ ಕಥನವಿದ್ದರೆ, ಇಲ್ಲಿ ಅದೇ ಕಷ್ಟದ ಬದುಕಿನ ಎರಡು ತಲೆಮಾರುಗಳ ಚಿತ್ರಣವಿದೆ. ಘಟ್ಟದ ಕೆಳಗಿನ ಸೀಮೆಯ ಜನಜೀವನದಲ್ಲಿ ಬಡತನ-ಸಿರಿವಂತಿಕೆಗಳ ದೃಷ್ಟಿಯಿಂದ ಉಂಟಾಗುವ ಪರಿಣಾಮವನ್ನು ಚಿತ್ರಿಸಿದ್ದರ ಜೊತೆಗೆ, ಹಿರಿಯ ತಲೆಮಾರಿನವರ ನಡವಳಿಕೆಗಳ ಪ್ರಭಾವ ಮುಂದಣ ಸಂತಾನದ ಮೇಲೆ ಯಾವ ರೀತಿಯಿಂದ ಆಯಿತೆಂಬುದರ ಚಿತ್ರಣ ಪ್ರಧಾನವಾಗಿ ಬಂದಿದೆ.

ಇಲ್ಲಿ ನಾವು ಗಮನಿಸಬೇಕಾದದ್ದು ಸರಸ್ವತಿಯಂತಹ ಅತ್ಯಂತ ಮುಗ್ಧ ಸ್ವಭಾವದವಳು ಗಂಡನಿಂದ ತನಗಾದ ಅನ್ಯಾಯವನ್ನು ಉಗ್ರವಾಗಿ ಎದುರಿಸುವ ಧೈರ್ಯವನ್ನು ತೋರಿದುದು. ಅವಳ ಹಾಗೂ ನಾಗಪ್ಪಯ್ಯನ ಅಧರ್ಮ ಸಂಬಂಧ ಬದುಕಿನ ಸಹಜ ಕ್ರಿಯೆಯೆಂಬಂತೆ ಕಾರಂತರು ನಿರೂಪಿಸಿದ್ದಾರೆ. ಇಲ್ಲಿರುವವೆಲ್ಲ ಸ್ಪಷ್ಟ ರೇಖೆಯ ಸತ್ವಶಾಲೀ ಪಾತ್ರಗಳು.

● ಸಂಗ್ರಾಹಕ

* * *

ಸರಸ್ವತಿಯ ವಿವಾಹ ಸಮಾರಂಭದ ಕೊನೆಯ ಗಳಿಗೆ ಕಳೆಯಿತು. ಮದುವೆಗೆ ಬಂದಿದ್ದವರೆಲ್ಲ ತಂತಮ್ಮ ಊರುಗಳಿಗೆ ಸೇರಿದರು. ಸರಸ್ವತಿಗೋ ತಾನು ಹೋಗುವುದು ಕಾಡಿನ ಊರಿಗೆ ಎಂಬುದು ಗೊತ್ತಿತ್ತು. ಕೈ ಹಿಡಿದ ಗಂಡ ಎಂಥವನೆಂಬ ಅರಿವು ಮಾತ್ರ ಬರುವಂತಿರಲಿಲ್ಲ. ಲೋಕರೂಢಿಯಂತೆ ತನ್ನ ಹಣೆಯಲ್ಲಿ ಬರೆದ ಯಾವನನ್ನೋ ನೆಚ್ಚಿ ಬಾಳಿನ ಯಾತ್ರೆಯನ್ನು ತೊಡಗಿದ್ದೇನೆ; ಆತ ನಡೆಯಿಸಿದರೆ ಉಂಟು; ಇಲ್ಲದಿದ್ದರೆ ಇಲ್ಲ- ಎಂಬ ಅಸ್ಪಷ್ಟವಾದ ಚಿತ್ರ ಅವಳ ಕಣ್ಣಿನ ಮುಂದೆ ಹಾಯುತ್ತಿತ್ತು. ಆದರೂ ಅವಳ ಅಕ್ಕ ಕಾಮಾಕ್ಷಿಯ ಗೆಲುವಿನ ಮುಖವನ್ನು ಕಂಡಿದ್ದ ಅವಳಿಗೆ ತನಗೂ ಮುಂದೆ ಸುಖ ಕಾದಿದೆ ಎಂಬ ನಿರೀಕ್ಷೆ.

ಗಂಡನ ಮನೆಯಲ್ಲೇ ಆಕೆ ನಿಶ್ಚಿಂತೆಯಿಂದ ಓಡಾಡಿಕೊಂಡು ಇರಬೇಕು. ಅಲ್ಲಿಗೆ ಬಂದು ಎರಡು ಮೂರು ತಿಂಗಳಾದರೂ ಕಳೆದಿವೆ. ಆದರೆ ಗಂಡನೆಂಬಾತ ಅವಳನ್ನು ಈ ತನಕವೂ ಮಾತನಾಡಿಸಿದ್ದಿಲ್ಲ. ಅವನ ಬಳಿ ತಾನಾಗಿ ಸುಳಿಯುವ ಧೈರ್ಯವೂ ಅವಳಿಗೆ ಬಂದಿರಲಿಲ್ಲ. ಮನೆಯಲ್ಲಿ ಸಾಕಷ್ಟು ಮಂದಿ ಬಂಧು ಬಳಗದವರಿದ್ದಾರೆ. ಹೊಸ ಮದುಮಗಳನ್ನು ಬೇಕಷ್ಟು ಉಪಚರಿಸುವವರಿದ್ದಾರೆ. ಆದರೆ ತನ್ನ ಓರಗೆಯವರು ಯಾರೂ ಕಾಣುತ್ತಿಲ್ಲ. ಅಲ್ಲಿಯ ಹೆಂಗಸರಲ್ಲಿ ಎಲ್ಲರೂ ಅವಳ ಪ್ರಾಯಕ್ಕಿಂತ ಆರು, ಎಂಟು, ಹತ್ತು ವರ್ಷ ಹೆಚ್ಚಿನವರು. ಅವರ ಪಾಲಿಗೆ ಇವಳು ೧೦-೧೨ ಪ್ರಾಯದ ಚಿಕ್ಕ ಹುಡುಗಿ. ಸಮಯ ದೊರೆತಾಗೆಲ್ಲ ಅವಳಿಗೆ ಬುದ್ಧಿ ಹೇಳುವವರು. ಆ ದೊಡ್ಡ ಮನೆಯ ಜಗುಲಿಯನ್ನಿಳಿದು ಕುತೂಹಲಕ್ಕೆ ಮುಂದಿನ ಅಂಗಳಕ್ಕೊ ಹಿಂದಿನ ಹಿತ್ತಲಿಗೋ ಹೋಗಿ ಆಚೀಚೆ ಅಲೆದಳಾದರೆ ನಾಲ್ಕೂ ಸುತ್ತಲೂ ಅವಳಿಗೆ ಕಾಣಿಸುತ್ತಿರುವುದು ಊರಲ್ಲ; ಬರಿಯ ಕಾಡೇ. ಅಲ್ಲಿಂದ ಸದಾ ಜೀರುಂಡೆಯಂಥ ಕೀಟಗಳ "ಚೀಂ, ಚೀಂ" ಧ್ವನಿ.

ಇಲ್ಲಿಯ ಸ್ನಾನ ಗೃಹವು ಅಡಿಕೆ ತೋಟಕ್ಕೆ ತಾಗಿದ ಒಂದು ದೆವ್ವ ಗಾತ್ರದ ಲಾಯ. ಬಚ್ಚಲಿನ ಗುಡಾಣವೂ ದೆವ್ವ ಗಾತ್ರದ್ದು. ಅದರ ಕೆಳಗಿನ ಒಲೆ ಹೆಬ್ಬಾಯಿಯದು; ಹಗಲೂ ರಾತ್ರಿಯೂ ಧಗಧಗನೆ

# ಧರ್ಮರಾಯನ ಸಂಸಾರ

ಉರಿಯುವಂಥದು. ಹಂಡೆಯ ಬಳಿಯಲ್ಲಿ ದೊಡ್ಡ ತಾಮ್ರದ ಕವುಳಿಗೆಗಳಿವೆ- ನೀರನ್ನು ಬೆರೆಸಲು. ಬಚ್ಚಲು ಮನೆಯ ಒಂದು ಮಗ್ಗಲಿಗೆ ಕಟ್ಟಿಗೆಯ ರಾಶಿಯಿದ್ದು, ಅದೇ ಗೋಡೆಯಂತಿದೆ. ಇನ್ನು ಅದರ ಮೂರು ಮಗ್ಗಲುಗಳಲ್ಲಿ ಅಡಿಕೆಯ ದಬ್ಬೆಗಳ ತಡಿಕೆಯ ಮರೆ. ಬಂದ ಮೊದಲ ದಿನ ಈ ಮೀಯುವ ಮನೆಗೆ ಹೆಂಗುಸೊಬ್ಬಳು ಸರಸ್ವತಿಯನ್ನು ಕರೆದುಕೊಂಡು ಬಂದಾಗ ಅವಳಿಗೆ ಅದನ್ನು ನೋಡಿಯೇ ಗಾಬರಿ! "ಇಲ್ಲಿ ಹೇಗೆ ಮೀಯುವುದಪ್ಪ!" ಎಂದು. ಮುಂದೆ ಬಹಳ ದಿವಸ ಆ ಆಶ್ಚರ್ಯ ಉಳಿಯಲಿಲ್ಲ. ಅವಳ ಕಣ್ಣ ಮುಂದೆಯೇ ನಾಲ್ಕಾರು ಹೆಣ್ಣಕ್ಕಳು ಆ ಬಚ್ಚಲಿದ್ದ ಅರ್ಧ ತೂಕಡಿಸುವ ತಡಿಕೆ ಬಾಗಿಲನ್ನು ಸಹ ಹಾಕಿಕೊಳ್ಳದೇ ಅಭಿಷೇಕ ಮಾಡಿಕೊಳ್ಳುತ್ತಿದ್ದರು. ಅದರ ಎಡೆಯಲ್ಲೇ ಮನೆಯ ಒಬ್ಬಿಬ್ಬರು ಗಂಡಸರೂ ಬಂದು ಹೊಕ್ಕು "ಆಗಲಿಲ್ಲವೋ ನಿಮ್ಮ ಸ್ನಾನ? ಬೇಗನೆ ಮುಗಿಸಿ" ಎಂದು ಅವರನ್ನು ಓಡಿಸಿ, ತಾವು ಕೌಪೀನಧಾರಿಗಳಾಗಿ ಗೊಮ್ಮಟಾಭಿಷೇಕವನ್ನು ಮುಗಿಸಿದರೂ ಮುಗಿಸಿದರೇ. ದಿನ ದಿನವೂ ಇದನ್ನು ಕಂಡು ಮೈ ಮನಸ್ಸುಗಳಿಗೆ ಸೂಕ್ಷ್ಮ ಜಡ್ಡುಕಟ್ಟಿದುದರಿಂದಲೋ ಏನೋ, ತಾನು ಯೌವನೆಯಾಗುತ್ತಿದ್ದೇನೆಂಬ ಭಾವನೆ ಬಾರದುದರಿಂದಲೋ ಏನೋ, ಸರಸ್ವತಿ ಎಲ್ಲರಂತೆಯೇ ತನ್ನ ಸ್ನಾನ ಮುಗಿಸಿ ಹೊರಬೀಳುತ್ತಿದ್ದಳು.

ಒಂದು ದಿನ ಸರಸ್ವತಿ ಜನರಿಲ್ಲದ ವೇಳೆಯನ್ನು ಹುಡುಕಿ ಆ ಬಚ್ಚಲು ಮನೆಯನ್ನು ಹೊಕ್ಕು, ನೀರನ್ನು ಹದಮಾಡಿಕೊಂಡು ಮೀಯತೊಡಗಿದ್ದಳು. ತಲೆಗೆ ತಾನೇ ನಪ್ಪು ಹಾಕಿಕೊಂಡು ತಿಕ್ಕಿ ತೀಡಿ, ಅಲುಬಿಕೊಂಡಾದ ಮೇಲೆ ಮೈಗೆ ಸೀಗೆಪುಡಿಯನ್ನು ಹಾಕಿ ಉಜ್ಜಿಕೊಳ್ಳುವ ಹೊತ್ತಿಗೆ, ಥಟ್ಟನೆ ಅವಳ ಪತಿರಾಯ ಮಹಾಬಲಯ್ಯ, ಸ್ನಾನದ ಪಂಚೆಯೊಂದನ್ನು ಹಿಡಿದುಕೊಂಡು ಅಲ್ಲಿಗೆ ಬಂದರು. ಸರಸ್ವತಿ ಮೋರೆ ತಗ್ಗಿಸಿ, ಮೈ ತಿರುಗಿಸಿ ನಿಂತಳು; ಹುದುಗಿದ ಯಾವುದೋ ನಾಚಿಕೆಯೊಂದು ಅವಳನ್ನು ತಬ್ಬಿಬ್ಬುಗೊಳಿಸಿದುದರಿಂದ ಇವಳು ಕಾದುದರಿಂದ ಸಮಯ ವ್ಯರ್ಥವೆಂದೆಣಿಸಿ, ಆಚೆಗೆ ಮುಖವನ್ನು ಹಾಕಿ, ಮೈಗೆ ನೀರನ್ನು ಸುರಿದುಕೊಂಡು, ಹತ್ತಿರದ ದಂಡೆಯ ಮೇಲಿಟ್ಟ ಒಣ ಬಟ್ಟೆಗಳನ್ನು ಬಾಚಿಕೊಂಡು ಕಾಲುಕಿತ್ತಳು. ಆಗ ಪತಿಯ ಬಾಯಿಯಿಂದ "ಸರಸಿ, ಮಧ್ಯಾಹ್ನ ಊಟ ಮುಗಿಸಿದ ಮೇಲೆ ಉಪ್ಪರಿಗೆಯಲ್ಲಿ ಮಲಗಿರುತ್ತೇನೆ. ಬಂದು ಒಂದು ಚೂರು ಮಾತನಾಡಿಕೊಂಡು ಹೋಗು; ಅವಸರವೇನಿಲ್ಲ" ಎಂಬ ಮಾತು ಬಂದಿತು. ನಾಚಿಕೆಯಿಂದ ಓಡುತ್ತಿದ್ದ ಅವಳ ಮನಸ್ಸಿಗೆ ಪತಿಯು ತನ್ನನ್ನು ಮಾತನಾಡಿಸಿದ ಬಗ್ಗೆ ಹಿಗ್ಗು ಉಂಟಾಯಿತು. ಮಧ್ಯಾಹ್ನ ಅವರ ಬಳಿಗೆ ಹೋದರೆ- ಅವರಾಗಿ ಕರೆದು ಮಾತನಾಡಿಸ ತೊಡಗಿದರೆ, ತಾನು ಅವರಿಗೆ ಏನೆಂದು ಉತ್ತರಿಸಲಿ? ಏನು ಹೇಳಿಯಾರು- ಏನು ಕೇಳಿಯಾರು- ಎಂಬ ಗೊಂದಲದ ಮನಸ್ಸಿನಿಂದ ಹೊರಟು ಹೋದಳು. ಹೋಗಿ, ಬಟ್ಟೆಯನ್ನು ಬದಲಿಸಿ, ಹೆರಳು ಹಾಕಿಕೊಂಡು, ಹೊತ್ತಿಗೆ ಸಮನಾಗಿ ಊಟವನ್ನು ಮಾಡುವ ತನಕವೂ, ಅವಳ ಪಾಲಿನ ಕುತೂಹಲವೂ ಬೆಳೆಯುತ್ತ ಹೋಗಿತ್ತು. ಹಾಗೆಂದು, ಗಂಡನನ್ನು ಕುರಿತು ಸಾಕಷ್ಟು ಅಂಜಿಕೆಯೂ ಅವಳಲ್ಲಿ ತುಂಬಿತ್ತು. ಆತ ಮನೆಯ ಜನಗಳನ್ನೂ ಹೊರಗಿನ ಜನಗಳನ್ನೂ ಗದರಿಸುವ ರೀತಿಯನ್ನು ಕಂಡಾಗಲೆಲ್ಲ ಮನಸ್ಸಿನಲ್ಲಿ ಎಲ್ಲಿಲ್ಲದ ಭಯವಾಗುತ್ತಿತ್ತು. ಆತನ ಆಕಾರವನ್ನು ಹೆಚ್ಚು ಹೆಚ್ಚಿಗೆ ಕಂಡಷ್ಟೂ ಮತ್ತಷ್ಟೂ ಭಯವೇ. ಮುಖದಲ್ಲೊಂದು ಲಕ್ಷಣವಿಲ್ಲ. ತುಂಬ ಮೀಸೆಯಿಂದಾಗಿ ಆ ಮುಖಕ್ಕೆ ಕ್ರೂರ ರೂಪವೂ ಬಂದಿದೆ. ಅವನ ದೇಹವೂ ತನ್ನ ನಾಲ್ಮಡಿ ತೂಕದ ಧಡಿಗ ಶರೀರವೆಂದು ಅನಿಸುತ್ತದೆ. ತಾನು ಅವರ ಪಾಲಿಗೆ ಪುಟಾಣಿ ಹುಡುಗಿಯಾಗಿಯೇ ಕಾಣಿಸಿಯೇನು- ಎಂದೂ

ಅನಿಸುತ್ತದೆ. ಅವರು ಒಮ್ಮೆ ಮುಷ್ಟಿಯಿಂದ ತನ್ನ ಕೈಯನ್ನು ಹಿಡಿದರೆ, ಜೀವಬಿಟ್ಟು ಹೆಣಗಾಡಿದರೂ ಅವರಿಂದ ಬಿಡಿಸಿಕೊಳ್ಳಲು ತನಗೆ ಸಾಧ್ಯವಾಗಲಾರದು ಎಂದೂ ತೋರುತ್ತಿತ್ತು.

ಮಧ್ಯಾಹ್ನ ಊಟವನ್ನು ಮುಗಿಸುವಾಗ ಅವಳ ಮನಸ್ಸು ಎಲ್ಲೆಲ್ಲೋ ಏನೇನೋ! ಗಂಡನ ಎದುರಿಗೆ ಪ್ರತ್ಯಕ್ಷ ನಿಂತು, ಸಂಭಾಷಿಸುವ ಸುಸಂಧಿ ಅಪ್ರಿಯವಾಗಿ ಕಾಣಿಸಲಿಲ್ಲವಾದರೂ ಅದಕ್ಕಾಗಿ ಮನಸ್ಸನ್ನು ಸಿದ್ಧಗೊಳಿಸುವುದು ಕಷ್ಟವಾಗಿತ್ತು. ಅಂತೂ ಯೋಚಿಸಿ, ಯೋಚಿಸಿ- ಅವರು ಊಟ ಮುಗಿಸಿ ಒಂದು ಗಳಿಗೆ ನಿದ್ರೆ ಮಾಡಿಕೊಂಡು, ಅನಂತರವೇ ತನ್ನನ್ನು ಕಾಣಲು ಬಯಸಿದ್ದಾರು- ಎಂದು ಅಂದುಕೊಂಡು, ಹೊತ್ತನ್ನು ಕಾದಳು. ತಾನು ಅವರಿರುವ ಮಹಡಿಗೆ ಹೋಗುವುದನ್ನು ಇತರರು ಕಾಣದಿರಲೆಂಬ ಹಂಬಲದಿಂದ, ಆಚೆ ಈಚೆ ನೋಡುತ್ತ ಏನೋ ಹುಡುಕುವವರ ಹಾಗೆ ಅಲೆದಾಡಿದಳು. ಮೆಟ್ಟಿಲನ್ನು ಒಂದೊಂದಾಗಿ ಏರುವಾಗ ಅವಳ ಎದೆ ಡಡಬಡಿಸತೊಡಗಿತು. ಒಳಕ್ಕೆ ಕಾಲಿರಿಸಿ ಇಣಿಕಿದಳು. ಅದು ವಿಶಾಲವಾದ ಕೋಣೆ. ಗಂಡ ಕೋಣೆಯ ಮಧ್ಯದಲ್ಲಿ ಒಂದು ಮಂಚದ ಮೇಲೆ ದಪ್ಪನೆಯ ಹಾಸಿಗೆಯನ್ನು ಹಾಸಿ, ಮಧ್ಯಾಹ್ನದ ನಿದ್ರೆ ಮುಗಿಸಿ, ಎಚ್ಚೆತ್ತು, ವೀಳೆಯದ ಹರಿವಾಣವನ್ನು ಬಳಿಗೆ ಎಳೆದುಕೊಂಡು ತಾಂಬೂಲ ಮೆಲ್ಲುತ್ತಿದ್ದಂತೆ ಕಾಣಿಸಿತ್ತು.

ಆಕೆ ಮೆಲ್ಲನೆ ಹೆಜ್ಜೆಗಳನ್ನೆಳೆದುಕೊಂಡು, ಅವರ ಬಳಿ ಸೇರುವಾಗ ಅವಳ ಆಗಮನವನ್ನು ತಿಳಿದು, ಕತ್ತನ್ನು ತಿರುಗಿಸಿದರು. "ಬಾಗಿಲನ್ನು ಹಾಕಿಕೊಂಡು ಬಾ" ಎಂದರು. ಸರಸ್ವತಿ ಅಷ್ಟು ಕೆಲಸವನ್ನು ಮಾಡಿ ಮರಳಿ ಬಂದಳು. ಆಕೆ ಇನ್ನೊಂದು ಹತ್ತು ಹೆಜ್ಜೆ ನಡೆದು, ಅವರ ಮುಂದೆ ಅಪರಾಧಿಯಂತೆ ತುಟಿ ಮುಚ್ಚಿ ನಿಂತುಕೊಂಡಳು. ಗಂಡನ ಮುಖವನ್ನು ನೋಡುವ ಧೈರ್ಯ ಬರಲಿಲ್ಲ. ಆದರೆ ಅವನು ಜುಳ ಜುಳನೆ ಅವಳನು ನೋಡಿದರು. ಅಡಿಯಿಂದ ಮುಡಿಯ ತನಕವೂ ಕಣ್ಣು ಹಾಯಿಸಿದರು. ನಕ್ಕರು. ಈಕೆಗೆ ನಗು ಬರಲೊಲ್ಲದು. ಅವರು ನಕ್ಕದ್ದೇನೋ ಗೋಚರವಾಯಿತು. ಇನ್ನೂ ನಾಲ್ಕು ಕ್ಷಣ ಅವರು ಸುಮ್ಮನಿದ್ದುದನ್ನು ಕಂಡು ಬಲು ಪ್ರಯಾಸದಿಂದ "ಏನಾದರೂ ಬೇಕಿತ್ತೇ?" ಎಂಬುದಾಗಿ ಪ್ರಶ್ನಿಸಿದಳು. ಅವಳು ಅಷ್ಟು ಸಾಹಸಪಟ್ಟದ್ದೇ ದೊಡ್ಡದು.

ಅವರು "ನೀನು ಹೇಳಿದ್ದನ್ನು ಮಾಡುವವಳೆ?" ಎಂಬ ಪ್ರಶ್ನೆ ಕೇಳಿದರು. 'ತಾನೆಲ್ಲಿ ಅವರ ಮಾತನ್ನು ಮೀರಿದೆ?' ಎಂಬ ಗಾಬರಿ ಅವಳನ್ನು ತಟ್ಟಿತು.

"ಉತ್ತರ ಹೇಳು," ಎಂದರು.

"ನನಗೆ ಏನೂಂತ ಗೊತ್ತಾಗಲಿಲ್ಲ."

"ನೀನು ಹೇಳಿದ್ದನ್ನು ಮಾಡುವವಳೇ? ಅಂತ ಕೇಳಿದೆ."

"ನೀವು ಹೇಳಿದರೆ, ಮಾಡದೆ..." ಎಂದಳು ಅಳುಕಿ.

ಗಂಡ ಏನು ಹೇಳುತ್ತಾರೆಂಬುದರ ಸುಳಿವೇ ಆಕೆಗೆ ಹೊಳೆಯಲಿಲ್ಲ.

"ನನ್ನ ಕಣ್ಣ ಮುಂದೆ ಚೆಂದವಾಗಿ ನಿಂತುಕೋ, ಸ್ವಲ್ಪ."

'ಇದಕ್ಕಿಂತಲೂ ಚಂದವಾಗಿ ಹೇಗೆ ನಿಲ್ಲುವುದು?' ಅನಿಸಿತು ಅವಳಿಗೆ.

ಅವರು ನಗುತ್ತಾ, "ನೀನು ಸೀರೆ ಕುಪ್ಪಸ ತೊಟ್ಟು ನಿಂತರೆ ಒಯಿನಾಗಿ ಕಾಣಿಸುವುದಿಲ್ಲ" ಎಂದರು.

. ಆಗ ಆಕೆಗೆ ದಿಗಿಲಾಯಿತು. ಮಹಾಬಲಯ್ಯ ಹಾಗೆಯೇ ಎದ್ದು ನಿಂತು, ಅವಳ ಸೆರಗಿಗೆ ಕೈಯಿಕ್ಕಿ "ಇದನ್ನೆಲ್ಲ ತೆಗೆದು ಬಿಡು" ಎಂದರು. ನಡುಗಿತು ಅವಳ ಶರೀರ. ಮುಂದೇನೆಂಬುದನ್ನು ಅವಳ ಭೀತ ಮನಸ್ಸು ಸೂಚಿಸಿತ್ತಾದರೂ, ಗಂಡನ ಹಕ್ಕುಗಳನ್ನು ಕುರಿತು ಆಕೆ ಚುಟುಕು ಚೂರು ಮಾತುಗಳನ್ನು ಕೇಳಿ ಬಲ್ಲವಳಾದರೂ ಒಮ್ಮಿಂದೊ

ಮೈಗೇ ಅವರ ಈ ವಿಚಿತ್ರ ಅಪೇಕ್ಷೆಯನ್ನು ಕೈಗೂಡಿಸುವ ಸಾಹಸವಿಲ್ಲದವಳಾದಳು. ಅಲ್ಲದೆ ತೆರೆದ ನಾಲ್ಕೂ ಕಿಟಕಿಗಳಿಂದ ಬೆಳಕು ಆ ಕೊಠಡಿಯನ್ನು ತುಂಬಿಸಿತ್ತು. ಕಣ್ಣು ಮುಚ್ಚಿ ನಿಂತಳು. ಅವರ ಬಲಾತ್ಕಾರವನ್ನು ನೆನೆಯುತ್ತ. "ಅಯ್ಯೋ! ನಿಮ್ಮ ದಮ್ಮಯ್ಯ" ಎಂದು ಚೀರಿದಳು. "ಉಸಿರೆತ್ತಿದರೆ ಕೊಂದೇನು" ಎಂದರು ಮಹಾಬಲಯ್ಯ! ಕೊಲ್ಲುವುದೇನು? ಆಕೆ ಅರ್ಧ ಸತ್ತಂತೆಯೇ ಆಗಿದೆ. ಗಾಬರಿ ನಾಚಿಕೆಗಳಿಂದ ಆಕೆ ತನ್ನ ಸೀರೆ ಕುಪ್ಪಸಗಳನ್ನು ಮುಷ್ಟಿಯಿಂದ ಬಾಚಿ ಹಿಡಿದು, ಅವರಿಂದ ತನ್ನ ಬರಿಯ ಮೈಯನ್ನು ರಕ್ಷಿಸಿಕೊಳ್ಳಲು ಯತ್ನಿಸಿದಳು. ಅದು ವ್ಯರ್ಥವಾಯಿತು. ಅವನ್ನು ಹರಿದೆಸೆಯುವ ರೀತಿಯಲ್ಲಿ ಕಿತ್ತೆಸೆದರು.

* * *

ಈಗ ಆಕೆ ಹುಲಿಯ ಬಾಯಿಗೆ ಸಿಕ್ಕಿದ ಹರಿಣ. ಗಂಡನ ಸಾಮೀಪ್ಯ ಈ ತನಕ ಕಂಡವಳಲ್ಲ. ಇನ್ನೂ ಮೈ ನೆರೆಯದವಳಾದುದರಿಂದ, ಪತಿಯ ಬಳಿ ಮೈಗೆ ತಾಗಿಸಿ ಸಲುಗೆಯಿಂದ ಕುಳಿತವಳೇ ಅಲ್ಲ; ಹಾಸಿಗೆಯ ಬಳಿಗೆ ಸುಳಿದವಳೂ ಅಲ್ಲ. ಈಗ ಅವಳಿಗೆ ಬಲು ಹೊತ್ತು ಕಣ್ಣನ್ನು ತೆರೆಯುವುದು ಆಗಲೇ ಇಲ್ಲ. ಆ ಗಳಿಗೆಯಲ್ಲಿ ಅವಳಿಗೆ ತನ್ನ ಶರೀರ ತನ್ನದಲ್ಲವೆಂಬುದಾಗಿ ಕಾಣಿಸಿತು. ಅದು ಯಾವುದೋ ಹುಲಿಯ ಮೇವು ಅನಿಸಿತು. ಹಾಗೆ ಅವಳ ಶರೀರವನ್ನು ಮೇಯುವ ವಿಕಟ ಸಂಭಾವನೆ ಎಷ್ಟು ಹೊತ್ತು ನಡೆಯಿತೋ ಆಕೆಗೇ ತಿಳಿಯದು; ಆಗ ಆಕೆಗೆ ಸ್ಮೃತಿ ಹೊರಟೇ ಹೋಗಿತ್ತು.

ಮೆಲ್ಲಗೆ ಎಚ್ಚರ ಹುಟ್ಟುವಾಗ ಮೈ ಮನಸ್ಸುಗಳ ವೇದನೆ, ಭಯ ಕಾರ್ಗತ್ತಲಂತೆ ಬೆಳೆದಿದ್ದಾಗಲೂ ಅವಳನ್ನು ಆವರಿಸಿತ್ತು. ಹರಿದು ಚೂರಾದಂತಿದ್ದ ತನ್ನದೇ ಶರೀರವನ್ನು ಬುಟ್ಟಿಯಲ್ಲಿ ಬಟ್ಟು ಮಾಡಿ ತುಂಬಿಸುವಂತೆ, ಹಾಸುಗೆಯ ಮೇಲೆ ಹೊರಳಿ ಬಿದ್ದ ತನ್ನ ಅಂಗಾಂಗಳನ್ನು ಒಂದುಗೂಡಿಸಿ ನಿಲ್ಲುವ ತ್ರಾಣ ಕೂಡ ಅವಳಲ್ಲಿ ಉಳಿಯಲಿಲ್ಲ. ಅಲ್ಲಲ್ಲಿ ರಕ್ತ! ಮೈಯಲ್ಲಿ ಏನೇನೋ ಹೊಲಸು. ತನ್ನ ಅಪ್ಪ, ಅಮ್ಮಂದಿರು-ವಿಶೇಷ ರೀತಿಯಿಂದ ಸಿಂಗರಿಸಿ, ಬಾಸಿಂಗ ತೊಟ್ಟು ಬಂದ ಗಂಡೊಂದಕ್ಕೆ ಧಾರೆಯನ್ನೆರೆದು ಕೊಟ್ಟದ್ದು ಇದೇ ಪಶುಬಲಿಗಾಗಿ ಅಲ್ಲವೇ -ಎಂಬುದಾಗಿ ನೆನೆದಳು. ಬಿಸಿಲು ಇಳಿದು ಕೋಣೆಯ ಕತ್ತಲು ತಗ್ಗಿ ಮುಸ್ಸಂಜೆಯಾಗುವ ತನಕವೂ ಅವಳು ಚಕಿತ, ಸ್ತಂಭಿತ, ದಗ್ಧ ಜೀವ! ಅವಳ ಒಂದರ್ಧ ಜೀವ ಆಗಾಗ ಕಣ್ಣು ಕತ್ತಲೆ ಬರಿಸುತ್ತದೆ; ಇನ್ನೊಂದರ್ಧ ಜೀವ 'ನೀನು ಇನ್ನೂ ಸತ್ತಿಲ್ಲ, ಬದುಕಿದ್ದೀಯ. ಚದರಿಬಿದ್ದ ಸೀರೆ ಕುಪ್ಪಸಗಳನ್ನು ತೊಟ್ಟು, ಮೆಲ್ಲನೆ ಈ ಕೊಟಡಿಯಿಂದ ಇಳಿದು ಹೋಗು. ಮುಂದೆ ಇಂಥ ನಾಟಕಕ್ಕೆ ಮನಸ್ಸನ್ನು ಸಿದ್ಧಗೊಳಿಸು. ಹೆಣ್ಣು ಅಂದರೆ ಏನೆಂದು ತಿಳಿದಿದ್ದೀ?' ಎಂಬ ಪ್ರಶ್ನೆಯನ್ನು ಕೇಳುತ್ತಿತ್ತು.

ಮುಂದಣ ಮೂರೇ ಮೂರು ತಿಂಗಳಲ್ಲಿ, ಪ್ರಕೃತಿದೇವಿ ತನ್ನ ಸೇಡನ್ನು ಸರಸ್ವತಿಯ ಮೇಲೆ ತೀರಿಸಿಕೊಂಡಳು. ಗಂಡನ ಅಪಚಾರವಿಲ್ಲದೆಯೇ ಆಕೆ ತಾನುಟ್ಟ ಸೀರೆಯಲ್ಲಿ ರಕ್ತದ ತೊಯ್ತವನ್ನು ಕಂಡಳು. ಇನ್ನೊಮ್ಮೆ ಎಲ್ಲಿಲ್ಲದ ಭಯವಾಯಿತು. ಅದನ್ನು ಹೇಗೋ ಅಡಗಿಸಿಟ್ಟು ಯಾರಿಗೂ ಸುದ್ದಿ ಹೇಳದೆ ಸಂಕಟ ಪಟ್ಟುಕೊಂಡಳು. ಆ ಮನೆಯಲ್ಲಿ ಅವಳ ವಿಶ್ವಾಸದ ಹೆಂಗುಸರಿದ್ದಂತೆ ಕಾಣಿಸಲಿಲ್ಲ. ಅತ್ತೆ ಎಂಬವಳು ಅವಳಿಗಿರಲಿಲ್ಲ. ಸೋದರತ್ತೆ ಎಂಬಾಕೆ ಐವತ್ತು ವರ್ಷ ಮೀರಿದ ಒಬ್ಬ ವಿಧವೆ, ಗಂಡು ಧ್ವನಿಯಿಂದ ಆ ಅಂತಃಪುರದ ರಾಜ್ಯವಾಳುತ್ತಿದ್ದಳು. ಅವಳೊಡನೆ ತನಗೆ 'ಹೀಗೆ ಆಗಿದೆ'ಯೆಂದು ಅವಳಿಗೆ ಹೇಳುವ ಧ್ವನಿಯೂ ಬರಲಿಲ್ಲ. ಮೈನೆರೆಯುವುದು, ಮುಟ್ಟಾಗುವುದು- ಇದರ ಕತೆಯನ್ನು ಹಿತವಂದಿಗರ ಬಾಯಿಂದ ಮಸಕುಮಸುಕಾಗಿ ಕೇಳಿದ್ದಳಾದುದರಿಂದ, ತನಗೆ ಪ್ರಾಪ್ತಿಸಿದ ಅವಸ್ಥೆ ಯೌವನದ ಮೊದಲ

ಹೆಜ್ಜೆ-ಎಂಬ ಅರಿವನ್ನು ಉಂಟುಮಾಡಿತ್ತು. ಇದ್ದುದರಲ್ಲಿ ನಂಬಬಹುದು- ಎಂಬಂತಿರುವ ಅಡುಗೆಯ ಗಂಗಮ್ಮನ ಬಳಿಗೆ ಅಳುತ್ತಾ ಹೋಗಿ, 'ತನಗೆ ಹೀಗಾಯಿತು' ಎಂದಳು. ಆಕೆ "ಅಯ್ಯೋ ಮಗು, ಅದಕ್ಕೆಲ್ಲ ಗಾಬರಿಯೇ! ಎಲ್ಲರಿಗೂ ಹಾಗೇ ಅಲ್ಲವೇ?" ಎಂದಳು. ಮನೆಯವರು ಅವಳ ಕೈಯಿಂದ ಮೂರು ದಿನಗಳ ತಪಸ್ಸನ್ನು ಮಾಡಿಸಿದರು. ಆಕೆಯ ಕೈಗೆ ಕುಂಕುಮ ಅರಸಿನ ಕೊಟ್ಟು, ಮನೆ ಚಾವಡಿಯ ಗೋಡೆಯ ಮೇಲೆ ಮುದ್ರೆಯೊತ್ತಿಸಿದರು. ಅವಳು ಪ್ರಾಪ್ತವಯಸ್ಕಳಾದುದನ್ನು ಆ ಮೂಲಕ ಜಗತ್ತಿಗೆ ಜಾಹೀರು ಪಡಿಸಿದಂತಾಯಿತು.

ಮಾವ ಶಂಕರಯ್ಯನವರು ಫಲಶೋಭನದ ದಿನವನ್ನು ಗೊತ್ತು ಪಡಿಸಿ ಬಾರಕೂರಿಗೆ ಸುವಾರ್ತೆಯನ್ನು ಮುಟ್ಟಿಸಿದರು. ಆ ಸುದ್ದಿ ಆ ಮನೆಯವರಿಗೂ ಹಿಗ್ಗನ್ನು ತಂದುಕೊಟ್ಟಿತು. ತಾಯಿಗಂತು ಪರಮಾನಂದವಾಯಿತು. ಅಲ್ಲಿಂದ ದಿಬ್ಬಣ ಹೊರಡಿಸಿಕೊಂಡು ಹೆಬ್ಬಾರರು ಮಡದಿ ಸಹಿತರಾಗಿ ಮಗಳ ಮನೆಗೆ ಬಂದರು. ಕಲಶಗ್ರಹಣದ ದಿವಸ-ಇನ್ನೊಮ್ಮೆ ಸರಸ್ವತಿಯು ಹುಲಿಯ ಬಳಿ ಕುಳಿತ ಹರಿಣದಂತೆ ಏನೇನೋ ಕಟ್ಟು ಕಟ್ಟಳೆಗಳಲ್ಲಿ ಭಾಗಿಯಾದಳು. ಅದರಲ್ಲಿಯೂ ಆಚೀಚೆ ಓಡಾಡುತ್ತಿರುವಾಗ ಸಮೀಪದ ಹೆಣ್ಣು ಮಕ್ಕಳು "ನಮ್ಮ ಸರಸ್ವತಿಯ ಮುಖ ಇಂದು ಸಂತೋಷದಿಂದ ಉಬ್ಬಿಕೊಂಡಿದೆ" ಎಂದು ತಮ್ಮ ಕಲ್ಪನೆಗಳನ್ನು ಅವಳ ಮುಖಕ್ಕೆ ಆರೋಪಿಸಿ ಹೇಳುತ್ತಿದ್ದಾಗ, ಅವಳ ಭಯ ಅವಳಿಗೇ ಗೊತ್ತು! ಆ ದಿನ ಅವಳ ತಾಯಿ ಮಗಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು "ಇವತ್ತಿನಿಂದ ನೀನು ಗಂಡನ ಜತೆಗೆ ಮಲಗಿರಬೇಕಾಗುತ್ತದೆ. ನಿನಗೆ ಅವನಿಂದ ಸುಖ ಸಿಕ್ಕಿ ಒಳ್ಳೆಯ ಸಂತಾನವಾಗುವಂತೆ ದೇವರು ನಡೆಸಲಿ" ಎಂದು ಹರಕೆಯ ಮಾತುಗಳನ್ನು ಆಡಿದಳು.

ಆ ರಾತ್ರಿ ಇನ್ನೊಮ್ಮೆ ಸರಸ್ವತಿಯು ತನ್ನ ಭಾರವಾದ ಹೆಜ್ಜೆಗಳನ್ನು ಹೊತ್ತುಕೊಂಡು, ಮನೆಯ ಮಹಡಿಯನ್ನು ತಿರುಗಿ ಏರಲೇಬೇಕಾಯಿತು. ಆಕೆ ಹೋಗುವಾಗ ಅಲ್ಲಿ ದಂಪತಿಗಳಿಬ್ಬರಿಗೂ ಹಾಸಿಗೆ ಹಾಸಿತ್ತು. ತಾಂಬೂಲದ ತಟ್ಟೆ ಇರಿಸಿತ್ತು. ಯಾರೋ ಬಂದು ಎರಡು ಥಾಲಿಗಳಲ್ಲಿ ಹಾಲನ್ನು ಇರಿಸಿಹೋಗಿದ್ದರು. ತುಸುವೇ ದೂರದಲ್ಲಿ ಚಿಮಣಿ ದೀಪವೊಂದು ತನ್ನ ನಂಜನ್ನೆಲ್ಲಾ ಹೊಗೆಯ ರೂಪದಲ್ಲಿ ಕಾರುತ್ತಲಿತ್ತು. ಆಕೆಯ ಯಮಗಂಡ ಮಹಾಬಲಯ್ಯನವರ ದಿವ್ಯ ದರ್ಶನ ಮಾತ್ರ ಹೋದಾಗ ಆಗಲಿಲ್ಲ. ಹೋದವಳು, ಹೆದರಿ, ಹಾಸಿಗೆಯ ಮೇಲೆ ಕುಳಿತಿರುವ ಧೈರ್ಯವಿಲ್ಲದೆಯೇ ಅವಳು ಅದರ ಅಂಚಿನಲ್ಲಿ ಜಾಜಿ ಮಣ್ಣಿಂದ ಒರೆದ ಕೆಸ್ಸಲದ ಮೇಲೆ ಕಾದು ಕುಳಿತಳು. ಕುಳಿತು ಕಾದು, ನಿದ್ದೆ ತೂಕಡಿಸಿ ಕತ್ತು ಬಲು ಭಾರವಾದಾಗ, ಅದು ಕುಸಿದೊಡನೆ ಜಗ್ಗನೆ ಕಣ್ತೆರೆದು 'ಬಂದಿಲ್ಲ' ಎಂದು ಎಣಿಕೆ ಹಾಕಿದಳು.

ಅಂತೂ ಬಲು ಹೊತ್ತು ಕಾದದ್ದಕ್ಕೆ ಪತಿಯ ದರ್ಶನವಾಯಿತು. ಅವರ ಸವಾರಿ ಕದವನ್ನಿಕ್ಕಿಕೊಂಡು ಒಳಕ್ಕೆ ಕಾಲಿರಿಸಿ ತಮ್ಮ ಮಡದಿಯು ಹಾಸಿಗೆಯ ಬದಿ ನೆಲದಲ್ಲಿ ಕುಳಿತಿರುವುದನ್ನು ಕಂಡರು: "ಹಾಸಿಗೆ ಹಾಕಿದ್ದು ಯಾರಿಗದು?" ಎಂದು ಕೇಳಿದರು. ಒಂದಿಷ್ಟು ಒನಪು, ಒಯ್ಯಾರವಿಲ್ಲದ ಅವರ ಒರಟು ಮಾತಿನ ಅರ್ಥ ಅವಳಿಗಂತೂ ಆಗಲೇ ಇಲ್ಲ. ಮರುಕ್ಷಣವೇ ಅವರು "ಬೆಳಕೆಂದರೆ ನಿನಗೆ ಬಹಳ ಭಯವೋ?" ಎಂದು ಕೇಳಿದರು. ಆಕೆ ಮಾತನಾಡಲಿಲ್ಲ. "ಮುಖ ಊದಿಕೊಂಡದ್ದು ಯಾಕೆ?" ಎಂದು ಕೇಳಿದರು. ಆ ಸ್ಥಿತಿ ಅವಳಿಗೂ ಗೊತ್ತಿರಲಿಲ್ಲ. ಅವರು ಮಾತ್ರ ಆ ದೀಪವನ್ನು ಆರಿಸುವ ಗೊಡವೆಗೆ ಹೋಗದೆ, ತಮ್ಮ ಹಾಸುಗೆಯನ್ನೇರಿ ಅವಳ ಕಡೆಗೆ ಕೈ ಚಾಚಿದ್ದರೆ, ಸಿಕ್ಕಿದ್ದು ಅವಳ ತೋಳಲ್ಲ; ಮುಡಿ. ಅದನ್ನೇ ಮೆಲ್ಲನೆ ಎಳೆದರು. ಅದಕ್ಕಿಂತ ಮೊದಲೇ ಗಂಡನ ದರ್ಶನದಿಂದಲೇ,

# ಧರ್ಮರಾಯನ ಸಂಸಾರ

ಭಯಕ್ಕೊಳಗಾದ ಅವಳ ಶರೀರವು ತತ್ತರಗೊಂಡು, "ಅಯ್ಯೋ, ದಮ್ಮಯ್ಯ" ಎಂದು ಬೇಡಿದಳು. ಮುಸುಡಿಗೆ ಬಿತ್ತು ನಾಲ್ಕು ಏಟು. ಮುಂದೇನಾಯಿತು- ಎಂಬುದು ಅವಳ ಮುಗ್ಧ ಸೂಕ್ಷ್ಮ ಶರೀರಕ್ಕಾದರೂ ತಿಳಿದಿರಬೇಕು. ಕಣ್ಣಿನ ಮುಂದೆ ಗಂಡನ ಕರಾಳ ಶರೀರ ಕಾಣಿಸುತ್ತಿದೆ; ಮೆಚ್ಚಲು ಅಸಹ್ಯವಾದ ಅಂಗಾಂಗಗಳೂ ಕಾಣಿಸುತ್ತಿವೆ. ಬೆದರಿ ಅಳತೊಡಗಿದ ಅವಳ ಮುಸುಡಿಗೆ ಹೊಡೆದು, ಚರ್ಮವನ್ನು ಸುಲಿಯುವಷ್ಟು 'ಮಿದುತನ'ದಿಂದ ಸೀರೆ, ಕುಪ್ಪುಸಗಳನ್ನು ಸೆಳೆದು, ಅವಳ ಕೋಮಲ ದೇಹದ ಆಳವನ್ನೆಲ್ಲಾ ಅಳೆಯತೊಡಗಿದರು ಅವರು. ಯಾವ ಸುಖಕ್ಕಾಗಿ ಗಂಡು ಜೀವ ಹೆಣ್ಣಿಗಾಗಿ ಹಂಬಲಿಸುತ್ತದೋ, ಆ ಸುಖವೆಂಬ ವಸ್ತು -ಎತ್ತಿಗೆ, ಕಾದ ಗುಳದಿಂದ ಬರೆಯೆಳೆಯುವ ರೀತಿಯಲ್ಲಿ -ಅವಳಿಗೆ ಮಾತ್ರ ತಾಪದಾಯಕವಾಗಿಯೇ ಕಾಣಿಸಿತು. ಅದರಿಂದಲೇ ದಣಿವು, ವಿಸ್ಮೃತಿಗಳೂ ಬಂದುವು. ಪತಿರಾಯನಿಂದ ಒಂದೇ ಒಂದು ಕ್ಷಣ ಕಾಲ ಕೋಮಲ ಮನೋಭಾವವನ್ನಾಗಲೀ, ಮಿದು ಮಾತನ್ನಾಗಲೀ ಮೈ ಸವರಿದುದಾಗಲೀ, ಬೆರಳ ಮೊಗ್ಗುಗಳನ್ನು ಮೂಸಿದುದಾಗಲೀ ಅವಳು ಕಂಡರಿಯಳು. ರಕ್ತ ಮಾಂಸಗಳನ್ನು ಬಸಿದು ತಿನ್ನಲು ಬಂದ ಹುಲಿಯೊಂದರಿಂದ ಆಕೆಯು ಚೆಲುವು, ಶೃಂಗಾರ, ಪ್ರೀತಿ, ಸಹಾನುಭೂತಿ-ಇದಾವುದನ್ನೂ ಕಾಣಲು ಶಕ್ಯವಾಗಲಿಲ್ಲ. ಪ್ರಾಯಶಃ ಅವರಿಗೂ ಅವಳಿಂದ ಯಾವ ದೈಹಿಕ ತೃಪ್ತಿಯೂ ದೊರೆಯದೆ ಹೋಗಿರಬೇಕು. ಆದರೂ ಆ ಒಂದು ರಾತ್ರಿ ಎಷ್ಟು ಬಾರಿ ಅವಳನ್ನು ಪೀಡಿಸಿದರು-ಎಂಬುದಕ್ಕಿಲ್ಲ. ಬೆಳಗಿನ ಜಾವ ಕಳೆಯುತ್ತಲೇ ಬಾನಿನ ಎಳೆಗೆಂಪು ಬಣ್ಣ ಕಿಟಕಿಯ ಮೂಲಕ ತನ್ನ ಬೆಳಕನ್ನು ಆ ಕೊಠಡಿಯ ಮೂಲಕ ಹಾಯಿಸಿದಾಗ, ಆಕೆ ಇನ್ನೂ ನಗ್ನ ಶರೀರೆಯಾಗಿ ಬಿದ್ದಿದ್ದಳು. ಈಗ ತನ್ನ ಅರಿವೆಗಳನ್ನು ತೊಡುವ ಅವಸರಮಾಡಿದಳು. ಅಲ್ಲಿಂದ ಮೆಲ್ಲಗೆ ನಿಂತು, ಹೊರಗೆ ಹೊರಡಲು ಅಣಿಯಾದಳು. ಆ ಗಳಿಗೆಯನ್ನೇ ಕಾದಿದ್ದ ಮಹಾಬಲಯ್ಯ ಎಚ್ಚೆತ್ತು, ನಿಂತು, "ನಿಲ್ಲು ಒಂದು ಕ್ಷಣ" ಎಂದರು. ಅವಳ ಮುಖವನ್ನು ನೋಡಿ "ನಿನ್ನನ್ನೂ ನಿನ್ನ ಈ ಆಕಾರವನ್ನೂ ನೋಡಿ ನಿನ್ನ ಅಪ್ಪನಿಗೂ, ಅಮ್ಮನಿಗೂ ನೀನು ಹೆಣ್ಣು ಎಂಬ ಭ್ರಮೆ ಬಂದುಬಿಟ್ಟು, ಅಂದು ನನಗೆ ಧಾರೆಯೆರೆದುಕೊಟ್ಟರು. ಇಲ್ಲಿ ಬಂದು ನಿನ್ನನ್ನು ನೋಡುವಾಗ ಅವರು ದಾನ ಕೊಟ್ಟಿದ್ದು ಒಂದು ಸೆಗಣಿ ಮುದ್ದೆ ಎಂಬುದು ಗೊತ್ತಾಯಿತು. ನಾಳೆ ನೀನು ನಿನ್ನ ಅಪ್ಪ ಅಮ್ಮಂದಿರ ಜತೆಯಲ್ಲಿಯೆ ಹೊರಟು ಹೋಗು" ಎಂದು ಅಪ್ಪಣೆ ಕೊಡಿಸಿದರು.

ಸಿಡಿಲು ಬಡಿದಂತಾಯಿತು. ಆಕೆಗೆ. ಅವರು ಆಡಿದ ಮೂದಲಿಕೆ, ವಿಧಿಸಿದ ಶಿಕ್ಷೆಯ ಮಾತುಗಳನ್ನು ಕೇಳಿ ತನ್ನ ಭವಿಷ್ಯವನ್ನು ಕುರಿತು ಭಯ ಹುಟ್ಟಿಕೊಂಡಿತು. ಪಾದಗಳನ್ನು ಹಿಡಿದು "ನನ್ನದೇನು ತಪ್ಪಿದ್ದರೂ ಸುಧಾರಿಸಿಕೊಂಡು ಹೋಗಿ" ಎಂದು ಬೇಡಿದಳು. ಅದೇ ಕಾಲಿನಿಂದ ಒದೆಯೂ ದೊರೆಯಿತು. ಆಕೆ ತನ್ನ ಅಳುವನ್ನು ನುಂಗಿಕೊಂಡು ಕದವನ್ನು ತೆರೆದು ಕೆಳಮನೆಯನ್ನು ಸೇರಿದಳು.

ಮರುದಿನ, ತವರಿನವರು ಗಾಡಿ ಕಟ್ಟಿಸಿ ಊರಿಗೆ ಹೊರಡುವ ಮುನ್ನ, ಸರಸ್ವತಿಯು ತಾಯ ಬಳಿಗೆ ಹೋಗಿ-

"ಅಮ್ಮ ನಾನು ಬಂದದ್ದು ಒಂದು ನರಕಕ್ಕೆ. ಈ ನರಕಕ್ಕೆ ನನ್ನನ್ನು ಕಳುಹಿಸಿದವರು ನೀವು! ಇವತಿಗೆ ನನ್ನ, ನಿಮ್ಮ ಋಣ ಮುಗಿಯಿತು," ಎಂದಂದು, ತಾನಿರುವ ಕೋಣೆಗೆ ಬಂದು ಕದವನ್ನಿಕ್ಕಿಕೊಂಡಳು.

ಮುಂದಣ ದಿವಸಗಳು ಎಲ್ಲರ ಪಾಲಿಗೂ ಯಾರ ಯತ್ನವೂ ಇಲ್ಲದೆಯೆ ಒಂದೊಂದಾಗಿ ಉರುಳಿದವು. ತಿಂಗಳುಗಳೂ ಕಳೆದವು. ಮುಂದಣ ಆ ಒಂದು ವರ್ಷದಲ್ಲಿ ಯಜಮಾನ

# ಪುಸ್ತಕ ವಿಭಾಗ

ಶಂಕರಯ್ಯನವರು ಕಾಯಿಲೆಯಿಂದ ತೀರಿಕೊಂಡರು. ಮಗ ಮಹಾಬಲಯ್ಯ ಆ ಊರಿಗೂ ಮನೆಗೂ ಚಕ್ರವರ್ತಿಗಳಾದರು. ಸರಸ್ವತಿ ತಾನಾಗಿಯೇ ಪತಿಯ ಶಯ್ಯಾಗಾರಕ್ಕೆ ಮುಂದೆ ಹೋದದ್ದೇ ಇಲ್ಲವಾಯಿತು. ಅವಳನ್ನು ಬಳಿಗೆ ಕರೆಯಿಸಿಕೊಳ್ಳುವ ಆತುರವಾಗಲಿ ಅಪೇಕ್ಷೆಯಾಗಲಿ ಮಹಾಬಲಯ್ಯನವರಿಗೆ ಬರಲೂ ಇಲ್ಲ. ತನ್ನ ಆಣತಿಯನ್ನು ಮೀರಿ ತವರು ಮನೆಗೆ ಹೋಗದೆಯೆ ಅಲ್ಲೇ ಉಳಿದುಕೊಂಡ ಆ ಹೆಂಡತಿಯ ಛಲ ಹೆಚ್ಚೋ, ತನ್ನದು ಹೆಚ್ಚೋ ಎಂಬ ಮನೋಭಾವ ಅವರಲ್ಲಿ ಬೆಳೆಯುತ್ತ ಹೋಯಿತು.

ಅನಂತರದ ದೀರ್ಘಕಾಲ ಸರಸ್ವತಿಯದು ಗಂಡನ ಮನೆಯಲ್ಲಿದ್ದೂ ಒಂಟಿ ಬಾಳ್ವೆ. ಅಕ್ಕಪಕ್ಕದಲ್ಲಿ ಜನರಿದ್ದಾರೆ. ಅವಳು ಕಿರಿಯೊಡತಿಯೆಂಬ ಭಾವನೆಯಿಂದ ಮನೆಗೆಲಸಗಳ ವಿಚಾರದಲ್ಲಿ ಅವಳನ್ನು ಆಗಾಗ ಕೇಳುವ ಸೇವಕರೂ ಇದ್ದಾರೆ. ಆಕೆಯ ಮಾವನ ಬೆನ್ನಿಗೇ ಸೋದರತ್ತೆಯೂ ಹದಿನೈದು ದಿನಗಳ ಜ್ವರದಿಂದ ಗತಿಸಿದ ಮೇಲೆ ಅವಳ ಯಾಜಮಾನ್ಯವನ್ನು ಅಲ್ಲಿಯ ಜನರೆಲ್ಲರೂ ಗುರುತಿಸಿದ್ದಾರೆ.

ಆ ಮನೆಯ ಜನರಿಗಾಗಲೀ ಬಂದು ಹೋಗುವವರಿಗಾಗಲೀ ಮಹಾಬಲಯ್ಯನವರ ಸ್ವಭಾವ ತಿಳಿಯದ್ದಲ್ಲ. ಸರಸ್ವತಿ ಆ ಮನೆಗೆ ಬಂದು ಮೂರು ವರ್ಷಗಳು ಸರಿದರೂ ತಿಂಗಳು ತಿಂಗಳು ಮುಟ್ಟಾದಾಗ ಮೂಲೆ ಹಿಡಿಯುತ್ತ ಇದ್ದುದೂ ಅವಳಿಗೆ ಏನಾದರೂ ಗರ್ಭದೋಷವಿರಬಹುದು- ಎಂಬ ಯೋಚನೆ ಬಂದದ್ದುಂಟು. ಅವಳ ವಿಷಯದಲ್ಲಿ ಅನುಕಂಪವುಳ್ಳವರಿಗೆ 'ಹೀಗೆ ಇವಳು ಹೆರದೆ ಹೋದರೆ ಮಹಾಬಲ ಮತ್ತೊಂದು ಮದುವೆಯಾದಾನು' ಎಂದು ಅನಿಸಿದುದೂ ಉಂಟು.

* * *

ಸರಸ್ವತಿಯ ಬದುಕಿನಲ್ಲಿ ತನ್ನ ಒಂದು ಪ್ರಮಾದ ಮಾತ್ರ ಬಹಳ ದಿನಗಳ ತನಕವೂ ಮಾನಸಿಕ ಹಿಂಸೆಯನ್ನು ಕೊಟ್ಟಿದೆ. ಒಂದು ದಿವಸ ಆಕೆ ಮೈಗೆ ಎಣ್ಣೆಯನ್ನು ಪೂಸಿಕೊಂಡು, ಸ್ನಾನದ ಮನೆಗೆ ಹೋಗಿದ್ದಳು. ಕೈಯ ಉಂಗುರವನ್ನು ಕಳಚಿ, ಒಳಗಿಟ್ಟು ಬರುವುದಕ್ಕೆ ಮರೆತಿದ್ದಳು. ಹಾಗಾಗಿ ಬಚ್ಚಲು ದಂಡೆಯ ಮೇಲೆ ಅದನ್ನು ತೆಗೆದಿರಿಸಿ, ಸ್ನಾನವನ್ನು ಮುಗಿಸಿದಳು. ಬಚ್ಚಲಲ್ಲಿ ಹೆಚ್ಚು ಹೊತ್ತು ನಿಲ್ಲುವುದಕ್ಕೂ ಆಕೆಗೆ ಭಯವಾಗುತ್ತಿತ್ತು. ತನ್ನ ಒದ್ದೆ ಅರಿವೆ, ಎದೆಗಂಟಿದ ಸೀರೆಗಳನ್ನು ಕಂಡರೇನ ಭಯ! ಆ ಭಯದಿಂದಲೇ ಅವಳು ಅವಸರಿಸಿ, ಒಣ ಸೀರೆಯುಟ್ಟು, ಒದ್ದೆ ಸೀರೆಯನ್ನು ಹಿಂಡಿಕೊಂಡು ಒಣಗಿಸಿ ತನ್ನ ಕೋಣೆಗೆ ಮರಳಿದಳು. ಆಗ ಬೆರಳಿನ ಉಂಗುರದ ನೆನಪಾಯಿತು; ಕಾಣ'ಸಲಿಲ್ಲ. ಗಾಬರಿಗೊಂಡು ಬಚ್ಚಲಿಗೆ ಓಡಿ ಬಂದಳು. ಅಲ್ಲಿಯೂ ಅದು ಕಾಣ'ಸಲಿಲ್ಲ. ಅಲ್ಲಿ, ಇಲ್ಲಿ ಬಲುವಾಗಿ ಹುಡುಕಿದಳು

* * *

ಆ ದಿವಸ ಅವರ ಮನೆಗೆ ಅವಳ ಅತ್ತಿಗೆ, ಗಂಡನ ತಂಗಿ, ಶಂಕರ ನಾರಾಯಣದಿಂದ ತನ್ನ ಮಕ್ಕಳನ್ನು ಕಟ್ಟಿಕೊಂಡು, ತವರು ಮನೆಗೆ ಬಂದಿದ್ದಳು. ಅವಳೇಕೋ ಸರಸ್ವತಿಯ ವಿಷಯದಲ್ಲಿ ಒಂದಿಷ್ಟು ಪ್ರೀತಿಯನ್ನು ಇರಿಸಿಕೊಂಡಿದ್ದುದರಿಂದ ಆಕೆಯ ಈ ಹುಡುಕಾಟ, ಕಣ್ಣಿನ ಚಂಚಲ ಗತಿಗಳನ್ನು ಕಂಡವಳು "ಅತ್ತಿಗೆ, ಏನು ಹುಡುಕುವುದು ನೀನು? ಏನು ಕಳೆದುಕೊಂಡಿದ್ದೀ?" ಎಂದು ಒತ್ತಾಯಿಸಿ ಕೇಳಿದ್ದಕ್ಕೆ ಆಕೆ "ಉಂಗುರ" ಎಂದಳು.

ಅಷ್ಟು ಮಾತ್ರ ಅವಳಿಗೆ ಗೊತ್ತು. ಆಕೆ ಕಳೆದು ಹೋದ ಆ ಉಂಗುರದ ಆಸೆಯನ್ನು ಬಿಟ್ಟಳು. ಒಂದು ದಿವಸವೆಲ್ಲ ಹಾಗೆಯೇ ಕಳೆಯಿತು: ಮರುದಿನವೂ ಸರಿಯಿತು. ಆ ಮರುದಿನ-ಸಂಜೆ ಅವಳಿಗೆ ಮನೆಯ ಮುಂದಿನ ಅಂಗಣದಲ್ಲಿ ಯಾರದ್ದೋ ಚಿತ್ಕಾರ ಕೇಳಿಸಿ, "ಏನಪ್ಪಾ ಇದು?"

# ಧರ್ಮರಾಯನ ಸಂಸಾರ

ಎಂದು ಕಿಟಕಿಯಿಂದ ಇಣಿಕಿನೋಡುವ ಪ್ರಸಂಗ ಬಂದೊದಗಿತು. ಅಂತಹ ನೋಟ ಪ್ರಥಮ ಅನುಭವವೇನಲ್ಲ. ಅರಬಳ್ಳಿ ರಾಜ್ಯದಲ್ಲಿ ತಿಂಗಳು, ಆರು ತಿಂಗಳಿಗೊಮ್ಮೆ ಅದು ನಡೆಯುವಂಥ ದೃಶ್ಯವೇ.

ಮನೆಯೆದುರಿನ ಅಂಗಳದಲ್ಲಿ, ಒಂದು ಚಪ್ಪರದ ಕಂಬಕ್ಕೆ ಬಚ್ಚಲಿನ ಕೆಲಸ ಮಾಡುವ ಮಧ್ಯ ವಯಸ್ಸಿನ ನಾಗಿಯನ್ನು, ಒಂದು ಹಗ್ಗದಿಂದ ಬಿಗಿದಿದ್ದರು. ಕೌಪೀನವೊಂದನ್ನು ಬಿಟ್ಟರೆ- ಅವಳ ಮೈಯ ಮೇಲೆ ತುಣುಕು ಅರಿವೆಯೂ ಇರಲಿಲ್ಲ. ಅಲ್ಲೇ ಸಮೀಪ, ಮನೆಯ ಯಜಮಾನರು ಅವರಷ್ಟೇ ಕಲ್ಲು ಮನಸ್ಸಿನ ಯಾವನಿಂದಲೋ ಅವಳ ಬೆನ್ನಿಗೆ ನಾಗಬೆತ್ತದಿಂದ ಬರೆ ಎಳೆಯಿಸುತ್ತಿದ್ದರು. ಆಕೆ ನೋವನ್ನು ತಡೆಯದ ಬೊಬ್ಬಿಡುತ್ತಿದ್ದಾಳೆ; ಚೀರುತ್ತಿದ್ದಾಳೆ. "ನಿಮ್ಮ ದಮ್ಮಯ್ಯ, ನಾನು ಉಂಗುರ ಕದ್ದದು ಅಲ್ಲ" ಎಂದು ಗೋಗರೆಯುತ್ತಿದ್ದಾಳೆ. ಕೊನೆಕೊನೆಗೆ ಆ ಪೆಟ್ಟನ್ನು ಸಹಿಸಿಕೊಳ್ಳಲಾರದೆ, "ಅಯ್ಯೋ, ದಮ್ಮಯ್ಯ-ಕದ್ದದ್ದು ಹೌದು; ನಾಳೆ ಹೊತ್ತು ಮೂಡುವುದರೊಳಗೆ ನಾನು ಅದನ್ನು ತಂದು ಕೊಡುತ್ತೇನೆ" ಎಂದು ಕೂಗಿಕೊಂಡ ಮೇಲೆ ಪೆಟ್ಟು ನಿಂತಿತು; ಕಟ್ಟಿದ ಹಗ್ಗವನ್ನು ಸಡಿಲಿಸಿದರು. ಆಕೆ ಅಲ್ಲಿಂದ ಮರೆಯಾದಳು. ಆ ದಿವಸ ನಾಗಿಯ ಗಂಡ, ಯಾವುದೋ ಕೆಲಸದಿಂದಾಗಿ ಆ ಊರಲ್ಲಿ ಇದ್ದಿರಲಿಲ್ಲವಂತೆ.

ಈ ಭೀಕರ ಚಿತ್ರವು ಸರಸ್ವತಿಯ ಎದೆಯನ್ನೇ ತತ್ತರಿಸಿತು. ತಾನಿರುವುದು ಒಂದು ಯಮನ ಮನೆಯಲ್ಲಿ.... ಎಂಬುದನ್ನು ತೀರ ಖಚಿತಗೊಳಿಸಿತು. ತಾನು ಉಂಗುರವನ್ನು ಕಳೆದುಕೊಂಡೆ

# ಪುಸ್ತಕ ವಿಭಾಗ

ಸೆಂದು ಅತ್ತಿಗೆಗೆ ಏಕೆ ಹೇಳಿದೆ ಎಂಬ ಪರಿತಾಪವನ್ನು ಹುಟ್ಟಿಸಿ, ಆ ರಾತ್ರಿ ಅವಳಿಗೆ ನಿದ್ದೆಯೂ ಚೂರೂ ಬರದಂತೆ ಮಾಡಿತು. ಆ ಬಡವೆಗಾಗಿ ಮರುಕವೂ ಹುಟ್ಟಿತು. 'ಅಂಥ ಶಿಕ್ಷೆ ಯಾವ ಸಲುವಾಗಿ? ನಾಗಿ ಉಂಗುರವನ್ನು ಕದ್ದಿರಬೇಕೆಂಬ ಸಂಶಯದಿಂದ, ಬಚ್ಚಲು ಮನೆಯ ಕೆಲಸಕ್ಕಿರುವವರು ಅವಳೊಬ್ಬಳೇ ಎಂಬುದರಿಂದ. ಕದ್ದದ್ದು ನಿಜವಾದರೂ, ಒಂದು ಹೆಂಗುಸಿಗೆ ಇಂಥ ಅಪಮಾನವೇ? ದಂಡನೆಯೇ?' ಎನಿಸಿತು.

'ಅವಳಿಗಾದರೂ ಕದಿಯುವ ದರಿದ್ರ ಬುದ್ಧಿ ಏತಕ್ಕೆ ಬಂದಿತೊ' ಎಂಬ ದುಃಖವಾಯಿತು.

ಮರುದಿನ ಬೆಳಿಗ್ಗೆ ಮಾತ್ರ ಅದೇ ನಾಗಿ ನಿತ್ಯದಂತೆ ನೀರಿನ ಕೆಲಸಕ್ಕೆ ಬರಲಿಲ್ಲ. ತಾನು ಕದ್ದ ಉಂಗುರದೊಡನೆ ಆಕೆ ಬಂದೇ ಬಂದಾಳೆಂದು ಕಾದಿದ್ದ ಮಹಾಬಲಯ್ಯ ಅವಳನ್ನು ಹುಡುಕಿ ತರಲು ಜನರನ್ನು ಕಳಿಹಿಸಿದರು. ಸುತ್ತಣ ಒಕ್ಕಲು ಮನೆಗಳಿಗೆಲ್ಲಾ ಜನರನ್ನು ಅಟ್ಟಿದರು. ಕೊನೆಗೂ ಅವಳು ಸಿಕ್ಕಿದ ವಾರ್ತೆ ದೊರಕಿತು. ಅವಳೆಂದರೆ ಅವಳೇ ಅಲ್ಲ. ಮನೆಯ ಹಿತ್ತಲಿನ ಹಿಂಭಾಗದ ಕೆರೆಯಲ್ಲಿಯ ಅವಳ ಶವ!

ಇದು ನಡೆದ ಮರುದಿನ ಸರಸ್ವತಿಯ ಸ್ನೇಹಿತೆ ಗಂಗಮ್ಮ ಬಚ್ಚಲು ಮನೆಯ ಹಾಸುಗಲ್ಲುಗಳ ಸೆರೆಯಲ್ಲಿ ಸಿಕ್ಕಿಕೊಂಡ ಅವಳ ಉಂಗುರವನ್ನು ತಂದೂ ಕೊಟ್ಟಳು. ಒಂದು ದುರ್ದೈವೀ ಜೀವದ ಬಲಿಗೆ ತಾನು ಕಾರಣಳಾದೆನಲ್ಲ ಎಂಬ ಕೊರಗು ಸರಸ್ವತಿಯ ಜೀವನದಲ್ಲಿ ಯಾವಜ್ಜೀವ ಅಂಟಿಕೊಂಡಿತು.

* * *

ಅರಬಳ್ಳಿ ಮಹಾಬಲಯ್ಯನವರು ಬೆಳೆದ ರೀತಿಯೇ ವಿಚಿತ್ರ. ಸುತ್ತಮುತ್ತಣ ಆ ನಾಲ್ಕಾರು ಹಳ್ಳಿಗಳಿಗೆ ಅದೂ ಕಾಡುಗುಡ್ಡಗಳು ತುಂಬಿದ ಹಳ್ಳಿಗಳಿಗೆ, ಅರಬಳ್ಳಿ ಮನೆ ಎಂಬುದು ತುಂಬ ಹೆಸರಾದಂಥ ಮನೆ. ಅದು ಶ್ರೀಮಂತ ಕುಟುಂಬ. ಆ ಪ್ರದೇಶಕ್ಕೆಲ್ಲ ಶಂಕರಯ್ಯನವರೂ ಅವರ ಹಿಂದಿನವರೂ ದೊರೆಗಳಂತೆ ಬಾಳಿ ಬದುಕಿದವರು. ಸುತ್ತಣ ಯಾವ ಬಯಲಿನ ಸೆರಗಿಗೆ ಹೋದರೂ ಅವರದೇ ಒಕ್ಕಲು ಮಕ್ಕಳು. ಅದು ತೀರ ಮಲೆನಾಡಿನ ಸೆರಗು ಎಂಬುದರಿಂದಲೋ ಏನೋ- ಬಹಳ ಕಾಲದಿಂದ ಅವರ ಪೀಳಿಗೆ ಕವಲೊಡೆದು ಇದ್ದ ಭೂಮಿ ಹರಿಹಂಚಾಗಿ ಹೋಗಲಿಲ್ಲ. ಮನೆಯಲ್ಲಿ ಹುಟ್ಟುವ ಮಕ್ಕಳು ಒಬ್ಬರೋ ಇಬ್ಬರೋ. ಅದೇ ರೀತಿ ಶಂಕರಯ್ಯನವರಿಗೆ ಇದ್ದದ್ದು ಒಬ್ಬನೇ ಮಗ, ಒಬ್ಬಳೇ ಮಗಳು. ಹಾಗಾಗಿ ಅವರು ಮಗ ಮಹಾಬಲನನ್ನು ಬಹಳ ಮುದ್ದಿನಿಂದಲೇ ಬೆಳೆಸಿದರು. ಮನೆಯಲ್ಲೇ ಐಗಳನ್ನು ಇರಿಸಿಕೊಂಡು ಒಂದಷ್ಟುಕಾಲ ಪಾಠವನ್ನೂ ಹೇಳಿಸಿದರು, ಮತ್ತೆ ಮುದ್ದಿನ ಮಗನೆಂದು ತಾವು ಊರು ಬಿಟ್ಟು ಹೋದಾಗಲೆಲ್ಲ ಅವನನ್ನೂ ಜತೆಯಲ್ಲಿಯೇ ಕರೆದುಕೊಂಡು ಓಡಾಡಿಸಿದರು. ಅದರಿಂದಾಗಿ ಕ್ರಮೇಣ ಹೊರಗಣ ಊರುಗಳ ಗಾಳಿ ಅವನಿಗೂ ತಗುಲತೊಡಗಿತು. ಎಳೆಯ ವಯಸ್ಸಿನಲ್ಲಿಯೇ ಹೆಣ್ಣಿನ ಹುಚ್ಚು ಅವನಿಗೆ ಒಂದು ಗೀಳಾಗಿ ಪರಿಣಮಿಸಿತು. ಅದರ ಜತೆಯಲ್ಲಿ ತಂದೆಯ ನಿಷ್ಠುರ ವೃತ್ತಿಯು ಅವನ ಮಟ್ಟಿಗೆ ವಿನೋದ ಪ್ರವೃತ್ತಿಯ ಒಂದು ವಿಶೇಷಾಂಗ ಆಯಿತು. ಹುಡುಗನಿದ್ದಾಗಲೇ ನಾಯಿಯೋ, ಬೇಲಿ ಮುರಿದು ಬಂದ ದನವೋ ಯಾವ ಪ್ರಾಣಿ ಇದ್ದರೂ ಅವನ ಕ್ರೂರ ವಿನೋದಕ್ಕೆ ವಸ್ತುವಾಗಿರುತ್ತಿತ್ತು. ಅದನ್ನು ತಡೆದವರೂ ಇಲ್ಲ.

ಶಂಕರಯ್ಯನವರಿಗೆ ಧಾರಾಳ ಸಂಪತ್ತು ಇದ್ದರೂ, ಮಗನ ಸಲುವಾಗಿ ಮದುವೆಗೆ ಮಾಡಿದ ಹಲವಾರು ಪ್ರಯತ್ನಗಳು ಕುಂಟು ನೆಪದಿಂದಾಗಿ ತಪ್ಪಿದ್ದುವು.

ಸರಸ್ವತಿಯನ್ನು ಮದುವೆಯಾಗುವುದಕ್ಕಿಂತ ಎಷ್ಟೋ ಮುಂಚೆಯೇ ನೆರೆಕರೆಯ ಪಟ್ಟಣಗಳಿಗೆ ಹೋಗಿ, ವಿಲಾಸವತಿಯರ ಸ್ನೇಹ ಬೆಳೆಸಿದ ಮಹಾ

# ಧರ್ಮರಾಯನ ಸಂಸಾರ

ಬಲನಿಗೆ ಎಷ್ಟರ ಮಟ್ಟಿಗೆ ಮಡದಿ ಬೇಕಾಗಿದ್ದಳು ಎಂಬುದನ್ನು ಆತನೂ ತಿಳಿದಿರಲಾರ. ಅವನ ಶರೀರ ದೊಡ್ಡದು· ಊಟ ತಿಂಡಿ, ಧಾರಾಳ. ಯಾವ ವಿಷಯದಲ್ಲೂ ಅಂಕೆ, ಅಂಕುಶ ಕಾಣದ ವನು. ಕೈಯಲ್ಲಿ ದುಡ್ಡಿಗೂ ಕೊರತೆಯಿರುತ್ತಿರಲಿಲ್ಲ. ಹೀಗಾಗಿ, ಅವನ ಪೋಕ್ರಿಯುತನಕ್ಕೆ ಇತಿಮಿತಿಯೂ ಇರಲಿಲ್ಲ. ಆ ವಿಷಯವಾದ ನಯ, ನಾಜೂಕುಗ ಳನ್ನು ಅವನು ಬೆಳೆಯಿಸಿಕೊಂಡವನಲ್ಲ. ಅದು ತನ್ನಂತೆಯೇ ಬೆಳೆಯುವುದೂ ಅಲ್ಲವಷ್ಟೆ. 'ಕೈ ತುಂಬ ದುಡ್ಡಿದ್ದರೆ ಯಾವ ಚೆಲುವೆಯೂ ತನಗೆ ಒಲಿಯಲೇ ಬೇಕು' ಎಂಬ ಭಾವನೆ ಅವನದು. ಈತ ಕೊಡುವ ದುಡ್ಡಿನ ಮುಖವನ್ನು ಕಂಡು, ಅವನ ಹುಚ್ಚುಬಯಕೆಗಳಿಗೆ ಸರಿಯಾಗಿ ಕುಣಿದು, ಹೊಟ್ಟೆಹೊರೆಯುವ ಜನಗಳು ಸಾಕಷ್ಟು ಅಲ್ಲಲ್ಲಿ ಇರುತ್ತ ಒನಪು, ಸ್ನೇಹಗಳಿಂದ ಹೆಣ್ಣನ್ನು ಒಲಿಸಿಕೊ ಳ್ಳಬೇಕಾದ ಅನಿವಾರ್ಯವೇ ಅವನಿಗೆ ಕಂಡು ಬಂದಿರಲಿಲ್ಲ. ತಂದೆಯು ಬದುಕಿ ಇದ್ದಷ್ಟು ಕಾಲವೂ ಆತನ ಓಡಾಟ ಹೆಚ್ಚಾಗಿ ಪರ ಊರು ಗಳಲ್ಲಿ. ಕಡಲ ತೀರದ ಭಟ್ಕಳ, ಬಸರೂರು, ಕುಂದಾಪುರಗಳಿಂದ ಹಿಡಿದು ಘಟ್ಟದ ಸೆರಗಿನ ತೀರ್ಥಹಳ್ಳಿಯ ತನಕವೂ ಅವನು ಮೇಯುವ ಹೆಣ್ಣಿನ ಹೊಲ ವಿಸ್ತರಿಸಿತ್ತು.

ಸ್ವಂತ ಮನೆಯ ಜವಾಬ್ದಾರಿ ಅಧಿಕವಾದ ಮೇಲೆ, ಆತ ಮೊದಲಿನಂತೆಯೇ ಕುಂದಾಪುರ, ಉಡುಪಿ, ತೀರ್ಥಹಳ್ಳಿಗಳಿಗೆ ಹೋಗಿ ಆಗಾಗ ಇದ್ದು ಬರುವುದು ಕಷ್ಟವಾಯಿತು. ಹಾಗೆಂದು ಮನಸ್ಸು ಕೇಳುತ್ತದೆಯೆ? ಸ್ವಾಭಾವಿಕವಾಗಿಯೆ ಅದು ಊರು ಮನೆಯಲ್ಲಿಯೆ ಮೇವನ್ನು ಅರಸುವ ಗೂಳಿಯಂ ತಾಯಿತು. ಯಾವಳ ಮೇಲೆ ಆತನ ಕಣ್ಣು ಬಿದ್ದರೂ ಸರಿಯೇ ಅವಳು ಬಲಿಯಾಗುವುದು ನಿಶ್ಚಯ ಎಂಬ ಭಯ. ಇದರಿಂದಾಗಿ ಆತನಿಗೆ ತನ್ನನ್ನು ನಂಬಿ ಬಂದ ಸರಸ್ವತಿಯ ಮೇಲೆ ಒಂದು ದಿನಕ್ಕೂ ಮೋಹ ಎಂಬುದು ಅಂಕುರಿಸಲಿಲ್ಲ. ಅವಳು ಹಕ್ಕಿನ ಹೆಂಡತಿ. ಆದರೇನು ಆತ ಬಯಸುತ್ತಿದ್ದುದು ಮಾಂಸಪುಷ್ಟ ಶರೀರಗಳನ್ನು. ಅಂತಹ ಹಸಿವನ್ನು ಹಿಂಗಿಸುವ ಯಾವ ಲಕ್ಷಣ ವನ್ನೂ ಅವಳಲ್ಲಿ ಕಾಣಲಾರ. ಕ್ರೂರತನ ಎಂಬುದು ಅನೇಕ ವರ್ಷಗಳಿಂದ ಅವನ ಪರಿ ಹಾಸದ ಮುಖವಾಗಿ ಬೆಳೆದು ಬಂದಿತ್ತಾದ್ದರಿಂದ ಇನ್ನೊಂದು ಜೀವಕ್ಕೆ ಏನು ವ್ಯಥೆಯಾದೀತು ಎಂಬುದನ್ನೂ ಅವನು ಹೇಗೆ ತಿಳಿದಾನು? ಸ್ತ್ರೀಯ ಪಾಲಿನ ಲಜ್ಜೆಯೆಂಬ ವಸ್ತು ಉಫ್ ಎಂದು ಊದಿದೊಡನೆಯೆ ಹೋಗಬೇಕೆಂಬುದು ಅವನ ಆತುರ.

ಇದಕ್ಕೆ ತೀರ ಪ್ರತಿಯಾಗಿ ಬೆಳೆದವಳು ಸರಸ್ವತಿ, ಅವಳಿಗೆ ಒನಪು ಒಯ್ಯಾರ ತಿಳಿಯದು. ಗಂಡಸು ಎಂದರೆ ಲಜ್ಜೆಯಿಂದ ಮುದುಡುವಂಥ ಸಂಪ್ರ ದಾಯದಲ್ಲಿ ಬೆಳೆದವಳು. ಮಹಾಬಲಯ್ಯನ ದೃಷ್ಟಿ ಯಲ್ಲಿ ಅವಳು ಬಲಿಯದ ಹೀಚು. ತನ್ನ ಇಚ್ಛೆಗೆ ಸಮನಾಗಿ ಅವಳು ನಗುನಗುತ್ತ ಮಣಿಯಲಿಲ್ಲ ಎಂಬುದು ಅವಳ ಮೇಲಿನ ತಾತ್ಸಾರಕ್ಕೆ ಕಾರಣ ವಾಯಿತು. ತನ್ನ ಅಹಂಕಾರ, ಅತಿ-ರತಿ, ಹಿಂಸಾ ಪ್ರಿಯತೆಗಳ ದೆಸೆಯಿಂದ, ಆ ಇನ್ನೊಂದು ಜೀವ ತನ್ನ ಬಳಿಗೆ ಸರಿಯದಂತೆ ಮಾಡಿದ. ಅಲ್ಲದೆ ಅವಳ ವಿಷಯದಲ್ಲಿ ಒಂದು ಜಿದ್ದು ಕೂಡ! ತನ್ನ ಮನೆಯನ್ನು ಅವಳ ಪಾಲಿನ ಒಂದು ಸೆರೆಮನೆ ಯನ್ನಾಗಿಸುವ ಹಟತೊಟ್ಟ. ತಾನು ಹಾಗೆ ಅವಳನ್ನು ದೂರವಿಟ್ಟೆನಾದರೆ, ಅವಳೊಂದು ಜೀವಚ್ಛವವಾಗಿ ಸುಖಗೆಟ್ಟ ಪ್ರೇತವಾಗಿ ಮನೆಯಲ್ಲಿ ಬಿದ್ದಿರಲೇ ಬೇಕು.

ಇತ್ತ ಸರಸ್ವತಿಯು, ಆ ಮನೆಯಲ್ಲಿ ಹೇಗೆ ಬಾಳಿದಳೆಂಬುದು ಅವಳಿಗೂ ತಿಳಿದಿದೆಯೋ ಇಲ್ಲವೋ! ಗಂಡು, ಮಾರು ಸಮೀಪ ಕಾಣಿಸಿ ದರೇ ಅವಳ ಮೈ ಉರಿಯುತ್ತಿತ್ತು. ಅವಳಿಗೆ ತಾನು ಬದುಕಿ ಇದರ ಕೊನೆಯನ್ನು ಕಾಣಲೇಬೇಕೆಂಬ ಹಟ ಅವಳ ಮನಸ್ಸಿನಲ್ಲಿ ಎಲ್ಲಿಂದ ಬೇರೂರಿ

# ಪುಸ್ತಕ ವಿಭಾಗ

ಸಿತೋ ಹೇಳುವಂತಿಲ್ಲ. ಈಗ ಎಲ್ಲಿಲ್ಲದ ಅಂಥ ಹಟ ಮೂಡಿದೆ. 'ನಾನು ಗೆಲ್ಲುತ್ತೇನೆಯೋ? ಅವರು ಗೆಲ್ಲುತ್ತಾರೋ? ಇದರ ಕೊನೆಯನ್ನು ಕಂಡೇ ಹೋಗುವವಳು ನಾನು. ಊರಿಗೆ ಮರಳಿ ಹೋಗುವವಳಲ್ಲ. ಈ ಮನೆಯನ್ನೂ ಬಿಡುವವ ಳಲ್ಲ. ನನ್ನ ಜೀವದಲ್ಲಿ ಉಸಿರಿರುವಷ್ಟು ಕಾಲವೂ ಯಾರಿಗೂ ಬಗ್ಗದೆ, ಜಗ್ಗದೆ, ಗಂಡ ನನ್ನನ್ನು ಎಷ್ಟೂ ತಾತ್ಸಾರವಾಗಿ, ಹೀನಾಯವಾಗಿ, ಕ್ರೂರವಾಗಿ ಕಂಡಿ ದ್ದಾನೋ ಅಷ್ಟೇ ಗಡಸಿನಿಂದ ಇದೇ ಮನೆಯಲ್ಲಿ ಬಾಳುತ್ತೇನೆ. ಅವರು ನನಗೆ ಮಾಡಿದ ಅನ್ಯಾಯದ ಫಲವನ್ನು ನನ್ನ ಕಣ್ಣಿಂದಲೇ ಕಂಡು ಆನಂದ ಪಡುವ ತನಕವೂ ನಾನು ಇಲ್ಲಿಯೇ ಇರುವವಳು. ಮನಸ್ಸು ಸಾವಿರ ಸಾರಿ ಆತ್ಮಹತ್ಯೆ ಮಾಡಿಕೊಂಡು ಈ ಬಾಳನ್ನು ಮುಗಿಸು-ಎಂದರೂ, ಹಾಗೆ ಮಾಡುವವಳು ನಾನಲ್ಲ. ಇನ್ನು ಬಾಳಿ, ನನಗೆ ಆಗಬೇಕಾದುದು ಏನೂ ಇಲ್ಲ ನಿಜ. ಸಾವು ನನಗೆ ಸುಖವೆಂಬುದು ಗೊತ್ತು. ಆದರೆ, ನಾನು ಎರಡು ಬಾರಿ ಈಗಾಗಲೇ ಸತ್ತಾಗಿದೆ. ಬದುಕಿದ್ದೂ ಸತ್ತಿ ದ್ದೇನೆ. ಮೂರನೆಯ ಸಾವು ಏತಕ್ಕೆ? ಅದಂತೂ ಇದ್ದೇ ಇದೆ.'

ಎಳೆತನದಲ್ಲಿ, ಅದೇ ಸರಸ್ವತಿಯು ತನ್ನ ತಾಯಿ ಮಹಾಲಕ್ಷ್ಮಿ ತಂದೆಗೆ ಬಗ್ಗಿ, ಕುಗ್ಗಿ ನಡೆದದ್ದನ್ನು ತುಂಬ ಕಂಡಿದ್ದಾಳೆ. ಆದರೆ, ಈ ಮನೆಯನ್ನು ಹೊಕ್ಕ ಬಳಿಕ-ತಾನು ತಾಯಿಯಂತೆ ಆಗಲೇ ಕೂಡದು. ಹಾಗೆ ಆಗುವುದೇನೇ ಒಂದು ಅಪ ರಾಧ -ಎಂಬ ಖಚಿತವಾದ ತೀರ್ಮಾನಕ್ಕೆ ಬಲು ಬೇಗನೇ ಬಂದಿದ್ದಾಳೆ. ಅವಳಿಗೆ, ತನ್ನನ್ನು ಆ ಮನೆಗೆ ತಿಳಿತಿಳಿದು ನೂಕಿದ ಅಥವಾ ತಿಳಿಯ ದೆಯೆ ನೂಕಿ ತಪ್ಪು ಮಾಡಿದ, ಅಪ್ಪ ಅಮ್ಮಂದಿರ ಮೇಲಿನ ಮಮತೆಯೂ ಹೊರಟು ಹೋಗಿದೆ. ಈಗಂತೂ ಅವಳ ಅಪ್ಪ ತೀರಿಕೊಂಡಾಯಿತು. ಅಮ್ಮ ಒಬ್ಬಳೇ ಉಳಿದಿದ್ದಾಳೆ. ಅವಳನ್ನು ಕಾಣಬೇ ಕೆಂಬ ಆಸೆಯೂ ಅವಳಿಗಿಲ್ಲ. ಆದರೂ, ಕಂಡೇನು ಒಂದು ದಿನ, ಎಂದು ಎಣಿಸುವುದುಂಟು. ಅದು ಯಾವಾಗ? ತನ್ನ ಛಲ ಗೆದ್ದು, ತಾನು ಹುಲಿಯ ಗವಿಯನ್ನು ಹೊಕ್ಕು, ಅದರ ಹಲ್ಲುಗಳನ್ನು ಕಿತ್ತು, ತನ್ನ ಕೈಯಲ್ಲಿ ಹಿಡಿದುಕೊಂಡು ನಿಂತ ಬಳಿಕ..

ಮಹಾಬಲಯ್ಯ ತಮ್ಮ ವಿಲಾಸಮಯ ಜೀವ ನದಿಂದಾಗಿ ತಮ್ಮ ಸ್ವಂತ ತೋಟ, ಮನೆ, ಗದ್ದೆಗಳ ಆರೈಕೆಯನ್ನು ನೋಡುವ ಕಡೆಗೆ ಸಾಕಷ್ಟು ದೃಷ್ಟಿ ಯನ್ನು ಹರಿಸಿದ್ದಿಲ್ಲ. ಒಕ್ಕಲು ಮಕ್ಕಳೊಡನೆ ವಿಶೇ ಷವಾಗಿ ಬೆರೆಯುವುದು ವರ್ಷಕ್ಕೊಂದು ದಿನ ಮಾತ್ರ. ಆದರೆ ಆ ದಿವಸವೆಂದರೆ ವರ್ಷದ ಯುಗಾದಿ. ಆ ದಿವಸ ಯಾವತ್ತೂ ಒಕ್ಕಲು ಮಕ್ಕಳನ್ನು ಕರೆಯಿಸಿಕೊಂಡು ಭರ್ಜರಿ ಊಟ ಹಾಕಿಸುತ್ತಾರೆ. ಕನಿಷ್ಠ ಇನ್ನೂರು ಜನ ಆಳಾದರೂ ಮನೆಯ ಮುಂದಿನ ಅಂಗಳದಲ್ಲಿ ತಮ್ಮ ಮಕ್ಕಳು ಮರಿಗಳೊಡನೆ ಸಾಲಾಗಿ ಕುಳಿತುಕೊಂಡು, ಗಡ ದ್ದಿನ ಊಟ ಉಣ್ಣುತ್ತಾರೆ. ಅದೂ, ಹೋಳಿಗೆ ಪಾಯಸಗಳ ಊಟ. ಆ ಊಟದ ತನಿಖಿ ಅವರದ್ದೇ. ಆಳುಗಳನ್ನು ಗುರುತಿಸಿ, ತಾವೇ ತನಿಖಿ ಮಾಡಿ, ಅವರು ಬೇಡವೆಂದರೂ ನಾಲ್ಕು ಸೌಟು ಪಾಯಸವನ್ನು ಹೆಚ್ಚಿಗೆ ಹಾಕಿಸಿ, ಹೋಳಿಗೆ ಕೈಗೂ ಕೊಟ್ಟು, ಎಲೆಗೂ ಬಡಿಸಿ "ತಿನ್ನು, ನಿನಗೇನು ಧಾಡಿ!" ಎಂದು ಗದರಿಸುತ್ತಿದ್ದರು. ಅದು ಯಾವ ಕಾರಣಕ್ಕೇ ಇರಲಿ, ಆ ವರ್ಷ ಅವರಿಂದ ನಾಲ್ಕು ಚಾಟಿಯ ಏಟನ್ನು ಬೆನ್ನಿನ ಮೇಲೆ ಬಾರಿಸಿಕೊಂಡ ಆಸಾಮಿ ಅಲ್ಲಿ ಕುಳಿತಿದ್ದರೆ, ಅವನ ವಿಷಯದಲ್ಲಿ ಅವರು ಇನ್ನಷ್ಟು ಉಪಚಾರವನ್ನು ಮಾಡಿಯಾರು.

ಈ ಯುಗಾದಿಯ ಹಬ್ಬದ ಕಟ್ಟಳೆ ಮುಂದು ವರಿದಿದೆಯಾದರೂ ಅವರ ಕೈಗೆ ಆಸ್ತಿಯು ಬಂದ ಈ ಕೆಲವಾದರೂ ವರ್ಷಗಳಲ್ಲಿ ಹೊಲ ಮನೆಗಳ ಉತ್ಪನ್ನ ಹೆಚ್ಚಲಿಲ್ಲ. ಈ ಅವನತಿಯನ್ನು ಸರಸ್ವ ತಿಯು ಕಾಣದೆಯೂ ಇಲ್ಲ. 'ಇದೆಲ್ಲಾ ಒಂದು ದಿವಸ ನರಿನಾಯಿ ತಿಂದು ಹೋಗುವ ಬದುಕು,

# ಧರ್ಮರಾಯನ ಸಂಸಾರ

ಪೋಗಲಿ' ಎಂದು ತನ್ನಷ್ಟಕ್ಕೆ ಅಂದುಕೊಳ್ಳುವುದುಂಟು. ಆದು ಹಾಗೆ ಹಾಳಾಗಬೇಕೆಂದೇನೂ ಅವಳ ಇಚ್ಛೆಯಲ್ಲ. ಯಾರ ಮೆಚ್ಚಿಕೆಗಾಗಿ ಕೈ ಹಾಕಬೇಕು ಎಂಬುದರಿಂದ.

ಒಂದು ವರ್ಷ, ಯುಗಾದಿಗೆ ನಾಲ್ಕು ದಿನಗಳ ಮುಂಚೆಯೇ ಮಹಾಬಲಯ್ಯನವರ ಸವಾರಿ ರಾತ್ರಿ ಪೊತ್ತಿಗೆ ಗಾಡಿಯನ್ನು ಕಟ್ಟಿಸಿಕೊಂಡು ತಮ್ಮ ಒಬ್ಬ ಬಲಗೈಯ ಬಂಟನನ್ನು ಜತೆಗೆ ಕರೆದುಕೊಂಡು ಕುಂದಾಪುರಕ್ಕೆ ಪಯಣ ಹೊರಟರು. ಹೊರಡುವ ಮುಂಚೆ, ಅಡುಗೆಯ ಮನೆಯ ಬಳಿ ಸುಳಿದು ಕೆಲಸದಲ್ಲಿ ನಿರತಳಾದ ಹೆಂಡತಿಯನ್ನು ಕಂಡೂ ಕಾಣದವರಂತೆ, ಆದರೆ ಅವಳನ್ನು ಉದ್ದೇಶಿಸಿಯೇ "ಗಂಗಕ್ಕ, ನಾನು ಕುಂದಾಪುರಕ್ಕೆ ಹೊರಟಿದ್ದೇನೆ. ಯುಗಾದಿ ದಿವಸ ಬೆಳಿಗ್ಗೆ ಬರುತ್ತೇನೆ. ಗೊತ್ತಾಯಿತೇ? ಯುಗಾದಿಗೆ ಏನೇನು ಆಗಬೇಕೆಂಬುದು ಗೊತ್ತಿದೆಯೆ?" ಎಂದಂದು ಹೊರಟು ಹೋದರು.

ನಾಲ್ಕೇ ನಾಲ್ಕು ದಿನಗಳಲ್ಲಿ ಆ ಯುಗಾದಿಯು ಉರುಳಿ ಬಂದಿತು. ಬೆಳಿಗ್ಗೆ ಹೊತ್ತು ಮೂಡಿ ಎರಡು ಗಳಿಗೆ ಆಗುವುದರೊಳಗೆ ಯಜಮಾನರು ಬಂದರೆಂಬ ವಾರ್ತೆಯನ್ನು ಎತ್ತುಗಳ ಕೊರಳ ಘಂಟೆ ಕೇಳಿಸಿತು. ಅವರು ನಡೆದು ಅಂಗಳಕ್ಕೂ ಬಂದರು. ಗಟ್ಟಿಯಾದ ದನಿಯಿಂದ ಆಳು ತಿಮ್ಮನನ್ನು ಕರೆದು ಹೇಳಿದರು.

"ನೋಡು, ಥಟ್ಟನೆ ಒಂದು ಕೆಲಸ ಮಾಡು. ಹೆಣೆದ ಮಡಲು ಇವೆಯಲ್ಲವೆ. ಅವನ್ನು ಬಚ್ಚಲು ಮನೆಯ ತಡಿಕೆ ಗೋಡೆಯ ಹೊರಗೆ ಸಮನಾಗಿ ಹೊದೆದು ಒಂದು ಚೂರೂ ಕಾಣಿಸದ ಹಾಗೆ ಮಾಡು" ಎಂಬ ಅಪ್ಪಣೆಕೊಟ್ಟರು. ಆಗ ಗೊತ್ತಾಯಿತು. ರಾಯರ ಜತೆಯಲ್ಲಿ ಮಂಗಳಾಂಗಿಯೊಬ್ಬಳು ಬಂದದ್ದು. ಅವಳನ್ನು ರಾಯರೇ ಆ ಬಚ್ಚಲು ಮನೆಗೆ ಕರೆದೊಯ್ದು ಅಲ್ಲಿಂದ ತಮ್ಮ ಮಹಡಿಗೂ ಮುಟ್ಟಿಸಿ ಕೆಳಕ್ಕೆ ಬಂದರು. ಇದನ್ನೆಲ್ಲ ಕಂಡ ಗಂಗಕ್ಕ ಸರಸ್ವತಿಗೆ ಅದರ ವರದಿಯನ್ನೂ ಮುಟ್ಟಿಸಿದಳು.

ಸರಸ್ವತಿಗೆ ನಗೆ ಬಂದಿತು. 'ಇಷ್ಟೊಂದು ವರ್ಷ, ಹೆಂಗಸರು ಸ್ನಾನ ಮಾಡುವಾಗ ಸ್ವಲ್ಪ ಮುಚ್ಚುಮರೆ ಬೇಕೆಂದು ಅನಿಸಿರಲಿಲ್ಲ. ಕಡ ತಂದ ಒಂದು ಹೆಣ್ಣಿನ ಸಲುವಾಗಿಯಾದರೂ ಈ ನಾಜೂಕಿನ ಬುದ್ಧಿ ಬಂದಿತಲ್ಲ' ಎಂದುಕೊಂಡಳು.

ಮುಂದೊಂದು ತಿಂಗಳ ಕಾಲ, ಅವರ ಮನೆಯ ಚಾವಡಿಯಲ್ಲಿ, ಮಹಡಿಯಲ್ಲಿ, ಅಂಗಣದಲ್ಲಿ ಒಂದಿಷ್ಟೂ ಬಿಸಾತಿಲ್ಲದೆ ಓಡಾಡುವ, ತಮ್ಮೂರಿಗೆ ಬಂದ ಆ ರಂಭೆಯ ಮದಗಜಗಮನವು ಆಳು ಕಾಳುಗಳ ಪಾಲಿಗೆ ಒಂದು ಸೊಗಸಿನ ನೋಟವಾಯಿತು. ಅವಳ ಹೆಸರು 'ರಂಭೆ' ಎಂದೇನಲ್ಲ. ಅವಳ ತಾಯಿ ಅವಳಿಗಿರಿಸಿದ್ದ ಹೆಸರು 'ಮಾಚಿ'. ತನ್ನ ಹೊಸ ಇನಿಯನಷ್ಟೇ ಗಾತ್ರದ ದೇಹ ಅವಳದ್ದು. ಎಣ್ಣೆಗಪ್ಪು ಮೈ ಬಣ್ಣ, ಧಾರಾಳವಾದ ಮಾಂಸ ಪುಷ್ಟ ಶರೀರ. ಅದರಿಂದಲೇ ಅನ್ಯರಿಗೆ ತೃಪ್ತಿ ಎಂಬುದು ಅವಳಿಗೆ ಚೆನ್ನಾಗಿ ಅರಿವಾಗಿತ್ತು. ರಾಯರ ಮನೆಗೆ ಬಂದಾಗಿನಿಂದ ಆಕೆ, ಇದು ನಾಲ್ಕೂ ದಿನಕ್ಕಾದರೂ, ತನ್ನದೇ ಮನೆ ಎಂಬಷ್ಟು ನಿರ್ಭೀತಿಯಿಂದ ಅಲೆದಾಡುತ್ತಿದ್ದಳು. ಆದರೆ ಸರಸ್ವತಿಯು ತಮ್ಮೀ ಪಟ್ಟದರಸಿಯ ವಿಚಾರದಲ್ಲಿ ಅತೀವ ತಾತ್ಸಾರ ತೋರುತ್ತಿದ್ದದ್ದು ಮಹಾಬಲಯ್ಯನವರ ಗಮನಕ್ಕೆ ಬಾರದಿರಲಿಲ್ಲ. "ಅಬ್ಬಾ, ಇವಳ ಸೊಕ್ಕೇ" ಎಂದುಕೊಂಡರು.

ಅಂತಹ ಸಮಯದಲ್ಲೊಂದು ದಿವಸ ಸರಸ್ವತಿ, ರಾತ್ರೆ ತನ್ನ ಊಟ ಮುಗಿಸಿ ಕುಳಿತುಕೊಂಡ ವೇಳೆಯಲ್ಲಿ "ನಿನ್ನ ಯಜಮಾನರು ಪುರುಸೊತ್ತು ಮಾಡಿ ಒಂದು ಕ್ಷಣ ಉಪ್ಪರಿಗೆಗೆ ಬಂದು ಹೋಗು ಎಂದು ಅಂದರು. ಯಾಕೋ ಏನೋ" ಎಂದು ಗಂಗಕ್ಕ ಸರಸ್ವತಿಗೆ ಸುದ್ದಿ ತಿಳಿಸಿಹೋದಳು. ಅವಳಲ್ಲಿ ವಿಸ್ಮಯ ಮೂಡಿತು. 'ಹೋಗಲೇ? ಬೇಡವೇ?' ಎಂದೂ ಕಾಣಿಸಿತು. 'ಹೋದರೆ

# ಪುಸ್ತಕ ವಿಭಾಗ

ಏನಾಗುತ್ತದೆ?' -ಎಂಬ ಕೆಚ್ಚು ಮರುಗಳಿಗೆಯಲ್ಲೇ ಉದಯಿಸಿತು. ಅಲ್ಲಿಂದ ಎದ್ದಳು. ಸರಸರನೆ ಮಹಡಿಯ ಮೆಟ್ಟಲುಗಳನ್ನೇರಿ, ಮೇಲಕ್ಕೂ ಹೋದಳು. ಅವಳು ಹೋಗಿ ಮಹಡಿಯ ಮುಂದಣ ದೊಡ್ಡ ಕೋಣೆಯಲ್ಲಿ ನಿಂತಾಗ, ಯಾರೂ ಕಾಣಿಸಲಿಲ್ಲ. ಈಕೆ ಪತಿಯನ್ನು ಕರೆಯುವಂತೆ "ಯಾಕೋ ಕರೆದಿರಂತೆ" ಎಂದಳು. ಆಗ ಮಗ್ಗುಲು ಕೋಣೆಯಿಂದ ಮಹಾಬಲಯ್ಯ ಹೊರಕ್ಕೆ ಬಂದರು.

ಅವರು "ಕರೆದದ್ದು ಹೌದು; ಒಂದಿಷ್ಟು ಕೆಲಸವಿದೆ. ಕೂತುಕೋ ಆ ಕುರ್ಚಿಯ ಮೇಲೆ" ಎನ್ನುತ್ತಿದ್ದಾಗ, ಒಳಗಡೆಯ ಕೋಣೆಯಿಂದ ಮಾಚಿಯ ಕೈಯ ಬಳೆಗಳ ಧ್ವನಿ ಕೇಳಿಸುತ್ತಿತ್ತು. ಆಗ ಅವಳಿಗೊಂದಿಷ್ಟು ಧೈರ್ಯವಾಯಿತು. 'ಹತ್ತಿರ ಇನ್ನೊಬ್ಬಳಿದ್ದಾಳೆ; ಹಿಂದಿನ ಆಟವನ್ನೇ ಇವತ್ತು ನಡೆಸಿದ್ದಾದರೆ; ಏನೇ ಬರಲಿ, ಅವರ ಕೊರಳನ್ನು ಕಚ್ಚಿ ರಕ್ತ ಹೀರಿಯೇ ಸಾಯುತ್ತೇನೆ' ಎಂಬ ದಿಟ್ಟ ನಿರ್ಧಾರವನ್ನು ಮಾಡಿದಳು.

"ಕುಳಿತುಕೋ" ಎಂದರು ಅವರು. ಇನ್ನೊಮ್ಮೆ ಮುಖಭಾವವನ್ನು ಅಡಗಿಸಿ ಅವಳೂ ಕುಳಿತಳು. ಮಹಾಬಲಯ್ಯ ಸರಸರನೆ ಒಳಕ್ಕೆ ಹೋಗಿ ಒಂದು ಮೀಯುವ ಪಂಚೆಯನ್ನು ಹಿಡಿದುಕೊಂಡು ಬಂದು, ಅವಳು ಅದೇನೆಂದು ಎಣಿಸುವುದರೊಳಗಾಗಿಯೇ ಅವಳ ಎರಡೂ ಕೈಗಳಿಗೆ ಕೋಳವನ್ನ ಬಿಗಿಯುವಂತೆ ಆ ಪಂಚೆಯನ್ನು ಬಿಗಿದು, ಅವಳ ಮುಖವನ್ನು ನೋಡುತ್ತ "ಸ್ವರ ಹೊರಡಿಸಿದ್ದಾದರೆ ಕೊಂದು ಹಾಕುತ್ತೇನೆ" ಎಂದರು. ಆಗ ಆಕೆಗೆ ಮುಂದಣದ ರೌರವದ ನೆನಪಾಯಿತು. ಚೀರಿ ಬೊಬ್ಬಿಡಬೇಕೆಂದು ತೋರಿದರೂ, ಭಯವನ್ನು ಒತ್ತಟ್ಟಿಗೆ ನೂಕಿಬಿಟ್ಟ ಹುಲಿಯಂತೆ "ನೀವು ಮಾಡುವದನ್ನೆಲ್ಲಾ ಮಾಡಿ! ಹೆದರುವಾಕೆ ನಾನಲ್ಲ. ನನ್ನ ಅಳುಕು ಸತ್ತು ಬಹಳ ವರ್ಷವಾಯಿತು. ನಿಮ್ಮ ಜೀವವನ್ನು ತಿಂದು ನಾನು ಸಾಯದಿದ್ದರೆ, ನಾನು ಅಪ್ಪನಿಗೆ ಹುಟ್ಟಿದ ಹೆಣ್ಣಲ್ಲ" ಎಂದಳು. ಬಾಯಿ ಬಿಮ್ಮಗೆ ಹಿಡಿದುಕೊಂಡು ಅವನ ಮನಸ್ಸಿನಲ್ಲಿ ನಿಂತಳು. ಅವಳ ಬಾಯಿಗೊಂದು ಅರಿವೆಯ ತುಣುಕವನ್ನು ತುರುಕಿದರೆ ಆಗುತ್ತಿತ್ತು ಅನಿಸಿತು. ಅವಳ ಸೆರಗನ್ನೇ ಎಳೆದು, ಮುದ್ದೆ ಮಾಡಿ, ಬಾಯಿಗೆ ಬಲವಂತದಿಂದ ತುರುಕಿದರು. ಅಲ್ಲಿಂದ, ಅವಳನ್ನು ಮಗ್ಗಲಿನ ಕೋಣೆಗೆ ಎಳೆದುಕೊಂಡೂ ಹೋದರು. ಹೋಗಿ ಗೋಡೆಯ ಬಳಿ ಅವಳನ್ನು ಒರಗಿಸಿ ನಿಲ್ಲಿಸಿ, ಚುಚ್ಚು ನಗುವಿನಿಂದ ತಮ್ಮ ಮೈ ಬಟ್ಟೆಗಳನ್ನು ಕಳಚಿ ದೂರಕ್ಕೆ ಎಸೆದು, ಅಷ್ಟೇ ವಿಕಾರದಿಂದ ಮಾಚಿಯ ಸೀರೆ ರವಿಕೆಗಳನ್ನು ತಾವೇ ಎಳೆದು, ಅಪಹರಿಸಿ, ಮಿಣುಕು ಲಾಂಟೀನು ಬೆಳಕಿನಲ್ಲಿ ಅವಳ ದೇಹದ ಸವಿಯನ್ನು ಉಣ್ಣತೊಡಗಿದರು. ಸರಸ್ವತಿ ಕಂಬದಂತೆ ನಿಂತಿದ್ದು ಹೇಗೋ ಹೇಗೋ ಬಾಯಿಯ ಅರಿವೆಯನ್ನು ಉಗುಳಿಬಿಟ್ಟು, ಕೆಂಡ ಕಾರುವ ಕಣ್ಣುಗಳಿಂದ ಒಂದಿಷ್ಟು ಹೊತ್ತು ತನ್ನ ಯಜಮಾನರ ಪಶುರತಿವಿಲಾಸಕ್ಕೆ ಸಾಕ್ಷಿಯಾದಳು.

ಅದಂತೂ ಮುಗಿಯಿತು. ಅವಳ ಬಾಯಿಂದ "ತೃಪ್ತಿಯಾಯಿತಲ್ಲ! ನೀವು ಒಂದು ಗಂಡಸು ಎಂಬುದು ಅವಳಿಗೂ ಗೊತ್ತಾಯಿತಲ್ಲ!" ಎಂದಳು. ಅನಂತರ "ಅಯ್ಯೋ ಮಾಚಿ, ಮಾಚಿ ಅಲ್ಲವೆ ನಿನ್ನ ಹೆಸರು? ನೀನು ಒಬ್ಬಳು ಸೂಳೆ ಎಂಬುದು ನನಗೆ ಮೊದಲೇ ಗೊತ್ತಿತ್ತು. ಸೂಳೆಯಾದರೂ ಒಂದು ಹೆಣ್ಣಷ್ಟೆ! ಹೆಣ್ಣು ಎಂದ ಮೇಲೆ ಹುಟ್ಟಿದ ಜನ್ಮಫಲಕ್ಕೆ ಒಂದಿಷ್ಟು ನಾಚಿಕೆಯನ್ನು ನಿನ್ನನ್ನು ಹುಟ್ಟಿಸಿದ ಬ್ರಹ್ಮನು ಕೊಟ್ಟಿದ್ದಾನು-ಎಂದು ಯೋಚಿಸಿದ್ದೆ. ಥೂ, ನಿನ್ನ ಜನ್ಮವೆ!" ಎಂದಂದು, ರಭಸದಿಂದ ಮೆಟ್ಟಲನ್ನಿಳಿದು ಕೆಳಗೆ ಬಂದಳು.

ಮುಂದಣ ನಾಲ್ಕು ದಿನಗಳಲ್ಲಿ ಅವರಿವರೊಳಗೆ ಏನು ನಡೆಯಿತೋ, ಮಾಚಿಯ ದಿಬ್ಬಣ ಅರಬಳ್ಳಿ ಮನೆಯಿಂದ ಹೊರಟು ಹೋಯಿತು.

# ಧರ್ಮರಾಯನ ಸಂಸಾರ

ಸರಸ್ವತಿಯ ಮುಂದೆ ದಿಗ್ವಿಜಯ ಗೈದೆನೆಂದುಕೊಂಡ ಮಹಾಬಲಯ್ಯನ ಮನಸ್ಸಿನಲ್ಲಿ ಒಂದು ಬಗೆಯ ಅಳುಕು ತಲೆದೋರಿತು. ಆ ರಾತ್ರಿ ನಿರ್ಭೀತಿಯಿಂದ ಆಕೆ ಆಡಿದ ಮಾತಿನಿಂದ ಅವಳಿಗೆ ತನ್ನ ವಿಷಯದ ಭಯವಾಗಲೀ, ಹಂಗಾಗಲೀ ಏನೇನೂ ಉಳಿದಿಲ್ಲವೆಂದು ಸ್ಪಷ್ಟವಾಯಿತು. ಹಾಗಾದರೆ ಗೆದ್ದದ್ದು ಯಾರು? ತಾನೇ? ಅವಳೆ? ಈ ಹೆಣ್ಣು ಏನನ್ನು ಮಾಡಿಯಾಳು? ಏನು ಮಾಡಲಾರಳು- ಎಂಬ ಪ್ರಶ್ನೆ ಹೊಟ್ಟೆಯಲ್ಲಿ ಕುಳಿತಿತು. ದ್ವೇಷದ ವಳ್ಳುರಿ ಅವರಲ್ಲೂ ಉರಿಯಿತು. ಒಂದೊಮ್ಮೆ ಇವಳನ್ನು ಕೊಂದು ಮುಗಿಸಿದರೆ ಏನು- ಎಂಬ ವಿಚಾರ ಗಕ್ಕನೇ ಮೂಡಿತು.

ಒಮ್ಮೊಮ್ಮೆ ಹೀಗೂ ಅನಿಸುತ್ತಿತ್ತು. ತಾನು ತನ್ನ ಬಣ್ಣವನ್ನು ನಾಲ್ಕು ದಿವಸ ಬದಲಿಸಿದರೇನು? ಅವಳನ್ನು ಒಲಿಸಿ, ಹಿಂದಿನದನ್ನೆಲ್ಲ ಮರೆತು ಬಿಡು ಅಂದರೇನು? ಅವಳು ತನ್ನ ಹತ್ತಿರ ಬಂದು ಮಲಗುವಂತೆ ಆದರೂ ಸರಿಯೆ, ಅವಳು ಮಲಗಿಕೊಂಡಲ್ಲಿಗೆ ತಾವೇ ಹೋದರೂ ಸರಿಯೇ-ರಾತ್ರಿ ನಿದ್ರೆ ಬಂದಾಗ ಕತ್ತು ಹಿಸುಕಿ ಕೊಂದು ಆಳುಗಳಿಂದ ಆ ಹೆಣವನ್ನು ಚೀಲದಲ್ಲಿ ತುಂಬಿಸಿ ನಡುಕಾಡಿನಲ್ಲಿ ಎಸೆದು ಬಂದರಾಯಿತು. ನರಿ ನಾಯಿ ತಿಂದು ಮುಗಿಸುತ್ತವೆ. ಅವಳು ಮನೆಯಲ್ಲಿ ಇಲ್ಲದ ವಿಚಾರ ಅನ್ಯರಿಗೆ ತಿಳಿಯುವ ಕಾಲಕ್ಕೆ 'ಅವಳು ತವರು ಮನೆಗೆ ನಿನ್ನೆ ರಾತ್ರಿ ಗಾಡಿ ಕಟ್ಟಿಸಿಕೊಂಡು ಹೋದಳು' ಎಂದು ಧಮಾಮಿ ಹಾರಿಸಿದರಾಯಿತು ಎಂದೂ ಯೋಚಿಸುವುದುಂಟು!

* * *

ಉಂಗುರವನ್ನು ಕದ್ದ ನಾಗಿಯನ್ನು ಶಿಕ್ಷಿಸಿದುದರ ಪರಿಣಾಮ ನೆನಪಾಯಿತು. ನಾಗಿಯ ಹೆಣವನ್ನು ತೆಗೆಯಿಸಿ, ಸುಟ್ಟು ಬೂದಿ ಮಾಡಿ, ಅದರ ಹಿಂದಣ ಕತೆಯನ್ನು ಅಡಗಿಸಿಡುವುದಕ್ಕೆ ಅವರು ಪಟ್ಟ ಪೇಚು ಸ್ವಲ್ಪವೇ? ಪರವೂರಿಗೆ ಹೋಗಿ ಮರಳಿದ ಅವಳ ಗಂಡನು ತನ್ನ ಹೆಂಡತಿ ಆತ್ಮಹತ್ಯೆ ಮಾಡಿಕೊಂಡ ಸಂಗತಿ ಕೇಳಿ ತಿಳಿದು, ಅಲ್ಲಿ, ಬೆದರಿ ಆ ಊರನ್ನೇ ಬಿಟ್ಟ. ಆದರೂ ಕೊನೆಗೆ ಏನಾಯಿತು? ನಾಗಿಯ ಗಂಡನಿಗೆ ಸ್ವಂತಕ್ಕೆ ಏನೂ ಮಾಡುವ ಧೈರ್ಯವಿಲ್ಲದೆ ಹೋದರೂ, ಯಾರಿಂದಲೋ ಪೋಲೀಸರಿಗೆ ಹೇಳಿ ಅರ್ಜಿಯೊಂದನ್ನು ಹಾಕಿಸಿ ಕುಳಿತ. ಶಂಕರನಾರಾಯಣದಿಂದ ಪೋಲೀಸರ ದಿಬ್ಬಣ ಅರಬಳ್ಳಿಗೆ ಬಂದೇ ಬಂತು, ಒಂದು ದಿನ. ಹಾಗೆ ಬಂದು, ಅವರ ನಾಲ್ಕಾರು ಮಂದಿ ಒಕ್ಕಲು ಮಕ್ಕಳನ್ನು ಗುದ್ದಿ, ಹಿಂಡಿ, ಅವರಿಂದ ಯಾವತ್ತೂ ಸುದ್ದಿಯನ್ನೂ ಸಂಗ್ರಹಿಸಿ, ಕೊನೆಗೆ ಮಹಾಬಲಯ್ಯನವರ ಕೈಗಳಿಗೆ ಕೋಳ ತೊಡಿಸಿದರು. ಅಂದು ಅವರಿಂದ ಬಿಡುಗಡೆ ದೊರಕಿದ್ದು- ಕೈಯ ಬಂಧನವಿದ್ದಾಗಲೇ, ಅಂಗಲಾಚಿ, ಪೋಲೀಸು ಇನ್ಸ್‌ಪೆಕ್ಟರರ ಮುಂದೆ, ಜೋಲು ಮೋರೆ ಹಾಕಿ, ದುಡ್ಡಿನ ಪೆಟ್ಟಿಗೆಯನ್ನು ಅವರ ಮುಂದಿಟ್ಟು "ನಿಮಗೆ ಬೇಕಾದುದನ್ನು ತೆಗೆದುಕೊಳ್ಳಿ; ನನ್ನ ಮರ್ಯಾದೆಯನ್ನು ಮಾತ್ರ ಕಾಪಾಡಿ" ಎಂದ ಬಳಿಕ. ಮನೆಗೆ ಬಂದ ಉದಾರಿಗಳಾದ ಆ ಪೋಲೀಸರಿಗೂ ಗೊತ್ತಿತ್ತು- ಆ ಊರಿನಲ್ಲಿ ಮಹಾಬಲಯ್ಯನವರಿಗಿರುವಂಥ ಕೀರ್ತಿ. ಇತ್ತ ಕಣ್ಣು ಕಾಣದ ನಾಗಿ ಸತ್ತರೇನು? ಉಳಿದರೇನು? ತಾನಾಗಿ ಮನೆಗೆ ಬಂದ ಲಕ್ಷ್ಮಿಯನ್ನು ಅವರು ಬಿಟ್ಟಾರೆಯೇ? ಅವರಿಂದ ದೋಚಬಹುದಾದಷ್ಟು ಹಣವನ್ನು ದೋಚಿ ಬಂದಂತೆಯೇ ಶಂಕರನಾರಾಯಣಕ್ಕೆ ಮರಳಿದರಲ್ಲವೆ. ಈಗ ತಮ್ಮ ಮಡದಿಯ ಮೇಲಣ ದ್ವೇಷ ತೀರಿಸಬೇಕೆಂಬ ಅವರ ದುರ್ಬುದ್ಧಿಗೆ ಅದೊಂದು ಭಯ.

* * *

ಬಾಹ್ಯ ಜಗತ್ತಿಗೆ ತಿಳಿಯದ ಅರಬಳ್ಳಿ ಮನೆಯ ಹಲಕೆಲವು ಅದ್ಭುತಗಳಲ್ಲಿ, ಇದ್ದಕ್ಕಿದ್ದಂತೆ ಘಟ್ಟಕ್ಕೆ ಹೋದ ಮಹಾಬಲಯ್ಯನವರ ಜತೆಯಲ್ಲಿ ಯೌವ

# ಪುಸ್ತಕ ವಿಭಾಗ

ನಕ್ಕೆ ಕಾಲಿರಿಸಿದ ನಾಗಪ್ಪಯ್ಯ ಎಂಬ ಒಬ್ಬ ತರುಣ ಬಂದುದು ಒಂದು ಅದ್ಭುತವೇ.

ನಾಗಪ್ಪಯ್ಯ ಘಟ್ಟದಿಂದ ಆ ಮನೆಗೆ ಬಂದು ಕಾಲಿರಿಸಿದ ಮೇಲೆ ಕಾಣುವುದಿಲ್ಲವೆಂಬ ಕಣ್ಣುಗಳಿಗೂ ಆ ಹುಡುಗ ಗೋಚರಿಸತೊಡಗಿದ. ಕಾಣಬಹುದಾದ ಆಕಾರ, ರೂಪ-ಆತನಿಗೆ ಇದ್ದೇ ಇದೆ. ಕಾಣದವರಿಗೂ ಕಾಣಸಿಗುವಂತೆ ಮಾಡುವ ಮಾತಿನ ಚುರುಕು, ನಡಿಗೆಗಳಿವೆ. ಮಹಾಬಲಯ್ಯನವರು ಅವನೊಡನೆ ಬಹಳ ಸಲುಗೆಯಿಂದ ನೆಚ್ಚಿನಿಂದ ವರ್ತಿಸುವುದನ್ನು ಕಂಡಾಗ ಮನೆಯ ಒಳಗಿನವರಿಗೆ, ಆಶ್ಚರ್ಯ; ಹೊರಗಿನವರಿಗೂ ಆಶ್ಚರ್ಯವೇ.

ಮತ್ತೊಂದು ದಿನ ಮಹಾಬಲಯ್ಯ, ನಾಗಪ್ಪಯ್ಯ ಕೂಡಿ ತೋಟ, ಹಿತ್ತಿಲು, ಆಸ್ತಿ, ಒಕ್ಕಲು ಮನೆ ಒಂದೊಂದನ್ನು ತಿರುಗಾಡಿಕೊಂಡು ಬರುವುದು ಕಾಣಿಸಿತು. ಆ ಮೇಲೆ ನಾಗಪ್ಪಯ್ಯ ಹೇಳಿದ:

"ಇಲ್ಲಿನ ನಿಮ್ಮ ಕತೆ ಏನೇನೂ ಸ್ವಾರಸ್ಯವಿಲ್ಲ, ನಿಮ್ಮ ಈ ಜಮೀನು, ತೋಟ ಮತ್ತೊಂದು ಆರೈಕೆಯಿಲ್ಲದೆ ಹಾಳಾಗ್ತಾ ಇದೆ. ನೀವು ಅದರ ಯೋಚನೆಯಲ್ಲಿಯೆ ಇಲ್ಲ. ಇಲ್ಲವಾದರೆ ಅಂತಹ ಅಡಿಕೆ ತೋಟ ಹೀಗಿರುತ್ತಿತ್ತೆ? ಅಷ್ಟು ಒಳ್ಳೆಯ ಕೆರೆ ಹಾಳು ಬಿದ್ದು ಅಂತರಗಂಗೆ ಬೆಳೆದು ಏನಕ್ಕೇನ ಆಗುತ್ತಿತ್ತೇ? ನಡುವೆ ಯಾರೂ ಬಾಯಿ ಹಾಕದಿದ್ದರೆ ಇದನ್ನೆಲ್ಲಾ ಒಂದು ಆಕಾರಕ್ಕೆ ತರುತ್ತಿದ್ದೆ."

"ಅಂಥವರೊಬ್ಬರು ನನಗೂ ಬೇಕಿತ್ತು" ಎಂದರು ಮಹಾಬಲಯ್ಯ. ಆತ ನಿರ್ಭಿಡೆಯಿಂದ ತಮ್ಮೊಡನೆ ವರ್ತಿಸುವ ರೀತಿ ಅವರನ್ನು ಮೆಚ್ಚಿಸಿದೆ. ಅವನಲ್ಲಿ ಠಕ್ಕಿಲ್ಲ; ಅತಿ ವಿನಯವೂ ಇಲ್ಲ. ದುಡಿಮೆಯ ಉತ್ಸಾಹವಿದೆ. ಪ್ರತಿಯೊಂದು ತನ್ನದೇ ಎಂಬ ಆತ್ಮೀಯತೆ ಇದೆ.... ಎಂದುಕೊಂಡರು.

ಒಂದು ದಿವಸ ನಾಗಪ್ಪಯ್ಯ ೨೦-೩೦ ರಷ್ಟು ಗಂಡಾಳು-ಹೆಣ್ಣಾಳುಗಳನ್ನು ಕರೆಯಿಸಿ, ಕೆಸರು ಕೊಳೆಗಳಿಂದ ಮುಚ್ಚಿಕೊಂಡ ಕೆರೆಯ ಕೆಲಸಕ್ಕೆ ತೊಡಗಿಸಿದ. ನಾಲ್ಕೂ ಹಗಲು-ಅವನ ಬಿಡಾರವೇ ಅಲ್ಲಿ. ದಿನಕ್ಕೆರಡು ಬಾರಿ ಮನೆಗೆ ಬಂದು ಬೆಲ್ಲದ ಪಾತ್ರೆ ಹಿಡಿಸಿಕೊಂಡು ಬಾಯಾರಿದ ಆಳುಗಳಿಗೆ ಬೆಲ್ಲ, ನೀರು ಕೊಟ್ಟು ಕೆಲಸಕ್ಕೆ ಪ್ರೋತ್ಸಾಹಿಸಿದ. ಅಷ್ಟೊಂದು ಆಳುಗಳೆಲ್ಲ ಅವಿರತವಾಗಿ ದುಡಿದರು. ಕಳೆಯನ್ನು ಹೊತ್ತರು; ಕೆಸರನ್ನೂ ಹೊತ್ತರು. ಪ್ರತಿ ವರ್ಷವೂ ಬಳಿದು ಬಂದು ಕೆರೆಯನ್ನು ಗಟ್ಟಿಯಾಗಿ ಹಿಡಿದುಕೊಂಡ ಮಣ್ಣನ್ನು ಹಾರೆಯಿಂದ ಕೊಚ್ಚಿ ಹೊತ್ತು, ತೋಟದ ಮಗ್ಗುಲಿನ ದಂಡೆಗೆ ಹಾಕಿದರು, ಮತ್ತೆ ನಾಲ್ಕು ದಿನ ಹೀಗೇ ಸರಿಯಿತು.

ಅವನ ಉತ್ಸಾಹವನ್ನು ಹರಸುವುದಕ್ಕೆಂಬಂತೆ ಒಂದು ದಿನ ಬೆಳ್ಳನೆಯ ಭಾಗೀರಥಿಯೇ ಉಕ್ಕಿ ಬಂದಳು. ಕೆರೆಯ ನಾಲ್ಕೂ ಮೂಲೆಗಳಿಂದ ತಡೆಯಲಾರದಷ್ಟು ಒರತೆಯ ನೀರು ಹರಿಯಿತು. ಆ ಚೆಂದವನ್ನು ನೋಡಲು ಮಹಾಬಲಯ್ಯನವರು ಮನೆಯಲ್ಲಿರಲಿಲ್ಲ. ತನ್ನ ಸಾಹಸದ ಹಿಗ್ಗನ್ನು ಕಾಣುವವರಿಲ್ಲವಾಯಿತೆ ಎಂದೆನಿಸಿತು- ನಾಗಪ್ಪಯ್ಯನಿಗೆ. ಒಬ್ಬ ಆಳನ್ನು ಕರೆದು ಮನೆಗೆ ಹೋಗಿ ಹೇಳು; ಈ ನೀರು ತುಂಬುವ ಚಂದ ನೋಡಲಿ-ಎಂದು ಹೇಳಿಕಳುಹಿಸಿದ.

ಸುದ್ದಿ ತಿಳಿದೊಡನೆ ಗಂಗಕ್ಕ ಸರಸ್ವತಿಯನ್ನು ಒತ್ತಾಯದಿಂದ ಕರೆದು ಹೊರಟು ಬಂದಳು. ಬಂದು ನೋಡಿದರೆ ಏನೆನ್ನಬೇಕು? ಅರ್ಧ ಕೆರೆ ನೀರಿನಿಂದ ತುಂಬಿತ್ತು. "ಇದು ದೇವರಾಣೆ, ಭಾಗೀರಥಿಯೇ!" ಎಂದು ಉದ್ಗರಿಸಿದಳು ಗಂಗಕ್ಕ. ಸರಸ್ವತಿಗೆ ನಿಜಕ್ಕೂ ನೀರಿನ ಆ ಸೊಬಗನ್ನು ಕಂಡು ಮೈಮರವೆಯಾಗಿತ್ತು.

ನಾಗಪ್ಪಯ್ಯ ಬಳಿಗೆ ಬಂದು, "ಯಜಮಾನಿ, ಭಾಗೀರಥಿ ಬಂದಾಗ ಕಾಯಿ ಒಡೆಯ ಬೇಕಲ್ಲ?" ಎಂದ. "ಹೌದು, ಮಗ" ಎಂದಳು ಗಂಗಕ್ಕ, ನಾಗಪ್ಪಯ್ಯ ಮನೆಯಿಂದ ಹರಿವಾಣ, ಆರತಿ,

# ಧರ್ಮರಾಯನ ಸಂಸಾರ

ಹಣ್ಣುಕಾಯಿ, ಒಂದು ಕತ್ತಿ ಇಷ್ಟನ್ನೂ ತಂದಾಯಿತು. ಗಂಗಕ್ಕ ಆರತಿಯನ್ನು ಹೊತ್ತಿಸಿ ಯಜಮಾನಿಯಿಂದ ಆರತಿ ಮಾಡಿಸಿದಳು. ನಾಗಪ್ಪಯ್ಯನಿಂದ ಕಾಯಿ ಒಡೆಯಿಸಿ, ಅದರ ನೀರನ್ನು ಯಜಮಾನಿಯ ಕೈಯಿಂದ ಕೆರೆಗೆ ಸುರಿಯಿಸಿದಳು. ಏತಕ್ಕೆ ಇಷ್ಟೆಲ್ಲ ಸಂಭ್ರಮ ಅನ್ನಿಸುತ್ತಿತ್ತು ಸರಸ್ವತಿಯ ಮನಸ್ಸಿನಲ್ಲಿ.

ಗಂಗಕ್ಕ ಅದೇ ಸಂಭ್ರಮದಲ್ಲಿ "ನಿನಗೆ ಎಲ್ಲಾಯಿತು, ಮಗನೆ? ಇಲ್ಲಿಗೆ ಹೇಗೆ ಬಂದೆ?" ಎಂದು ನಾಗಪ್ಪಯ್ಯನನ್ನು ವಿಚಾರಿಸಿದಳು. ನಾಗಪ್ಪಯ್ಯ ತನ್ನ ಹಳ್ಳಿ ಕಾಸ್ರಳ್ಳಿಯೆಂದು ಹೇಳಿ, ತನಗೆ ಯಾರೂ ಇಲ್ಲವೆಂದು ತಿಳಿಸಿದ. "ಹೀಗೇ ತಿರುಗಾಡಿಕೊಂಡು ಅಂಬುತೀರ್ಥದಲ್ಲಿ ಒಂದು ಮದುವೆಗೆ ಬಂದವನು ಈ ಸಾಹುಕಾರರ ಕಣ್ಣಿಗೆ ಬಿದ್ದು, ಅವರು ಇಲ್ಲಿಗೆ ಕರೆದುಕೊಂಡು ಬಂದರು. ಇಷ್ಟರ ತನಕವೂ ಊರೂರು ಸುತ್ತುತ್ತಾ ಇದ್ದೆ. ಇನ್ನೆಷ್ಟೆಲ್ಲ ಊರುಗಳನ್ನು ಕಾಣಬೇಕೋ" ಎಂದು ನಗುತ್ತಾ ನುಡಿದ.

"ನೀನು ಚಂದವಾಗಿ, ನನ್ನ ಈ ಸರಸಕ್ಕನ ಮನೆಯಲ್ಲಿ ಇರಬಾರದೇ?" ಎಂದಳು ಗಂಗೆ. ಸರಸ್ವತಿಯನ್ನು ಆತ ಜುಳಜುಳನೆ ನೋಡಿದ. ಅವಳಿಗೆ ತನ್ನದೇ ವಯಸ್ಸು. ಲಕ್ಷಣವಂತ ಮುಖ. ನಗು ಸೂಸದೆ ಹೋದರೂ, ಆಕೆ ಮನೆಯ ಯಜಮಾನಿಯೆಂಬ ಅರಿವು ಅವನಲ್ಲಿ ಈ ಮೊದಲೇ ಮೂಡಿತ್ತು. ಅಲ್ಲಿದ್ದ ಆ ಸ್ವಲ್ಪ ದಿನಗಳಲ್ಲಿ-ಆತ ಅವಳನ್ನು ಅಷ್ಟೊಂದು ಚೆನ್ನಾಗಿ ಕಂಡಿರಲೂ ಇಲ್ಲ. ಅವನ ಕಿವಿಗೂ-ಯಜಮಾನರ ದಾಂಪತ್ಯ ಜೀವನದ ಚೂರು, ತುಣುಕು ಸುದ್ದಿಗಳು ತಲುಪಿದ್ದವು. ಈಗ ತುಸು ಕುತೂಹಲವಾಗಿ "ನಿಮ್ಮ ಯಜಮಾನಿ ಇಲ್ಲಿಗೆ ಯಾವ ಊರಿನಿಂದ ಬಂದದ್ದು?" ಎಂದು ವಿಚಾರಿಸಿದ. ಆಗ ಗಂಗಕ್ಕ ನಗುತ್ತ "ಆ ರಾಮಾಯಣವನ್ನು ಕೇಳಿ ಏನು ಮಾಡುತ್ತೀ? ಬಾರಕೂರು ಇವರ ಅಪ್ಪನ ಮನೆ. ನಾರಣಪ್ಪ ಹೆಬ್ಬಾರರು ಇವರ ಅಪ್ಪ. ಆ ಅಪ್ಪ ಇಲ್ಲ ಈಗ, ಅಮ್ಮ ಒಬ್ಬಳು ಇದ್ದಾಳೆ. ಯಾವುದೋ ವಿಧಿ ಇವಳನ್ನು ಇಲ್ಲಿಗೆ ತಂದು ಕೆಡೆಯಿತು-ಲಂಕಾಪುರಕ್ಕೆ ಸೀತಮ್ಮನವರನ್ನು ತಂದು ಕೆಡೆದ ಹಾಗೆ" ಎಂದಂದಳು.

ಆಗ ಸರಸ್ವತಿ ನಡುವೆ ಬಾಯಿ ಹಾಕುತ್ತ "ಗಂಗಕ್ಕ, ಅದೆಲ್ಲಾ ಯಾಕೆ ಯಾರ ಯಾರ ಮುಂದೆ" ಎಂದಳು. ಅವರಿಬ್ಬರೂ ಹರಿವಾಣ, ಕಾಯಿ ಎತ್ತಿಕೊಂಡು ಅಲ್ಲಿಂದ ಹೊರಟೇ ಹೋದರು. ನಾಗಪ್ಪಯ್ಯನ ಮನಸ್ಸಿಗೆ- ಹಿಡಿದ ಯಾವುದೋ ಒಂದು ಚಳಿಜ್ವರ ಬಿಟ್ಟಂತಾಗಿ ಅವನ ಮೈ ಬೆವೆತಿತು. ತನ್ನನ್ನೂ ತನ್ನ ಅಮ್ಮನನ್ನೂ ಗತಿಗೆಡಿಸಿ ದಿಕ್ಕಾಪಾಲು ಮಾಡಿದ ಆ ಹೆಬ್ಬಾರರ ಮಗಳೇ ಇವಳು? ಆ ಒಂದು ಕ್ಷಣ ನಾಗಪ್ಪಯ್ಯ ಆ ತನಕವೂ ತನ್ನಲ್ಲಿ ತುಂಬಿಕೊಂಡಿದ್ದ ಉತ್ಸಾಹ, ಹಿಗ್ಗುಗಳನ್ನು ಮರೆತುಬಿಟ್ಟ. ಸತ್ತುಹೋದ ಹೆಬ್ಬಾರರ ಮೇಲೆ ಸೇಡು ತೀರಿಸಿಕೊಳ್ಳಲಾಗದಿದ್ದರೂ, ಆ ಮನೆತನದ ಈ ಬೇರನ್ನು ಚಿವುಟಿ ಕಿತ್ತು ಬಿಡಬಹುದಲ್ಲ!

ಆತ ದಿನವೆಲ್ಲ ಬಿಸಿಲನ್ನು ಎಣಿಸದೆ, ದೈಹಿಕ ಶ್ರಮ ಎಣಿಸದೆ ಕೆರೆಯ ದಂಡೆಯಲ್ಲಿ ಕುಳಿತು, ನಿಂತು ಸಮಯ ಕಳೆದಿದ್ದ, ಮೈಯೆಲ್ಲ ಬೆವೆತಿತ್ತು. ಮನೆಯ ಬಚ್ಚಲು ಮನೆಯನ್ನು ಸೇರಿದ. ಅಲ್ಲಿ ಒಂದೇ ಸವನೆ ಕವುಳಿಗೆಯಿಂದ ನೀರನ್ನು ತಲೆಯ ಮೇಲೆ ಎರೆದುಕೊಳ್ಳುವಾಗಲೆಲ್ಲ ಅವನಿಗೆ ಯಜಮಾನಿಯ ಮುಖ ಕಾಣಿಸತೊಡಗಿತು. ಯೌವನದ ಮುಖ ಹೌದು; ಆದರೆ ಸುಖ-ದುಃಖ, ಅಳು-ನಗು, ಯಾವುದೂ ಇರದ ಹೆಣಮುಖ ಅನಿಸಿತು. ಹೆಬ್ಬಾರರ ಈ ದುರ್ಬೀಜದ ಮೇಲೆ ಸೇಡು ತೀರಿಸಿಕೊಳ್ಳುವ ಕೆಲಸ ಏನು ಮಹಾ...!

ಊರಿಗೆ ಮರಳಿದ ಮಹಾಬಲಯ್ಯನವರು ತುಂಬಿದ ಕೆರೆಯನ್ನು ಕಂಡರು. "ನಾಗಪ್ಪಯ್ಯ, ತೋಟ ಬೇಸಾಯ ಇದೊಂದಕ್ಕೂ ನಾನು ಕೈ

# ಪುಸ್ತಕ ವಿಭಾಗ

ಹಾಕುವುದಿಲ್ಲ. ಮನೆಯ ಯಜಮಾನ ಎಂದು ತಿಳಿದೇ ಎಲ್ಲವನ್ನು ನಡೆಸು. ಒಂದು ಮೂರು ವರ್ಷ ನೀನು ಇದನ್ನೆಲ್ಲಾ ಒಂದು ರೂಪಕ್ಕೆ ತಂದುಕೊಟ್ಟರೆ, ನಿನಗೆ ಲಗ್ನ ಮಾಡಿಸಿ, ನೀನು ಆಯುವ ಜಾಗವನ್ನು ಮೂಲ ಗೇಣಿಗೆ ಕೊಟ್ಟು ಬಿಡುವೆ" ಎಂದು ಹೇಳಿದರು.

ವರ್ಷ ಸಂದಿದೆ. ಇನ್ನು ಒಂದೇ ಒಂದು ವಾರಕ್ಕೆ ಮುಂದಣ ಯುಗಾದಿ. ಮನೆಯ ಯಜಮಾನರು ಯಥಾ ಪ್ರಕಾರ ಗಾಡಿ ಕಟ್ಟಿಸಿಕೊಂಡು ಜವುಳಿ ತರುವ ನೆಪದಿಂದ ಕುಂದಾಪುರಕ್ಕೆ ಹೋದರು. ಆಗಣ ಒಂದು ಮುಸ್ಸಂಜೆ, ಸರಸ್ವತಿಗೆ ಮನೆಯಲ್ಲಿ ಕುಳಿತು ಬೇಜಾರಾಗಿ ಕೆರೆಯ ಕಡೆಗೆ ಹೋದಳು. ಬಿಸಿಲಿನ ಪ್ರಖರತೆಯು ಪೂರ್ಣ ಕಡಿಮೆಯಾಗಿರಲಿಲ್ಲ. ಈ ಹಿತವಾದ ನೀರಲ್ಲಿ ಹಾಯೆಂದು ಕುಳಿತರೆ ಆಗದೇ-ಎನಿಸಿತು. ಆಚೀಚೆ ಕಣ್ಣು ಹಾಯಿಸಿದಳು. ಯಾರೂ ಕಾಣಲಿಲ್ಲ. ಕುಪ್ಪಸವನ್ನು ಕಳಚಿ ಕೆರೆಯನ್ನಿಳಿದಳು. ಅಲ್ಲಿದ್ದ ಹಾಸುಗಲ್ಲಿನ ಮೇಲೆ ಕುಳಿತು, ಕೈಗಳಿಂದ ಆಚೀಚಿನ ನೀರನ್ನು ಬಗೆದಳು. ಥಟ್ಟನೆ ಆಚೆಯ ದಡದಲ್ಲಿಯ ನೀರಿನ ಆಳದ ನೆನಪು ಬಂದಿತು. 'ಅಲ್ಲಿಂದ ನೀರಿಗೆ ಹಾರಿದರೆ ಆಗದೆ? ಎಷ್ಟು ದಿವಸ ಎಂದು ಹೀಗೆಯೇ ಬದುಕಿರುವುದು? ನನ್ನ ಹೊಟ್ಟೆಯಲ್ಲಿ ಒಂದು ಹುಳುವಾದರೂ ಹುಟ್ಟಿದ್ದರೆ.... ಅಯ್ಯಪ್ಪ ಬೇಡ! ನಾನು ಅವರ ದುರ್ಬೀಜವನ್ನು ಹೊತ್ತು ಈ ಲೋಕಕ್ಕೆ ಇನ್ನೊಂದು ದುರ್ಬೀಜ ತರುವುದೆ?'

'ಅಲ್ಲಾ, ಇವರಿಗೆ ಯಾವ ಕಾಲಕ್ಕೂ ಹೆದರುವವಳಲ್ಲ- ಅಂದುಕೊಂಡವಳು ನಾನು. ಅಂಥ ನಾನು ಕೆರೆ ಹಾರಿ ಜೀವ ತೆಗೆದುಕೊಳ್ಳುವುದ? ಜನ ನನಗೆ ನಾಗಿಯ ಹಾಗೆಯೇ ನಾಚಿ ನೀರನ್ನು ಸೇರಿ ಸತ್ತಳು- ಎಂದಾರು....'

ಏನು ಹಾಳು ಯೋಚನೆಯೊ ಎಂದುಕೊಂಡು, ಕತ್ತಿನ ತನಕವೂ ನೀರಿನಲ್ಲಿ ಮುಳುಗಿದಳು. ಮೈಯನ್ನುಜ್ಜಿಕೊಂಡು ಅದೇ ಕಲ್ಲಿನ ಮೇಲೆ ಕೆರೆಗೆ ಅಭಿಮುಖವಾಗಿ ಕುಳಿತು ಕಣ್ಣು ಮುಚ್ಚಿ ಇನ್ನೇನನ್ನೋ ಯೋಚಿಸುತ್ತಿದ್ದಳು.

ಪಡುವಣ ಬಾನಿನಿಂದ ಸೂರ್ಯ ಮುಳುಗುವ ತಯಾರಿಯಲ್ಲಿದ್ದ ಬಾನಂಗಣವನ್ನು ಹೊಂಬಣ್ಣಕ್ಕೇರಿಸಿ, ಆ ಬಣ್ಣದಲ್ಲಿಯೇ ತಾನು ಮರೆಯಾಗಿ, ಪಾತಾಳಕ್ಕೆ ಹೋಗಿ, ಅಡಗಿ, ಇನ್ನೊಂದು ರಾತ್ರಿ ತಲೆತಪ್ಪಿಸಿಕೊಳ್ಳುವುದರಲ್ಲಿದ್ದ. ಅದೇ ಬಾನಿನ ಹೊಂಬಣ್ಣ-ಕೆರೆಯ ನೀರನ್ನೆಲ್ಲ ಅರಸಿನ ಕುಂಕುಮದ ಓಕುಳಿ ಬಣ್ಣಕ್ಕೆ ತಿರುಗಿಸಿತು. ನಡುವಿಗೆ ಕಿರಿ ಸೀರೆಯ ತುಣುಕನ್ನುಟ್ಟು, ಸೆರಗನ್ನು ತೊಡೆಯ ಮೇಲೆ ಚೆಲ್ಲಿ, ಧ್ಯಾನ ನಿರತಳಾದಂತೆ, ಮೈಮರೆತು ಕಲ್ಲಿನ ಮೇಲೆ ಕುಳಿತಿದ್ದ ಸರಸ್ವತಿಯ ದೇಹದ ಪ್ರತಿಮೆಯನ್ನು ಹೊಂಬಣ್ಣದ ಪುತ್ಥಳಿಯನ್ನಾಗಿ ಮಾಡಿಸಿತು. ಅದೇ ಪುತ್ಥಳಿ ಬೊಂಬೆಯನ್ನು, ತುಸುವೇ ದೂರದ ಅಡಿಕೆಮರಗಳ ಎಡೆಯಿಂದ ಅದೇ ದಾರಿಯಾಗಿ ಸರಿದು ಬಂದ ನಾಗಪ್ಪಯ್ಯ ನೋಡುತ್ತಲೇ ಬೆಪ್ಪುಗಟ್ಟಿ ಒಂದು ಕ್ಷಣ ನಿಂತು ಬಿಟ್ಟ. ಯಾರೆಂಬುದು ಗೊತ್ತಾಗಲಿಲ್ಲ. ಆಗ ತುಸು ಆಚೆ ಸರಿದು ನೋಡಿದಾಗ, ಆ ಗೊಂಬೆಯ ಮಗ್ಗುಲು ದರ್ಶನ ಅದು ಇಂಥವಳೆಂಬ ಅರಿವನ್ನು ತಂದುಕೊಟ್ಟಿತು. ಮರುಕ್ಷಣಕ್ಕೆ ಸೇಡಿನ ಕಿಡಿಯೊಂದು ಭುಗ್ಗೆಂದು ಆವನ ಅಂತರಂಗದಲ್ಲಿ ಜ್ವಾಲೆಯನ್ನು ಎಬ್ಬಿಸಿತು. 'ಇವಳ ಅಪ್ಪ ನನ್ನನ್ನೂ ನನ್ನ ಅಪ್ಪನನ್ನೂ ಮುಳುಗಿಸಿದರಲ್ಲವೇ? ನಾನು ಈ ಕ್ಷಣವೇ ಹೋಗಿ-ಅವಳ ಬಾಯಿಯನ್ನು ಒತ್ತಿ ಹಿಡಿದು, ಆ ಕೆರೆಯೊಳಕ್ಕೆ ನೂಕಿ, ಮೆಟ್ಟಿನಿಂತರೆ ಏನಾಗುತ್ತದೆ? ಹೆಬ್ಬಾರರು ನನ್ನಿಂದ ತಪ್ಪಿಸಿಕೊಂಡರೂ ಆವರ ಬೀಜವನ್ನು ಪಾತಾಳಕ್ಕೆ ಅಟ್ಟಿದ ಪುಣ್ಯ ನನಗೆ ಬಂದೀತು' ಎನಿಸಿತು. ಉಳಿದೆಲ್ಲ ವಿವೇಕವೂ ಮರೆತು ದುಷ್ಟ ದ್ವೇಷ ಕುದಿಯುತ್ತ ಹೋದಂತೆ ಆತ ನಾಲ್ಕು ಹೆಜ್ಜೆ ಸದ್ದಿಲ್ಲದೆಯೇ ಕಾಲನ್ನಿರಿಸುತ್ತ, ಅವಳನ್ನು ಸಮೀಪಿಸಿದ. ದಂತ

# ಧರ್ಮರಾಯನ ಸಂಸಾರ

ಕಾಂತಿಯ ಅವಳ ಶರೀರ ಇನ್ನೂ ಸಂಜೆಯ ಬೆಳಕಿಗೆ ಹೊನ್ನಿನ ಮೂರ್ತಿಯಂತೆಯೇ ಕಾಣಿಸು ತ್ತಿತ್ತು. ಅದನ್ನೇ ಬದಿಯಿಂದ ನಿಟ್ಟಿಸಿನೋಡಿದ.

ಕಲ್ಲಿನ ಮೇಲೆ ಕುಳಿತ ಸರಸ್ವತಿಗೆ ನೀರಿನ ಹೊಂಬಣ್ಣ ಫಕ್ಕನೆ ಮಾಯವಾದುದನ್ನು ಕಂಡಾಗ 'ಇನ್ನು ಹೊರಡುವ' ಎನಿಸಿತು. ಕತ್ತನ್ನು ಈಚೆ ಹೊರಳಿಸಿದಳು: ತನ್ನ ಬೆನ್ನ ಹಿಂದೆಯೇ ಎರಡು ಮಾರು ದೂರದಲ್ಲಿ ನಿಂತಿದ್ದ ನಾಗಪ್ಪಯ್ಯನನ್ನ ನೋಡಿ ಗಾಬರಿಯಾಗಿ 'ಅಯ್ಯೋ' ಎಂದು ಉದ್ಗ ರಿಸಿದಳು. ಮರುಕ್ಷಣ ಅವಳ ದನಿ ಬಿರುಸಾಯಿತು. ಇನ್ನೊಮ್ಮೆ ಕತ್ತನ್ನು ತಿರುಗಿಸಿ "ಇಲ್ಲಿಗೆ ಯಾತಕ್ಕೆ ಬಂದೆ?" ಎಂದು ಪ್ರಶ್ನಿಸಿದಳು.

ಆ ಗಳಿಗೆಯಲ್ಲಿ ನಾಗಪ್ಪಯ್ಯ "ನಾನು ಉದ್ದೇ ಶಪಟ್ಟು ಇಲ್ಲಿಗೆ ಬಂದದ್ದಲ್ಲ. ತೋಟವನ್ನು ನೋಡುತ್ತ ಬಂದೆ. ಬಂದಾಗ ಯಾರೋ ಕೆರೆ ಯಲ್ಲಿ ಕುಳಿತದ್ದು ಕಾಣಿಸಿತು. ಯಾರು ಎಂದು ಮಗ್ಗುಲಿಗೆ ಸರಿದು ನೋಡಿದೆ. ನೋಡಿದ ಮೇಲೆ ನೀವು ಎಂಬುದು ತಿಳಿಯಿತು. ಅದು ಹೊಳೆಯು ತ್ತಲೇ ನಿಮ್ಮ ಬಾಯಿಯನ್ನು ಒತ್ತಿ ಹಿಡಿದು ಹೆಚ್ಚು ನೀರಿರುವಲ್ಲಿಗೆ, ಎತ್ತಿಕೊಂಡು ಹೋಗಿ ಮುಳುಗಿಸಿ, ಮೆಟ್ಟಿನಿಂತು, ನನ್ನ ಸೇಡನ್ನು ತೀರಿಸಿಕೊಳ್ಳಬೇಕು ಅನಿಸಿತು: ಬಂದೆ. ಬಾರಕೂರ ಹೆಬ್ಬಾರರ ಮಗ ಳಲ್ಲವೆ ನೀವು?"

ಆಕೆಗೆ ಅವನ ಮಾತಿನ ಅರ್ಥ ಏನೇನೂ ಹೊಳೆಯದೆ ಹೋಯಿತು; ವಿಹ್ವಲಳಾಗಿ "ನಾಗ ಪ್ಪಯ್ಯ, ಅದಲ್ಲವೇ ನಿನ್ನ ಹೆಸರು? ನನ್ನನ್ನು ಕೊಲ್ಲುವುದಕ್ಕೇ ನೀನು ಬಂದದ್ದು ಅನ್ನುತ್ತೀಯಾ? ಹಾಗಿದ್ದರೆ ಪುಣ್ಯಾತ್ಮ ಅಷ್ಟು ಮಾಡಿ ಮುಗಿಸು. ಅದನ್ನು ಇನ್ನೊಬ್ಬರು ಮಾಡುವುದಿದ್ದರೆ ನನಗೆ ಏನೇನೂ ಬೇಸರವಿಲ್ಲ. ಆದರೂ ಒಂದು ಸಂಗತಿ ತಿಳಿದುಕೋ. ನಾನು ಸತ್ತು ವರ್ಷ ಹತ್ತಿಪ್ಪತ್ತಾ ಯಿತು. ಒಮ್ಮೆ ಸತ್ತವಳಿಗೆ ತಿರುಗಿ ಸಾವಿಲ್ಲ."

ಆ ಮಾತಿಗೆ ನಾಗಪ್ಪಯ್ಯನ ಮನಸ್ಸು ದಿಗಿಲು ಗೊಂಡು 'ಇದೇನೆನ್ನುತ್ತಾಳೆ ಇವಳು?' ಎಂದು ಬುದ್ಧಿ ತೋಚದೆ, ನಾಚಿಕೆ ಬಂದು "ಯಜಮಾನಿ, ಈಗ ನಾನು ನಾನಾಗಿಲ್ಲ. ನೀವು ಏನು ಅನ್ನುತ್ತೀ ರೆಂದು ನನಗೂ ತಿಳಿಯುವುದಿಲ್ಲ" ಎಂದ.

"ಅದು ನನಗೂ ತಿಳಿಯುವುದಿಲ್ಲ. ಆದರೆ, ನಿನಗೆ ನನ್ನ ಅಪ್ಪನ ಮೇಲೆ ಯಾಕೆ ದ್ವೇಷ ಹೇಳು. ನನಗೂ ನನ್ನ ಅಪ್ಪನ ಮೇಲೆ, ದುಡ್ಡಿನ ಮುಖ ನೋಡಿ ಈ ರಾಕ್ಷಸನಿಗೆ ನನ್ನನ್ನು ಕೊಟ್ಟರಲ್ಲ-ಎಂಬ ದ್ವೇಷವಿದೆ. ನನ್ನಪ್ಪ ನಿನಗೇನು ಮಾಡಿದರು? ಅವರ ಬದಲಿಗೆ ನಾನು ಸಿಕ್ಕಿದೆ ಎಂದು ನನ್ನನ್ನು ಮುಗಿಸುವುದಾದರೆ ಅದೊಂದು ಪುಣ್ಯದ ಕೆಲಸವೆ ಆದೀತು. ಅದಕ್ಕೆ ಮೊದಲು ನನ್ನ ಅಪ್ಪ ನನಗೆ ಮಾಡಿದ ಅನ್ಯಾಯ ಯಾವುದೆಂದು ನಾನು ಹೇಳಿದ ಹಾಗೆ, ನಿನ್ನದೂ ಒಂದು ಕತೆ ಇದ್ದರೆ ಹೇಳು."

ನಾಗಪ್ಪಯ್ಯ ತನ್ನ ಎದೆಯ ಸಂಕಟವನ್ನು ಗದ್ಗದಿತ ಕಂಠದಿಂದ ತೋಡಿಕೊಳ್ಳತೊಡಗಿದ. ತಾನು ಕೊಕ್ಕರಣೆ ರಾಮಪ್ಪಯ್ಯನ ಮನೆಯಲ್ಲಿ ಹುಟ್ಟಿದ್ದು. ಅವರ ಭೂಮಿ-ಕಾಣಿ ಸರಸ್ವತಿಯ ಅಪ್ಪ ಹೆಬ್ಬಾರರಿಗೆ ಅಡವಾಗಿ ಹೋದದ್ದು, ಅವನ್ನು ಬರೆಯಿಸಿಕೊಂಡು ಕೆಲ ವರ್ಷಗಳಾದ ಮೇಲೆ, ಆ ಜಾಗದಿಂದ ಇವಳ ತಂದೆ ಹೊರದೂಡಿದ್ದು, ಮುಂದೆ ತನ್ನ ತಾಯಿ, ತಾನು ಅನಾಥರಾಗಿ ಒದ್ದಾಡಿದ್ದು ಇವೆಲ್ಲವನ್ನು ಅವಳ ಮುಂದೆ ತೋಡಿ ಕೊಂಡ.

ಆಕೆ ಸಾವಧಾನದಿಂದ ಅವನ ಮುಖವನ್ನು ನೋಡುತ್ತ ಕೇಳಿದಳು. ತನ್ನ ಸಮವಯಸ್ಸಿನವನಿರ ಬಹುದಾದ ಆ ಬಡಪಾಯಿ ತರುಣನ ಮಾತುಗ ಳನ್ನು ಕೇಳುತ್ತ ಅನುಕಂಪ ಸೂಸಿತು! ಅವನದೂ ಇನ್ನೊಂದು ರೀತಿಯಲ್ಲಿ ದಿಕ್ಕುಗೆಟ್ಟ ಬಾಳು -ಎಂಬುದೂ ಹೊಳೆಯಿತು. ತನಗೆ ಹಾಗಾಗಿ ದ್ದರೂ ಅದೇ ತೆರನ ಭಾವನೆ ಉಕ್ಕಿ ಬಂದು ಒಂದು ಕ್ಷಣ ವಿವೇಕವನ್ನು ಕುರುಡಾಗಿಸಿದರೆ

# ಪುಸ್ತಕ ವಿಭಾಗ

ಆಶ್ಚರ್ಯವಿಲ್ಲವಲ್ಲ ಅನಿಸಿತು. ಆದುದರಿಂದ ಆಕೆ-

"ನೀನು ಹೇಳುವುದರ ನಿಜ ನನಗೆ ತಿಳಿಯದಿದ್ದದ್ದು. ನನ್ನ ಅಪ್ಪ ಇಷ್ಟೆಲ್ಲಾ ಮಾಡಿದುದರಿಂದ ನಿನಗೆ ಹೀಗೆಲ್ಲಾ ಅನಿಸುವುದು ಸಹಜ. ಆ ಅಪ್ಪನ ಈ ಒಂದು ಬೇರನ್ನು ಮುಗಿಸಿಬಿಡುವ- ಎಂದು ಕಾಣಿಸಿತು ಅಲ್ಲವೇ? ನಾನೂ ನನ್ನ ಹೊಟ್ಟೆಯಲ್ಲಿ ಅಂತಹುದೇ ಸೇಡನ್ನು ಹೊತ್ತು ತಿರುಗುತ್ತಿರುವವಳು. ಮುಗಿಸಿಬಿಡು ನಿನ್ನ ಆ ಆಸೆಯನ್ನು. ಏನು ಬೇಕಾದರೂ ಮಾಡು ಒಂದು ಚಕಾರ ಎತ್ತುವುದಿಲ್ಲ" ಎಂದಳು.

ಆ ಮಾತು ಕಿವಿಗೆ ಬೀಳುತ್ತಲೇ, ನಾಗಪ್ಪಯ್ಯನಿಗೆ ಜ್ಞಾನೋದಯವಾದುದರಿಂದಲೋ ಏನೋ, ತನ್ನ ಪರಮ ಅವಿವೇಕವನ್ನು ನೆನೆದು, ಥಟ್ಟನೆ ಅವಳ ಕಾಲಿಗೆರಗಿ "ಯಜಮಾನಿ, ನಿಮ್ಮ ಮುಖ ಕಾಣುವುದಕ್ಕೂ ನಾನು ಯೋಗ್ಯನಲ್ಲ" ಎಂದಂದ. ಆಕೆಯು ಬಿರಬಿರನೆ ಅವನನ್ನೇ ನೋಡಿದಳು. ಅವನನ್ನು ಕೈ ಹಿಡಿದೆತ್ತಿ ಇದಿರಿಗೆ ನಿಲ್ಲಿಸಿಕೊಂಡಳು. ಹುಚ್ಚು ಹಿಡಿದವಳಂತೆ ಅವನನ್ನು ತಬ್ಬಿಕೊಂಡು, "ನಾಗಪ್ಪಯ್ಯ, ಇನ್ಮುಂದೆ ಕೇಳು-ನನಗೆ ನೀನು ರಕ್ಷೆ, ನಿನಗೆ ನಾನು ರಕ್ಷೆ." ಇಬ್ಬರೂ ಭಾವೋನ್ಮಾದದಿಂದ ತಂತಮ್ಮ ಪಾಡನ್ನು ನೆನೆದು ನಿಂತ ಆ ಗಳಿಗೆ ತೀರ ವಿಚಿತ್ರ ಸನ್ನಿವೇಶ! ಇಬ್ಬರ ಬಾಯಿಗಳೂ ತೊದಲುವ ಸ್ಥಿತಿಯಲ್ಲಿಲ್ಲ. ಇಬ್ಬರಿಗೂ ಹೊರಗೊಂದು ಜಗತ್ತು ಇದೆ ಎಂದು ಕಾಣಿಸಲಿಲ್ಲ. ಅವನನ್ನು ತಬ್ಬಿ ಹಿಡಿದ ಸರಸ್ವತಿಗೆ ತಾನು ಹಾಗೇಕೆ ಮಾಡಿದೆ ಎಂಬೂ ಹೊಳೆಯಲಿಲ್ಲ. ಆತ ಅವಳ ತೊಯ್ದ ಕಪೋಲಗಳನ್ನು ಸವರಿದ ರೀತಿ, ಆಕೆ ತನ್ನ ಹತಭಾಗ್ಯ ರುಂಡವನ್ನು ಅವನ ಹೆಗಲ ಮೇಲೆ ಇರಿಸಿದ ರೀತಿ, ತಮ್ಮ ಮುಂದಿನ ಪಯಣ ಒಂದೇ ದೋಣಿಯಲ್ಲಿ ಸಾಗಿದರಾಗದೇ ಎಂಬ ಹಂಬಲವನ್ನು ಅವರಲ್ಲಿ ಮೂಡಿಸಿತು. ಮತ್ತೊಂದು ಯುಗಾದಿಯ ಹಬ್ಬ ಉದಯಿಸುವ ಮೊದಲೇ ಅವರು ಇನ್ನೂ ಒಂದೆರಡು ಬಾರಿ, ಪರಸ್ಪರ ಭೇಟಿಯಾಗಿ ತಮ್ಮ ಬಾಳಿನ ಅಂತರಂಗದ ದಳ್ಳುರಿಯನ್ನು ತೋಡಿಕೊಂಡರು. ಬಾಡಿ ಬಸವಳಿದ ತನ್ನ ಬದುಕು ಆ ತರುಣನ ಸಂಪರ್ಕದಿಂದ ಕುಡಿಯೊಡೆದೀತು ಎಂಬ ಹಂಬಲ ಅವಳ ಅಂತರಂಗದಲ್ಲಿ ಉದಯಿಸಿತು. ಅಷ್ಟೊಂದು ದೀರ್ಘಕಾಲ ದಮನಿಸಿ ನಿಂತ ಕಾಮವೋ ಪ್ರೇಮವೋ ಅವಳನ್ನು ಚೇತರಗೊಳಿಸಿ ತೃಪ್ತಿ ಪಡೆಯುವುದಕ್ಕೂ ಕಲಿಯಿತು. ಮತ್ತೊಂದು ಯುಗಾದಿ ಮುಗಿದು ತಿಂಗಳ ಕಾಲ ಸರಿದ ಬಳಿಕ, ಸರಸ್ವತಿಗೆ ತನ್ನ ದೇಹ ಪ್ರಕೃತಿ ಎಂದಿನಂತೆ ಇರದಿದ್ದುದು ಅನುಭವಕ್ಕೆ ಬಂದಿತು. ಮುಟ್ಟಿನ ದಿನ ಕಳೆಯಿತು; 'ಆಗಲಿಲ್ಲ ಏಕೆ?' ಎಂದಂದುಕೊಂಡಳು. ಮನಸ್ಸು ಏನೇನೋ ಹೇಳತೊಡಗಿತು. ಅದನ್ನು ನೆನೆಯುತ್ತ ಭಯದ ಬದಲು ಸಂತಸವೂ ಆಯಿತು! 'ಆದದ್ದೆಲ್ಲ ಒಳ್ಳೆಯದಕ್ಕೇ. ನಾನೆಂದು ಸುಖ ಕಾಣಬೇಕು?' ಅನಿಸಿತು. ಮತ್ತೂ ಮುಂದಿನ ಎಣಿಕೆ ಬಂದಾಗ 'ಅವರಿಗೆ ತಿಳಿದರೋ' ಅನಿಸಿತು. 'ತಿಳಿಯಲಿ! ಅವರು ನನ್ನ ಮೇಲೆ ತೀರಿಸಿದ ಸೇಡಿಗೆ ಪ್ರತಿ! ಏನು ಮಾಡುತ್ತಾರೋ ನೋಡುವ. ಅವರಿಗೆ ಅದನ್ನು ಎದೆತಟ್ಟಿ ಹೇಳಿ, ನಂಜಿನ ನಗೆಯನ್ನು ನಕ್ಕು ಇದರಿಂದಾದರೂ ನಿಮಗೆ ಸಂತೋಷವಾಗಲಿ ಎಂದು ಹೇಳಿ ಹೋಗುತ್ತೇನೆ. ನಾಗಪ್ಪಯ್ಯ ಇರುವ ತನಕ, ನನ್ನನ್ನು ತಿರುಗಿ ಕೆಣಕುವ ಧೈರ್ಯ ಅವರಿಗೆ ಬರಲಾರದು' ಎಂದೂ ತೋಚಿತು. ಈ ಆಂತರಿಕ ತೃಪ್ತಿಯನ್ನು ಕುರಿತು ಆಕೆ ತನ್ನ ಹೊಸ ಗೆಳೆಯನಿಗೂ ಹೇಳಲಿಲ್ಲ. ಮುಂದೊಂದು ತಿಂಗಳಲ್ಲಿ ಯಾರ್‍ಯಾರೂ ಎಣಿಸದ ಮತ್ತೊಂದು ವಿಚಿತ್ರ ಪ್ರಸಂಗ ಆ ಮನೆಯಲ್ಲಿ ನಡೆಯಿತು. ಅದರ ಬಗ್ಗೆ ಮಾತ್ರ ಆ ಪ್ರಣಯಿಗಳು ಯಾವ ಹೆಮ್ಮೆಯನ್ನೂ ತಾಳಬೇಕಾಗಿಯೂ ಇರಲಿಲ್ಲ....

ಆ ಸಲ ಮಳೆಗಾಲ ಬೇಸಗೆಯ ಕೊನೆಯಂಚಿನಲ್ಲಿಯೇ ಭರದಿಂದ ಕಾಣಿಸಿಕೊಂಡಿತು. ಹುಚ್ಚು

# ಧರ್ಮರಾಯನ ಸಂಸಾರ

ಮಳೆ ಸುರಿಯತೊಡಗಿತು. ಊರಿನ ಹಳ್ಳಗಳು ಕಾಲಕ್ಕಿಂತ ಮುಂಚೆಯೇ ತುಂಬಿ ಹರಿಯುವ ಸ್ಥಿತಿ. ಮಹಾಬಲಯ್ಯ ಎಣಿಸದಿದ್ದ ತೆರದಲ್ಲಿ ತಮ್ಮ ವಾಡಿಕೆಯ ಸಂಚಾರಗಳನ್ನು ನಿಲ್ಲಿಸಿ, ಮನೆಯ ಗಾಡಿಯನ್ನು ಮಾಳದಲ್ಲಿ ಇರಿಸಿ ಊರು ಮನೆಯಲ್ಲಿಯೇ ಕುಳಿತಿರಬೇಕಾದ ಪ್ರಸಂಗ ಬಂದಿತು. ಇದು ಒಂದು ರೀತಿಯಲ್ಲಿ ಅವರಿಗೆ ಬಂದೊದಗಿದ ಚಾತುರ್ಮಾಸ.

ಚಾತುರ್ಮಾಸವಾದರೆ ಏನು? ಆ ಅವಧಿಯಲ್ಲಿ ಹುಲಿ ಮೇವಿಲ್ಲದೆ ಉಪವಾಸವಿರುತ್ತದೆಯೆ? ಆ ಸಂಚಾರ ಬಂಧನ ಅವರ ವಿಲಾಸಿ ಜೀವನಕ್ಕೆ ಆತಂಕ ತರಲಿಲ್ಲ. ಅವರ ಅದೃಷ್ಟಕ್ಕೆ ಸರಿಯಾಗಿ ಅದೇ ವರ್ಷ, ಪಡುವಣ ಕರಾವಳಿಯಿಂದ ಒಬ್ಬ ಹೊಸಬ ತಾರುಣ್ಯ ತುಂಬಿದ ತನ್ನ ಮಡದಿಯನ್ನು ಕರೆದುಕೊಂಡು ಅರಬಳ್ಳಿಗೆ ಒಕ್ಕಲು ಬಂದಿದ್ದ. ಆತನ ರಟ್ಟೆ ಎದೆಕಟ್ಟು, ದೃಢಕಾಯಗಳನ್ನು ಕಂಡ ನಾಗಪ್ಪಯ್ಯನು "ಇವರು ಚೆನ್ನಾಗಿ ದುಡಿದಾರು" ಎಂದು ಶಿಫಾರಸು ಮಾಡಿದ್ದ. ಮಹಾಬಲಯ್ಯ ಅಷ್ಟೊಂದು ದೂರವಿಲ್ಲದ ಬಯಲಿನಲ್ಲಿ ಕುಡಿಯಲ್ಲಿದ್ದ ಎರಡು ಮುಡಿ ಗದ್ದೆಗಳನ್ನು ಅವನಿಗೆ ಬೇಸಾಯಕ್ಕೆ ಕೊಟ್ಟರು. ಉಳುಮೆಗೆ ಒಂದು ಜತೆ ಕೋಣಗಳನ್ನು ಒದಗಿಸಿದರು. ಅವನಿಂದ ಗೇಣಿಚೀಟನ್ನು ಬರೆಯಿಸಿಕೊಂಡು, ಇರುವುದಕ್ಕೆ ಅದೇ ಬಯಲಿನ ಮಗ್ಗುಲ ಕಾಡಿನ ಸೆರಗಿನಲ್ಲಿದ್ದ ಹಳೆಯ ಒಂದು ಜೋಪಡಿಯನ್ನು ದುರಸ್ತಿ ಪಡಿಸಿ "ಇರಿ ಅಲ್ಲಿ ಸುಖವಾಗಿ" ಎಂದು ತಿಳಿಸಿದ್ದರು. ಕಾಲಕ್ಕೆ ಮುಂಚಿತವಾಗಿ ಬಂದ ಮಳೆಯನ್ನು ನೆನೆದು ಆತ, ತನಗೆ ಕೊಟ್ಟ ಗದ್ದೆಗಳನ್ನು ಈಗಾಗಲೇ ಹಸನು ಮಾಡಿಯೂ ಆಗಿತ್ತು ಆಗೇಡಿಗೆ ಒಂದಿಷ್ಟು ಬತ್ತವನ್ನು ಸಾಲ ಪಡೆದು ಬಿತ್ತಿಯೂ ಆಗಿತ್ತು.

ಅಂಥ ದಿನಗಳಲ್ಲಿ ಇದ್ದಕ್ಕಿದ್ದಂತೆಯೆ ರಾಯರು ಒಂದು ಮಧ್ಯಾಹ್ನ ಆತನನ್ನು ಕರೆದು "ನನ್ನದೊಂದು ಕಾಗದ ತೆಗೆದುಕೊಂಡು ಹೋಗಿ ಶಂಕರ ನಾರಾಯಣದ ಅನಂತ ಪೈಗಳಿಗೆ ಕೊಟ್ಟು, ನಾಳೆ ಮಧ್ಯಾಹ್ನದ ಒಳಗೆ ಬಂದು ಬಿಡು" ಎಂದು ಅಪ್ಪಣೆ ಮಾಡಿದರು. 'ಆಯಿತೆ'ಂದು ಆತ ಅಲ್ಲಿಂದ ಹೊರಟು ಕಣ್ಮರೆಯಾದ. ಅಷ್ಟು ಸಂಗತಿಯನ್ನು ನಾಗಪ್ಪಯ್ಯ ಕಣ್ಣಾರೆ ಕಂಡಿದ್ದಾನೆ. ಮರುದಿನ ಬೆಳಗ್ಗೆ ನಾಗಪ್ಪಯ್ಯ ಹಾಸಿಗೆಯಿಂದೆದ್ದು ಮುಖ ತೊಳೆದು ಯಾವುದೋ ಕೆಲಸವನ್ನು ನೆನೆದುಕೊಂಡು ರಾಯರನ್ನು ಹುಡುಕಿಹೋದರೆ ಮಹಾಬಲಯ್ಯನವರು ಮನೆಯಲ್ಲಿ ಎಲ್ಲಿಯೂ ಕಾಣಿಸಲಿಲ್ಲ. ತೋಟವನ್ನೆಲ್ಲ ಸುತ್ತಿದ; ಎಲ್ಲಿಯೂ ಕಾಣಿಸಲಿಲ್ಲ. 'ಯಜಮಾನರು ಕಾಣಿಸಲಿಲ್ಲ, ಎಲ್ಲಿಗೆ ಹೋದರು?' ಎಂದು ಒಬ್ಬಿಬ್ಬರನ್ನು ವಿಚಾರಿಸಿದ. ಅವರ ಸುದ್ದಿಯನ್ನು ತಿಳಿಸುವವರು ಸಿಗದಾಯಿತು. ಮಧ್ಯಾಹ್ನದ ತನಕ ಆತ ಕಾದರೂ, ಅವರು ಮನೆಗೆ ಬಾರದಿರುವುದನ್ನು ಕಂಡು ಗಾಬರಿಯಾಯಿತು. "ಇದೇನು ಮಲಾಮತಿ!" ಎಂದು ನೆನೆಯುತ್ತ, ನಾಲ್ಕು ಆಳುಗಳನ್ನು ಕರೆದು "ಒಂದಿಷ್ಟು ಆಚೆ, ಈಚೆ ಚೆನ್ನಾಗಿ ಹುಡುಕಿ ಬನ್ನಿ' ಎಂದಂದು ತಾನೂ ಅದೇ ಕೆಲಸಕ್ಕಾಗಿ ಹೊರಟ.

ಆಳುಗಳು ಎಷ್ಟು ಹುಡುಕಿದರೂ ಯಜಮಾನರ ಸುಳಿವು ಕಾಣಿಸಲಿಲ್ಲ. ಯಾರೂ, ಎಲ್ಲೂ, ತಾವು ಕಂಡಿದ್ದೇವೆ-ಎನ್ನುವವರಿಲ್ಲ. ಆಗ ನಾಗಪ್ಪಯ್ಯನಿಗೆ ಹಿಂದಣ ದಿನ ಕಳುಹಿಸಿದ ಆಳು ನಂದಿಯ ನೆನಪಾಯಿತು. ಆತ ಮರಳಿಬಂದ ಹಾಗೆಯೂ ಇಲ್ಲ. ನಾಗಪ್ಪಯ್ಯನಿಗೆ ಅನುಮಾನ ಬಂದು ತಾನೊಬ್ಬನೇ ಹೊರಟ, ಅದೇ ಹೊಸ ಒಕ್ಕಲಿನ ಮನೆಗೆ. ಮನೆಯ ಚಿಲಕವೂ ಹಾಕಿತ್ತು. ಆತನ ಹೆಂಡತಿ ಮನೆಯ ಸಮೀಪ ಎಲ್ಲಾದರೂ ಇರಬೇಕು-ಎಂದೆನಿಸಿ "ಯಾರೂ ಇಲ್ಲವೆ ಮನೆಯಲ್ಲಿ?" ಎಂದು, ನಾಲ್ಕು ಸುತ್ತು ಅಲೆದಾಡಿ, ಒದರಿದ. ಅಷ್ಟಕ್ಕೆ ಇನ್ನೊಬ್ಬ ಕೆಲಸದ ಆಳು

# ಧರ್ಮರಾಯನ ಸಂಸಾರ

ಅವನನ್ನು ಬಂದು ಕೂಡಿಕೊಂಡ. ಹೊಸ ಒಕ್ಕಲಿನ ಮನೆಯಲ್ಲಿಯೂ ಜನರಿಲ್ಲವೆಂದು ತಿಳಿದಾಗ ಅವನಿಗೆ 'ಅವರೂ ಓಡಿಹೋದರೋ ಇಷ್ಟರಲ್ಲಿ' ಎಂಬ ಅನುಮಾನ ಮೂಡಿತು. ಹೋಗಿ ಬಾಗಿಲ ಚಿಲಕವನ್ನು ತೆಗೆದರು. ಒಳಗೆ ನೋಡಿದರೆ ಎದೆ ಜಪ್ಪೆಂದಿತು. ಮಹಾಬಲಯ್ಯನವರ ನಗ್ನ ಶರೀರ ಅಲ್ಲಿ ಒಂದು ಕೊರಡಿನಂತೆ ಬಿದ್ದಿತ್ತು! ಅವರ ಬಾಯಿಗೆ ಅರಿವೆ ಜಡಿದಿತ್ತು. ಅವರು ಉಟ್ಟಿದ್ದ ಧೋತ್ರದ ಸೆರಗಿನಿಂದ, ಅವರ ಎರಡೂ ಕೈಗಳನ್ನು ಬಿಗಿದಿದ್ದರು. ಧೂಳಿನಲ್ಲಿ ಮಹಾಬಲಯ್ಯನ ಶರೀರ ಸಾಕಷ್ಟು ಹೊರಳಾಡಿದಂತೆ ಕಾಣಿಸುತ್ತಿತ್ತು. ಅವರ ಜೀವ ಹೋಗಿರಲಿಲ್ಲ; ಉಸಿರಾಡುತ್ತಿದೆ ಇನ್ನೂ. ಆದರೆ ಅವರಿಗೆ ಕೊಟ್ಟ ಹಿಂಸೆಯಿಂದ ಕೈಕಾಲುಗಳು ಸೆಟೆಯುತ್ತಿರುವುದು ಕಾಣಿಸುತ್ತಿತ್ತು. ಶರೀರದ ಮಧ್ಯಭಾಗ ಬತ್ತಲೆಯಾಗಿದ್ದು, ಅವರು ಅನುಭವಿಸಿರಬಹುದಾದ ಚಿತ್ರಹಿಂಸೆಯ ಕತೆಯನ್ನು ತಾನಾಗಿ ಹೇಳುತ್ತಿತ್ತು. ಮೈಯ ಮೇಲೆ ಅದರಿಂದ ಪ್ರಹರಿಸಿದ ದಡಿಕೆಗಳು ಅಷ್ಟೆಲ್ಲವನ್ನು ಕಂಡ ನಾಗಪ್ಪಯ್ಯನಿಗೆ ಉಳಿದ ಕತೆ ಬೆಳಕಿನಷ್ಟು ಸ್ಪಷ್ಟವಾಗಿ ಗೋಚರಿಸಿತು. ಅವನಿಗನಿಸಿದ್ದು ಹೀಗೆ-

ನಂದಿಯನ್ನು ಶಂಕರನಾರಾಯಣಕ್ಕೆ ಅವರು ಅಟ್ಟಿದ್ದು, ಅವನ ಹೆಂಡತಿಯನ್ನು ಸೇರುವುದಕ್ಕೆ. ಆ ಸುಳಿವು ಹತ್ತಿಯೇ ಆತ ಹೋಗದೇ ಉಳಿತು, ಹೆಂಡತಿಯನ್ನು ಬೇಟೆ ಪ್ರಾಣಿಯಂತೆ ಒಡ್ಡಿದ. ಆ ಜೋಸಿಗೆ ಬಂದು ಇವರು ಬಿದ್ದರು. ತಮ್ಮ ಸೇಡನ್ನು ತೀರಿಸಿ ತಕ್ಷಣವೇ ಊರನ್ನು ಬಿಟ್ಟು ರಾತ್ರೋರಾತ್ರಿ ಪರಾರಿಯಾಗಿರಬೇಕು.

ಹೆಚ್ಚಿನ ಯೋಚನೆಗೆ ಅಲ್ಲಿ ಅವಕಾಶವಿರಲಿಲ್ಲ. ಅವರ ಬಾಯಿಗೆ ತುರುಕಿದ ಅರಿವೆಯನ್ನು ತೆಗೆದು, ಕೈಯ ಕಟ್ಟನ್ನು ಸಡಲಿಸಿ, ನೋಡಬಾರದ ಅಂಗಗಳಿಗೆ ವಸ್ತ್ರ ಹೊದಿಸಿದರು. ಅವರನ್ನು ಅವಸರದಿಂದ ಮನೆಗೆ ಮೊದಲು ಸಾಗಿಸಿದರು. ನಾಗಪ್ಪಯ್ಯನ ಯೋಜನೆ-ಮಂಚಲಿನಲ್ಲಿ ಅವರನ್ನು ಹೊರಿಸಿ ಶಂಕರ ನಾರಾಯಣದಲ್ಲಿರುವ ಆಸ್ಪತ್ರೆಗೆ ಸಾಗಿಸುವುದೆಂದು. "ದಮ್ಮಯ್ಯ ಅದೊಂದು ಮಾಡಬೇಡಿ. ನಾನು ಇಲ್ಲಿಯೇ ಸತ್ತರೂ ಚಿಂತೆಯಿಲ್ಲ" ಎಂದು ಬಲು ಪ್ರಯಾಸಪಟ್ಟು ಒರಲಿದರು. ಕೊನೆಗೆ ಹಾದಾರಿಯಲ್ಲಿದ್ದ ಒಬ್ಬ ನಾಟಿ ವೈದ್ಯರನ್ನು ಕರೆಯಿಸಿ ಅವರ ಮರ್ದಿತ ಶರೀರಕ್ಕೆ ಎಣ್ಣೆ ಹಚ್ಚಿ ಉಪಚಾರ ಮಾಡಿದರು. ಆ ಸಂಜೆಯೊಳಗೆ ಅವರ ದೇಹದಲ್ಲಿ ವಿಪರೀತ ಜ್ವರ ಬೇಯತೊಡಗಿತು. ಆಮೇಲೆ ಉಸಿರಾಡುತ್ತ ಅವರು ಬದುಕಿದ್ದುದು ಒಂದೆರಡು ದಿನ ಮಾತ್ರ.....

●

## ದಾಖಲೆಯ ಬಾಲಕ

**ಕಾ**ರ್ಲ್ ಕೂಪರ್ ಎಂಬ ಇಂಗ್ಲೆಂಡಿನ ಏಳು ವರ್ಷದ ಬಾಲಕ ಸ್ಕೇಟಿಂಗ್‌ನಲ್ಲಿ ಪ್ರಪಂಚದಲ್ಲಿಯೇ ಪ್ರಥಮಸ್ಥಾನ ಪಡೆದಿದ್ದು ಅತ್ಯಂತ ಆಶ್ಚರ್ಯಕರ. ಮೂರು ವರ್ಷದವನಿದ್ದಾಗಲೇ ತಂದೆಯ ಮಾರ್ಗದರ್ಶನದಲ್ಲಿ ಸ್ಕೇಟಿಂಗ್ ಅಭ್ಯಾಸ ಮಾಡಿದ ಕೂಪರ್ ಆ ಎಳೆಯ ವಯಸ್ಸಿನಲ್ಲಿಯೇ ಮಂಜು ತುಂಬಿದ ಪರ್ವತಗಳಲ್ಲಿ ಗಂಟೆಗೆ ೬೦ ಕಿ.ಮೀ. ವೇಗದಲ್ಲಿ ಸ್ಕೇಟಿಂಗ್ ಮಾಡಿ ಇತಿಹಾಸ ಸೃಷ್ಟಿಸಿದ್ದಾನೆ. ಈ ಏಳು ವರ್ಷದ ವಯಸ್ಸಿನಲ್ಲಿ ೨೦ ಪದಕಗಳನ್ನು ಪಡೆದುಕೊಂಡ ಕೂಪರ್ ಯು.ಎಸ್. ನ್ಯಾಷನಲ್ ಚಾಂಪಿಯನ್‌ಶಿಪ್, ಕೊಲರಾಡೋ ಸ್ಟೇಟ್ ಚಾಂಪಿಯನ್‌ಶಿಪ್‌ನಲ್ಲಿ ಭಾಗವಹಿಸಿ ಫಲಿತಾಂಶವನ್ನು ತನ್ನ ಕಡೆಗೆ ಸೆಳೆದುಕೊಂಡಿದ್ದಾನೆ. ಇಂಗ್ಲೆಂಡಿನ ಡ್ರೈವ್-ಲೈನ್ ಟ್ರಾವೆಲ್ ಕಂಪೆನಿಯು ಈತನ ಸಾಧನೆಗೆ ಪ್ರತಿಫಲವಾಗಿ ಶಿಕ್ಷಣದ ನಿಮಿತ್ತ ಪ್ರತಿವರ್ಷ ೫ ಸಾವಿರ ಪೌಂಡುಗಳನ್ನು ಕಾಣಿಕೆಯಾಗಿ ನೀಡುತ್ತಿದೆ.

**• ಎಚ್. ಆರ್. ವಷ್ಪದ**



# ಯಾವ ರೋಗಕ್ಕೆ ಯಾವ ಆಹಾರ?

## ಆಯುರ್ವೇದ ಸಲಹೆ:

ಡಾ. ಕೆ.ಜಿ.ಅರಳೀಕಾಯಿ

ವಿವಿಧ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ ಸಿದ್ಧಪಡಿಸಿದ ಈ ಲೇಖನವನ್ನು ಖ್ಯಾತ ಆಯುರ್ವೇದ ತಜ್ಞ ಡಾ. ಧನ್ಯಕುಮಾರ

## ಆರೋಗ್ಯದಂಗಳ

'ಕೆಟ್ಟ ಹೊಟ್ಟೆ'ಗಾಗಿಯೆ ತಾನೆ ನಾವೆಲ್ಲ ಇಷ್ಟು ಕಷ್ಟಪಡುವುದು? ಆದರೆ ಇವೇ ಪದಗಳನ್ನು ತಿರುವು ಮುರುವಾಗಿಟ್ಟರೆ ಅಥವಾ 'ಹೊಟ್ಟೆ ಕೆಟ್ಟ'ರೆ? ಆರೋಗ್ಯದಲ್ಲಿನ ಏರು ಪೇರನ್ನು ನಮ್ಮಲ್ಲಿ ಸಾಮಾನ್ಯವಾಗಿ "ಹೊಟ್ಟೆ ಕೆಟ್ಟಿದೆ" ಎಂದೇ ಗುರುತಿಸುತ್ತೇವೆ.ಕೆಟ್ಟ ಹೊಟ್ಟೆಯನ್ನು ಸಮಗೊಳಿಸುವಂಥ ಕ್ರಮಗಳನ್ನೇ ಗೃಹ ಚಿಕಿತ್ಸೆಯಾಗಿ ಅನಾದಿಕಾಲದಿಂದಲೂ ರೂಢಿಸಿಕೊಂಡು ಬಂದಿರುವ ದೇಶ ನಮ್ಮದು.

ಅಸ್ವಾಸ್ಥ್ಯಕ್ಕೂ ಸ್ವಾಸ್ಥ್ಯಕ್ಕೂ ನಡುವೆ ಬಹಳ ಅಂತರವೇನಿಲ್ಲ. 'ಅ' ಎಂಬ ಅಕ್ಷರವೇ ಇಲ್ಲಿ ಅವಘಡಕ್ಕೆ ಕಾರಣವಾಗುತ್ತದೆ. ಇದು ನಾವಾಗಿಯೇ ಆಮಂತ್ರಿಸಿಕೊಳ್ಳುವ ಆಪತ್ತು. ಅಸ್ವಾಸ್ಥ್ಯಕ್ಕೂ ಆಹಾರಕ್ರಮಕ್ಕೂ ಇರುವ ಅವಿನಾಭಾವ ಸಂಬಂಧವನ್ನಿದು ಸೂಚಿಸುತ್ತದೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ತಪ್ಪಾದ ಆಹಾರ ಕ್ರಮದಿಂದಲೇ ನಮ್ಮ ಶರೀರದಲ್ಲಿ ವಾತ, ಪಿತ್ತ ಮತ್ತು ಕಫಗಳ (ಇವು ಮೂರೂ ರೋಗಗಳ ಮೂಲ ಬೇರುಗಳು) ಸಂತುಲನದಲ್ಲಿ ಏರುಪೇರಾಗಿ ನಮ್ಮನ್ನು ತರಹ ತರಹದ ರೋಗಗಳು ಆಕ್ರಮಿಸಿಕೊಂಡು ಬಿಡುತ್ತವೆ. ಗಾಬರಿಗೀಡಾಗಿ ಡಾಕ್ಟರರ ಬಳಿಯೋ ವೈದ್ಯರ ಬಾಗಿಲಿಗೋ ಓಡುತ್ತೇವೆ. ಅವರ ಸಲಹೆಯಂತೆ ಸರಿಯಾದ ಔಷಧಿ ಆಹಾರಕ್ರಮ (ಪಥ್ಯಕ್ರಮ) ಅನುಸರಿಸಿ ಮತ್ತೆ ಮೊದಲಿನಂತಾಗುವ ಯತ್ನಕ್ಕಿಳಿಯುತ್ತೇವೆ.

ಪ್ರತಿಯೊಬ್ಬನಿಗೂ ಯಾವ ಆಹಾರ ಸೇವನೆಯಿಂದ ಶರೀರದಲ್ಲಿನ ವಾತ, ಪಿತ್ತ ಮತ್ತು ಕಫಗಳ ಪ್ರಮಾಣದಲ್ಲಿ ಇಳಿತ ಇಲ್ಲವೆ ಏರಿಕೆಗಳೇ ಮುಂತಾದ ಪರಿಣಾಮಗಳುಂಟಾಗುತ್ತವೆ ಎಂಬ ಬಗೆಗಿನ ತಿಳಿವಳಿಕೆ ಇರಬೇಕಾದ್ದು ಅತ್ಯವಶ್ಯ. ಆದ್ದರಿಂದ ಇಲ್ಲಿ ವಾತ, ಪಿತ್ತ ಮತ್ತು ಕಫಗಳೆಂದರೆ ಏನೆಂಬ ವಿವರಗಳನ್ನೂ ಅವುಗಳ ಏರುಪೇರಿನಿಂದಾಗುವ ರೋಗಾದಿಗಳ ವಿವರಗಳನ್ನೂ ಹಾಗೂ ರೋಗ ಪರಿಹಾರಕ್ಕೆ ಅನುಸರಿಸಬೇಕಾದ ಪಥ್ಯಕ್ರಮವನ್ನೂ ನೀಡಿದ್ದೇವೆ. ನಿಮಗಾಗಿ ಪ್ರತ್ಯೇಕವಾದ ಆಹಾರ ಕೋಷ್ಟಕವನ್ನೇ ತಯಾರಿಸಿಕೊಟ್ಟಿದ್ದೇವೆ.

ಹಾಂ, ನಾಲಿಗೆಯೇನೋ ರುಚಿಯಾದುದನ್ನೇ ಬಯಸುತ್ತದೆ. ಆದರೆ ಹಾಗೆಂದು ಅದು ಒಳಗೆ ಕಳಿಸುತ್ತ ಹೋಗುವುದನ್ನೆಲ್ಲ ಹೊಟ್ಟೆ ಒಪ್ಪಬೇಕಲ್ಲ? ಹೊಟ್ಟೆ ಒಪ್ಪುವಂಥದು ಏನು ಎಂಬುದನ್ನು ಅರಿತುಕೊಂಡರೆ ಒಪ್ಪವಾಗಿ ಬಾಳಬಹುದು!

• ಸಂಪಾದಕ



ಆಧುನಿಕ ಔಷಧ ವಿಜ್ಞಾನದ ಸಮರ್ಥಕರು ಒಪ್ಪಲಿ ಬಿಡಲಿ, ಆಯುರ್ವೇದ ಮಾತ್ರ ಸಾವಿರಾರು ವರ್ಷಗಳಿಗೂ ಮೊದಲಿನಿಂದ "ಎಲ್ಲ ರೋಗಗಳಿಗೂ ಮೂಲ ಕಾರಣ ವಾತ, ಪಿತ್ತ ಮತ್ತು ಕಫ" ಎಂಬುದನ್ನು ಸಾರುತ್ತಲೇ ಬಂದಿದೆ. ಈ ಮೂರರ ಸಮತೋಲನವೆ ಸ್ವಾಸ್ಥ್ಯ: ಅಸಮತೋಲನವೇ ಅಸ್ವಾಸ್ಥ್ಯ.

### ಮನುಷ್ಯನ ಪ್ರಕೃತಿ ಅಂದರೇನು?

"ಅದು ನನ್ನ ಪ್ರಕೃತಿಗೆ ಒಗ್ಗುವುದಿಲ್ಲ" "ಇದು ಅವನ ಪ್ರಕೃತಿಗೆ ಆಗುವುದಿಲ್ಲ" ಎಂದು ಮುಂತಾಗಿ ಹೇಳುವುದನ್ನು ಪದೇ ಪದೇ ಕೇಳುತ್ತಿರುತ್ತೇವೆ. ಕೆಲವರಿಗೆ ತಂಪು ಪದಾರ್ಥ ಸೇವನೆಯಿಂದ ಕೂಡಲೇ ಶೀತ ಬಾಧಿಸಿದರೆ ಇನ್ನು ಕೆಲವರಿಗೆ ಬಿಸಿ ಇಲ್ಲವೆ ಗರಮ್ ಆದಂಥವುಗಳ ಸೇವನೆ ಪಿತ್ತ ಹೆಚ್ಚಿಸುತ್ತದೆ. ಪ್ರತಿಯೊಬ್ಬನಿಗೂ ಒಂದಿಲ್ಲೊಂದು ಆಹಾರ ಪದಾರ್ಥ ಆರೋಗ್ಯದ ಮೇಲೆ ಪ್ರಭಾವ ಬೀರುತ್ತದೆ. ವೈದ್ಯರು ಆಯಾ ವ್ಯಕ್ತಿಯ

'ಪ್ರಕೃತಿ'ಯನ್ನು ಗಮನದಲ್ಲಿಟ್ಟುಕೊಂಡೇ ಚಿಕಿತ್ಸೆ ನೀಡುತ್ತಾರೆ. ಕುಶಲ ವೈದ್ಯನಂತೂ ವ್ಯಕ್ತಿಯ ವ್ಯವಹಾರ, ದುಡಿಮೆ ಎಂಥದು, ಆತನ ಆಹಾರ ಕ್ರಮ ಏನು ಎಂಬುದನ್ನಲ್ಲದೆ ಶರೀರದ ಆಕೃತಿ ಮನೋವ್ಯಾಪಾರವನ್ನು ಗಮನದಲ್ಲಿರಿಸಿಕೊಂಡು ಆತ ವಾತ ಪ್ರಕೃತಿಯವನೋ, ಪಿತ್ತ ಪ್ರಕೃತಿಯವನೋ ಅಥವಾ ಕಫ ಪ್ರಕೃತಿಯವನೋ ಎಂಬುದನ್ನು ಅರಿತು ಚಿಕಿತ್ಸಿಸುತ್ತಾರೆ.

ಗರ್ಭೋತ್ಪತ್ತಿ ಕಾಲದಲ್ಲಿ ಪುರುಷನ ಶುಕ್ರ ಹಾಗು ಸ್ತ್ರೀಯ ಶೋಣಿತಗಳು ಒಂದು ವಿಶಿಷ್ಟ ಪ್ರಮಾಣದಲ್ಲಿ ಸಂಯುಕ್ತಗೊಳ್ಳುವುದರಿಂದ ಉತ್ಪನ್ನವಾಗುವ ತನು-ಮನಗಳ ಗುಣ ಸ್ವಭಾವಗಳಿಗೆ ಪ್ರಕೃತಿ ಎನ್ನುವರು. ಪ್ರತಿಯೊಬ್ಬ ಮಾನವನ ಪ್ರಕೃತಿ ಭಿನ್ನಭಿನ್ನವಾಗಿರುತ್ತದೆ. ಆಕಾರ, ವರ್ಣ, ಸ್ವಭಾವ, ರೀತಿ-ನೀತಿಗಳಲ್ಲೆಲ್ಲ ವಿಭಿನ್ನತೆಯನ್ನು ಕಾಣುವಂತೆ ಆಹಾರಕ್ರಮ, ನಿದ್ರೆ, ಒಗ್ಗುವಿಕೆ ಹಾಗು ಒಗ್ಗದಿರುವಿಕೆಗಳು, ರೋಗ ಕ್ಷಮತ್ವ ಮುಂತಾದ ವಿಷಯಗಳಲ್ಲೂ ಪ್ರತ್ಯೇಕತೆಯನ್ನು ಕಾಣುತ್ತೇವೆ. ಇದಕ್ಕೆಲ್ಲ ಕಾರಣ ಅವರವರು ಪಡೆದುಕೊಂಡು ಬಂದ 'ಪ್ರಕೃತಿ' ಒಂದೆಡೆ ಕಾರಣವೆನಿಸಿದರೆ ಅವರು ರೂಢಿಸಿಕೊಂಡು ಬಂದ ಆಹಾರ-ವಿಹಾರ ಪದ್ಧತಿಗಳು ಇರುವ ಪರಿಸರ, ಹವಾಮಾನ, ವೃತ್ತಿ ಮುಂತಾದ ಅಂಶಗಳೂ ಕೆಲ ಮಟ್ಟಿಗೆ ಕಾರಣವೆನಿಸುತ್ತವೆ.

ತ್ರಿದೋಷಗಳು ಸಮಪ್ರಮಾಣದಲ್ಲಿ ಒಂದುಗೂಡಿದ್ದರೆ ಸಮ ಪ್ರಕೃತಿ ಉಂಟಾಗುತ್ತದೆ. ಇದೇ 'ಶ್ರೇಷ್ಠ ಪ್ರಕೃತಿ' ಎನಿಸಲ್ಪಡುತ್ತದೆ.

## ಧಾತು ಮತ್ತು ತ್ರಿದೋಷ

ಶರೀರದಲ್ಲಿ ವಾತ, ಪಿತ್ತ ಮತ್ತು ಕಫಗಳ ಸಂತುಲಿತ ರೂಪವನ್ನೇ ಆಯುರ್ವೇದ 'ತ್ರಿಧಾತು'ವೆಂದು ಕರೆದಿದೆ. ಈ ಧಾತುಗಳಿಗೆ ಪೂರಕವಾಗಿ ಕಾರ್ಯ ಮಾಡುವ ಏಳು ಇತರ ಧಾತುಗಳಿವೆ. ಇವುಗಳಿಗೆ ದೂಷ್ಯಗಳೆಂದು ಕರೆದಿದ್ದಾರೆ. ವಾತ, ಪಿತ್ತ ಹಾಗು ಕಫಗಳಿಗೆ ಶಾಸ್ತ್ರದಲ್ಲಿ ವ್ಯವಹಾರಿಕವಾಗಿ ತೊಂದರೆಯಾಗದಿರಲೆಂದು 'ದೋಷ'ಗಳೆಂದೇ ಕರೆಯಲಾಗಿದೆ. ಇದು ಏಳು ಪ್ರಕಾರದ್ದು: ರಸ, ರಕ್ತ, ಮಾಂಸ, ಮೇದಸ್, ಅಸ್ಥಿ, ಮಜ್ಜಾ ಮತ್ತು ಶುಕ್ರ (ಸ್ತ್ರೀಯರಲ್ಲಿ ಬೀಜಾಣು ಹಾಗೂ ಪುರುಷರಲ್ಲಿ ಶುಕ್ರಾಣು) ಈ ಏಳೂ ಧಾತುಗಳು ಸರಿಯಾಗಿ ಶರೀರದ ಪೋಷಣೆಗೈಯುತ್ತವೆ. ಒಂದು ವೇಳೆ ಇದರಲ್ಲೇನಾದರೂ ಹೆಚ್ಚು ಕಡಿಮೆಯಾದರೆ ಅದೇ 'ದೋಷ' ಎಂದು ಕರೆಯಲ್ಪಡುತ್ತದೆ.

'ಧಾರಣಾತ್ ಧಾತವಃ' ಎಂದರೆ ಶರೀರ ಧಾರಣೆಯನ್ನು ಮಾಡುವಂಥವುಗಳು. ಈ ವಾತ, ಪಿತ್ತ ಹಾಗೂ ಕಫಗಳು ಸಮಸ್ಥಿತಿಯಲ್ಲಿದ್ದು ಶರೀರದ ಧಾರಣೆ ಮಾಡಿದರೆ ಅದಕ್ಕೆ 'ಧಾತು' ಎಂದು ಕರೆಯಲ್ಪಡುವವು.

## ವಾತ, ಪಿತ್ತ ಮತ್ತು ಕಫದ ಸಂರಚನೆ

ಮನುಷ್ಯ ಶರೀರ ಪಂಚತತ್ವ (ಪೃಥ್ವಿ, ಜಲ, ವಾಯು, ಅಗ್ನಿ ಮತ್ತು ಆಕಾಶ) ಗಳಿಂದೊಡಗೂಡಿ ರಚಿಸಲ್ಪಟ್ಟಂಥದ್ದು. ಈ ಆಧಾರದ ಮೇಲೆ ವಾತವು ವಾಯು ಹಾಗೂ ಆಕಾಶದಿಂದ; ಪಿತ್ತವು ಅಗ್ನಿಯಿಂದ ಮತ್ತು ಕಫವು ಜಲ ಹಾಗೂ ಪೃಥ್ವಿಯಿಂದ ನಿರ್ಮಿಸಲ್ಪಟ್ಟದ್ದೆಂದು ಪರಿಗಣಿಸಲಾಗಿದೆ.

## ತ್ರಿದೋಷ ಶಾಂತಿ ಹೇಗೆ?

ರಸಗಳು ಆರು ಪ್ರಕಾರದವು: ೧, ಮಧುರ, ೨. ಆಮ್ಲ, ೩. ಲವಣ ೪. ಕಟು ೫.

ತಿಕ್ತ, ಮತ್ತು ೬. ಕಷಾಯ.

ಆಯಾ ವಿಶೇಷ ರಸಯುಕ್ತ ಆಹಾರಪದಾರ್ಥಗಳ ಹೆಚ್ಚು ಸೇವನೆಯನ್ನು ಮಾಡದಿರುವುದು ಅತ್ಯಂತ ಸರಳ ಹಾಗೂ ಪ್ರಾಥಮಿಕ ಉಪಾಯ. ತನ್ಮೂಲಕ ನಮ್ಮ ಶರೀರದ ಧಾತುಗಳಲ್ಲಿ (ವಾತ, ಪಿತ್ತ, ಕಫ) ದೋಷಗಳು ಉಂಟಾಗದಿರುವಂತೆ ಅಥವಾ ನಮ್ಮ ಶರೀರದಲ್ಲಿ ರೋಗ ಉತ್ಪನ್ನವಾಗದಿರುವಂತೆ ಎಚ್ಚರಿಕೆ ವಹಿಸಬಹುದು. ಈ ಮೊದಲೇ ಹೇಳಿರುವಂತೆ ಜತೆಯಲ್ಲಿ ಕೊಟ್ಟಿರುವ ಆಹಾರ ಕೋಷ್ಟಕವನ್ನು ಗಮನಿಸಿ. ತದನುಸಾರದ ಭೋಜನದಿಂದ ನಿಮ್ಮ ರೋಗ ದೂರ ಓಡುತ್ತದೆ. ಅಷ್ಟೇ ಅಲ್ಲ, ನೀವು ಸ್ವಸ್ಥರಾಗಿದ್ದರಂತೂ ಆ ಸ್ಥಿತಿಯನ್ನು ನಿರಂತರವಾಗಿಡಲಿಕ್ಕೆ ಅದು ಅನುವಾಗುತ್ತದೆ. ಇದರೊಂದಿಗೆ ದಿನಚರಿಯಲ್ಲೂ ಅಲ್ಪಸ್ವಲ್ಪ ಬದಲಾವಣೆಯನ್ನು ಮಾಡಿಕೊಳ್ಳುವುದವಶ್ಯ.

**ವಾತ ಪ್ರಕೋಪದಿಂದ ಉಂಟಾಗುವ ಪ್ರಮುಖ ರೋಗಗಳು:** ಸುಮಾರು ೮೦ ರೀತಿಯ ತೊಂದರೆಗಳನ್ನು ಆಯುರ್ವೇದ ಪಟ್ಟಿ ಮಾಡಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಗ್ಯಾಸ್ ತೊಂದರೆ, ಆಮವಾತ, ಸಂಧಿವಾತ, ಸಂದುಶೂಲೆ, ತಲೆಭಾರ, ತಲೆನೋವು, ಹೊಟ್ಟೆ ಭಾರವಾದಂತೆನಿಸುವಿಕೆ, ಮಲಬದ್ಧತೆ, ಮಲದ್ವಾರದ ಉರಿತ, ಶರೀರದ ಯಾವುದೇ ಭಾಗದಲ್ಲಿ ಆಕಸ್ಮಿಕವಾಗಿ ನೋವುಂಟಾಗುವುದು, ಚರ್ಮ ಒಣಗುವಿಕೆ, ಬಾಯಿ ಒಣಗುವಿಕೆ, ಬಿಕ್ಕಳಿಕೆ, ಸೊಂಟನೋವು, ಎದೆನೋವು, ಲಕ್ವಾ, ಬೆರಳು ಸಂದುಗಳಲ್ಲಿ ನೋವು, ಆಲಸ್ಯ, ಮಲ-ಮೂತ್ರ ಹಾಗೂ ಮಾಸಿಕ ಧರ್ಮವಲ್ಲದೆ ವೀರ್ಯಸ್ಖಲನ ಸಂಬಂಧಿ ತೊಂದರೆಗಳು, ರುಚಿಹೀನತೆ, ಕಿವುಡುತನ, ಮೈ ನಡುಕ, ಬೆನ್ನು ಮೂಳೆ ಬಿಗಿತ, ಇಡೀ ಶರೀರ ಜೋಮು ಹಿಡಿದಂತಾಗುವುದು ಇತ್ಯಾದಿ.

**ಪಿತ್ತಪ್ರಕೋಪದಿಂದ ಉಂಟಾಗುವ ಪ್ರಮುಖ ರೋಗಗಳು:** ಪಿತ್ತ ಪ್ರಕೋಪದಿಂದ ಸುಮಾರು ೪೦ ನಮೂನೆಯ ರೋಗಗಳು ಬರುತ್ತವೆ. ಅಮ್ಲ-ಪಿತ್ತ ಅಥವಾ ಆ್ಯಸಿಡಿಟಿ, ಕಮರುದೇಗು, ಹುಳಿದೇಗು, ಬಾಯಿಯ ರುಚಿ ಕಹಿಯೆನಿಸುವುದು, ಎದೆ ಮತ್ತು ಹೊಟ್ಟೆಯಲ್ಲಿ ಉರಿ, ವಾಂತಿಯ ಅನಿಸಿಕೆ, ವಾಂತಿಯಾಗುವಿಕೆ, ತಲೆನೋವು, ಜ್ವರ, ಬಾಯಿ ಮತ್ತು ನಾಲಿಗೆಯಲ್ಲಿ ಹುಗುಳಾಗುವುದು, ಪಿತ್ತಾಶಯದಲ್ಲಿ ಹರಳಾಗುವುದು, ಹೊಟ್ಟೆ ಭಾರವಾದಂತೆನಿಸುವುದು, ಹಸಿವೆಯಾಗದಿರುವಿಕೆ, ತೆಳುವಾಗಿ ಹೊಟ್ಟೆ ಜಾಡಿಸುವಿಕೆ, ಮಲದ್ವಾರದಲ್ಲಿ ಉರಿ, ಕಣ್ಣಿನ ಕಾಂತಿ ಕಡಿಮೆಯಾಗುವುದು, ತ್ವಚೆಯ ಮೇಲೆ ತರಹ ತರಹದ ಗುಳ್ಳೆ-ಬೊಕ್ಕೆಗಳೇಳುವುದು, ಗಾದರಿ (ದದ್ದು) ಏಳುವದು, ಕೀವು ಗುಳ್ಳೆ ಏಳುವುದು, ಹೃದಯದಲ್ಲಿ ಉರಿತ ಹಾಗೂ ನೋವು, ಹಳದಿ ಮೂತ್ರ, ಕರುಳಿನಲ್ಲಿ ಹುಣ್ಣುಗಳಾಗುವುದು, ಶರೀರದಲ್ಲಿ ತಾಪಮಾನ ಇಳಿದಂತಾಗುವುದು, ಸುಸ್ತು, ಅಶಕ್ತಿ ಮುಂತಾದವುಗಳು ಅವುಗಳಲ್ಲಿ ಮುಖ್ಯ.

**ಕಫಸಂಬಂಧಿ ಜಾಡ್ಯಗಳು:** ಕಫವು ಕುಪಿತಗೊಳ್ಳುವುದರಿಂದ ಸುಮಾರು ೨೦ ಬಗೆಯ ಜಾಡ್ಯಗಳು ಬರುತ್ತವೆಂದು ಆಯುರ್ವೇದವು ಪಟ್ಟಿಮಾಡಿದೆ. ಶರೀರ ಭಾರವಾದಂತೆನಿಸುವಿಕೆ, ಹಸಿವೆ ಹೆಚ್ಚಾಗಿ ಆಗದಿರುವಿಕೆ, ಬಾಯಲ್ಲಿ ಸಿಹಿ-ಸಿಹಿಯಾದಂಥ ರುಚಿ ಇರುವಿಕೆ, ಅತಿ ನಿದ್ರೆ-ಅತ್ಯಾಲಸ್ಯ ಜ್ವರ-ಶೀತ-ಕೆಮ್ಮು ಶ್ವಾಸಕಾಸ ಪುಪ್ಪುಸಗಳಲ್ಲಿ ತೊಂದರೆ, ದಮ್ಮು ತಲೆಭಾರ, ಶರೀರದಲ್ಲಿ ಬಿಗಿತ, ಶರೀರದ ತೂಕ ಮತ್ತು ಸ್ಥೂಲತೆ ಹೆಚ್ಚಾಗುವುದು, ಲೈಂಗಿಕ ವ್ಯಾಧಿಗಳು, ಸೈನಸ್, ಮೂಗು, ಕಿವಿ ಮತ್ತು ಕಣ್ಣಿಗೆ ಸಂಬಂಧಿಸಿದ ರೋಗಗಳ ತೊಂದರೆಯುಂಟಾಗುತ್ತದೆಂದು ಹೇಳಲಾಗಿದೆ.

ತ್ರಿದೋಷಗಳ ಬಗ್ಗೆ ವಿವರ ತಿಳಿದ ಮೇಲೆ ಇನ್ನೂ ಒಂದೆರಡು ವಿಶೇಷ ಅಂಶಗಳ ಬಗ್ಗೆ ನಿಮ್ಮ ಗಮನ ಸೆಳೆಯುತ್ತಿದ್ದೇವೆ.

೧. ಯಾವೊಬ್ಬನಲ್ಲಿ ವಾತ, ಪಿತ್ತ ಮತ್ತು ಕಫಗಳ ಪೈಕಿ ಯಾವುದೇ ಎರಡು ಪ್ರಮುಖವಾಗಿರಲೂಬಹುದಾಗಿದೆ. ಇಂಥ ಸ್ಥಿತಿಯಲ್ಲಿ ಅವುಗಳೆರಡರೊಂದಿಗೂ ಸಂಬಂಧವಿರಬಹುದಾದ ಒಳ್ಳೆಯ ಹಾಗೂ ಕೆಟ್ಟ ಪರಿಣಾಮಗಳು ಕಂಡುಬರಬಹುದು.

೨. ಶರೀರದಲ್ಲಿ ವಾತ, ಪಿತ್ತ ಮತ್ತು ಕಫ ಈ ಮೂರರ ಸ್ಥಿತಿಯೂ ಏಕಕಾಲಕ್ಕೆ ಬಿಗಡಾಯಿಸಿದರೆ ಅದನ್ನು 'ಸನ್ನಿಪಾತ'ವೆಂದು ಕರೆಯಲಾಗುತ್ತದೆ.

## ವಾತ, ಪಿತ್ತ, ಕಫ ಪ್ರಕೋಪದಿಂದ ಪಾರಾಗಲು....

೧. ವಾತ ರೋಗಿಗಳು ತಮ್ಮ ಪಚನಕ್ರಿಯೆಯನ್ನು ಸುಧಾರಿಸಿಕೊಳ್ಳುವತ್ತ ಹೆಚ್ಚು ಲಕ್ಷ್ಯವೀಯಬೇಕು. ಅದೆಂದಿಗೂ ಕುಂಠಿತಗೊಳ್ಳದಂತೆ ನೋಡಿಕೊಳ್ಳಬೇಕು. ಇಂಥವರು ಹೆಚ್ಚು ಹೊತ್ತಿನವರೆಗೆ ಖಾಲಿ ಹೊಟ್ಟೆಯಿಂದಿರುವುದಾಗಲಿ ರಾತ್ರಿ ಬಹಳ ಹೊತ್ತಿನ ತನಕ ಎಚ್ಚರವಿರುವುದಾಗಲಿ ಸಲ್ಲದು. ಮುಂಜಾನೆ ಬಹಳ ಹೊತ್ತಿನ ವರೆಗೆ ಮಲಗಿಕೊಂಡೇ ಇರುವುದನ್ನೂ ಬಿಡಬೇಕು. ಹಗಲಿನಲ್ಲಿ ಎಂಟು ಹತ್ತು ಗ್ಲಾಸು ನೀರು ಕುಡಿಯುವುದವಶ್ಯ ಹೆಚ್ಚು ತಣ್ಣಗಿನ, ಒಣದಾದ, ಜಡವಾದ ಇಲ್ಲವೆ ತಂಗಳು ಆಹಾರವನ್ನು ಸೇವಿಸಬಾರದು. ಹಾಗೆಯೆ ಮದ್ಯ, ಧೂಮಪಾನಗಳಿಂದ ದೂರವಿರುವುದೂ ವಿಹಿತ.

೨. ಪಿತ್ತ ರೋಗಿಗಳು ಖಾರ, ಮಸಾಲೆಯುಕ್ತ, ಕಹಿಯಾದ ಹಾಗೂ ಬಿಸಿಬಿಸಿಯಾದ ಆಹಾರ ಪದಾರ್ಥಗಳನ್ನು ಸೇವಿಸಬಾರದು. ಮದ್ಯ, ಧೂಮಪಾನಗಳತ್ತ ಲಕ್ಷ್ಯ ಹಾಕದಿರುವುದು ಕ್ಷೇಮ. ಉಷ್ಣ ವಾತಾವರಣ, ಪ್ರಖರ ಬಿಸಿಲಿನಿಂದ ರಕ್ಷಿಸಿಕೊಳ್ಳುವುದು ಉತ್ತಮ. ರಾತ್ರಿ ಬಹಳ ಹೊತ್ತಿನ ತನಕ ಎಚ್ಚರವಿರಲೇಬಾರದು. ಈರ್ಷ್ಯೆ, ಕೋಪಗಳನ್ನು ಬಿಟ್ಟುಕೊಟ್ಟು ಶಾಂತಚಿತ್ತರಾಗಿರುವುದನ್ನು ರೂಢಿಸಿಕೊಳ್ಳಬೇಕು. ಖಾಲಿ ಹೊಟ್ಟೆಯಿಂದ ಚಹ-ಕಾಫಿ ಸೇವನೆ ಇಂಥವರಿಗೆ ನಿಷಿದ್ಧ.

೩. ಕಫದ ರೋಗಿಗಳು ಮರಳಿಸಿದ ನೀರು ಕುಡಿಯಬೇಕು. ಬಿಸಿ ನೀರಿನ ಸ್ನಾನವೇ ಇವರಿಗೆ ಸೂಕ್ತ. ಗಂಟಲಿನಲ್ಲಿ ಕಫ ಕುಳಿತರೆ ಇಲ್ಲವೆ ಅಲ್ಲಿ ನೋವುಂಟಾದರೆ ಬಿಸಿನೀರಿನಲ್ಲಿ ಉಪ್ಪು ಸೇರಿಸಿ ಮುಕ್ಕಳಿಸಬೇಕು ರಾತ್ರಿ ಬಹು ಹೊತ್ತಿನ ಮೇಲೆ ಊಟ ಮಾಡಕೂಡದು. ರಾತ್ರಿಯ ಊಟ ಹಗುರವಾಗಿದ್ದಷ್ಟೂ ಒಳಿತು. ತಂಪಾದ ವಾತಾವರಣದಿಂದ ದೂರವೇ ಇರಬೇಕು, ರಾತ್ರಿ ಜಾಗರಣೆ ಕೂಡದು. ಹಗಲುನಿದ್ದೆ ಹಾಗೂ ಮುಂಜಾನೆ ಹೊತ್ತಾಗಿ ಏಳುವ ಅಭ್ಯಾಸಗಳನ್ನು ಬಿಟ್ಟುಕೊಡಬೇಕು.

ಮುಂದಿನ ಪುಟಗಳಲ್ಲಿ ನಿಮಗಾಗಿ ಆಹಾರ ಕೋಷ್ಟಕವನ್ನು ಆಯುರ್ವೇದ ಶಾಸ್ತ್ರಕ್ಕನು ಸಾರವಾಗಿ ವಿಶೇಷವಾಗಿ ರೂಪಿಸಿಕೊಟ್ಟಿದ್ದೇವೆ. ಅದು ನಿಮ್ಮ ಆರೋಗ್ಯವನ್ನು ಕಾಪಾಡಲು ನೆರವಾದರೆ ನಮಗೆ ಸಂತೋಷ.

ಹಾಂ, ಪ್ರತಿಯೊಂದು 'ದೋಷ' ಹೆಚ್ಚಿಸುವಂಥವನ್ನು ಊರ್ಧ್ವಮುಖಿ ಬಾಣದ ಗುರುತಿನಿಂದ ಹಾಗೂ 'ದೋಷ'ವನ್ನು ಸಂತುಲನದಲ್ಲಿಡುವಂಥವನ್ನು ಅಧೋಮುಖಿ ಬಾಣದ ಗುರುತಿನಿಂದ ತೋರಿಸಲಾಗಿದೆ ಎಂಬುದನ್ನು ದಯವಿಟ್ಟು ಗಮನಿಸಿ.

## ಹಣ್ಣು-ಹಂಪಲು

### ವಾತ

▲

ಸೇಬು,
ಪೇರಳೆ ಹಣ್ಣು (ಸೀಬೆ ಹಣ್ಣು),
ದಾಳಿಂಬೆ,
ಕರಬೂಜ,
ದೀಪದ್ರಾಕ್ಷಿ
ಉತ್ತತ್ತಿ
ಬೋರೆ ಹಣ್ಣು
ಹಾಗೂ ಇನ್ನಿತರ ಎಲ್ಲಾ
ಶುಷ್ಕ ಫಲಗಳು.

▼

ಸಕ್ಕರೆ ಬಾದಾಮು,
ಬಾಳೆಹಣ್ಣು, ಕಲ್ಲಂಗಡಿ,
ಚೆರಿ, ಹಸಿಕೊಬ್ಬರಿ,
ನೆನೆಸಿದ ದೀಪದ್ರಾಕ್ಷಿ
ಖರ್ಜೂರ, ಅಂಜೂರ,
ದ್ರಾಕ್ಷಿ, ಸ್ಟ್ರಾಬೆರಿ,
ನಿಂಬೆ, ನೇರಳೆ ಹಣ್ಣು
ಮಾವಿನ ಹಣ್ಣು, ಕಿತ್ತಳೆ,
ಪಪಾಯಿ, ಪೀಚ್ ಹಣ್ಣು
ಅನಾನಸ, ಬಿಲ್ವದ ಕಾಯಿ,
ಬೇಲದ ಹಣ್ಣು, ಕವಳಿಹಣ್ಣು
ಪಕ್ವ ಹಲಸು, ಪಕ್ವವಾದ
ಹಿಪ್ಪು ನೇರಳೆ ಹಣ್ಣು
ಪಕ್ವ ದ್ರಾಕ್ಷಿ
ಮುಂತಾದ ಎಲ್ಲಾ
ರಸಭರಿತ ಸಿಹಿ ಹಣ್ಣುಗಳು.

### ಪಿತ್ತ

▲

ಬಾಳೆ ಹಣ್ಣು
ನಿಂಬೆಹಣ್ಣು
ಹೆಚ್ಚು ಪ್ರಮಾಣದಲ್ಲಿ ನೇರಳೆ ಹಣ್ಣು
ಪಪ್ಪಾಯಿ ಹಣ್ಣು
ಪೀಚ್ ಹಣ್ಣು, ಸ್ಟ್ರಾಬೆರಿ,
ತರಬೂಜ
ಹಾಗೂ
ಇನ್ನಿತರ ಎಲ್ಲಾ
ಹುಳಿ-ಒಗರು ಫಲಗಳು.

▼

ಸೇಬು,
ಸಕ್ಕರೆ ಬಾದಾಮು,
ಅನಾನಸ, ಹಸಿಕೊಬ್ಬರಿ,
ಖರ್ಜೂರ, ಅಂಜೂರ,
ಕಲ್ಲಂಗಡಿ ಹಣ್ಣು
ದ್ರಾಕ್ಷಿ, ದೀಪದ್ರಾಕ್ಷಿ
ಕರಬೂಜ, ಕಿತ್ತಳೆ,
ಪೇರಳೆ ಹಣ್ಣು
ದಾಳಿಂಬೆ, ಬೇಲದ ಹಣ್ಣು
ಪಕ್ವವಾದ ಹಲಸಿನ ಹಣ್ಣು, ಪಕ್ವವಾದ ಹಿಪ್ಪು
ನೇರಳೆ ಹಣ್ಣು
(ಬಾದಾಮಿಯಂಥ) ಆಲೂಬಾ ಹಣ್ಣು
ಮಾವಿನ ಹಣ್ಣು
ರಸಭರಿತ ಸಿಹಿ ಫಲಗಳು.

|  ಕಫ |  |
|---|---|
| ಬಾಳೆಹಣ್ಣು, | ಸೇಬು, |
| ಹಸಿಕೊಬ್ಬರಿ, | ಸಕ್ಕರೆ ಬಾದಾಮು, |
| ಖರ್ಜೂರ, | ಚೆರಿ, ಒಣ ಅಂಜೂರ, |
| ತಾಜಾ ಅಂಜೂರ, | ಮಾವಿನ ಹಣ್ಣು, ಪೀಚ್ ಹಣ್ಣು ದೀಪದ್ರಾಕ್ಷಿ, |
| ಸೌತೆಹಣ್ಣು, | ಸ್ಟ್ರಾಬೆರಿ, |
| ತರಬೂಜ, ದ್ರಾಕ್ಷಿ, | ಕರಬೂಜ, |
| ನಿಂಬೆ ಹಣ್ಣು, | ಅಪಕ್ವ ಬಿಲ್ವದ ಹಣ್ಣು, |
| ನೇರಳೆ ಹಣ್ಣು, | ಕವಳಿ ಹಣ್ಣು, |
| ಕಲ್ಲಂಗಡಿ ಹಣ್ಣು, | ಪೇರಳೆ ಹಣ್ಣು |
| ಕಿತ್ತಳೆ ಹಣ್ಣು, | ಮುಂತಾದವು. |
| (ಬಾದಾಮಿಯಂಥ) ಆಲೂಬಾ ಹಣ್ಣು, | |
| ಪಪಾಯಿ, ಅನಾನಸ, | |
| ಪಕ್ವವಾದ ಹಲಸಿನ ಹಣ್ಣು, | |
| ಪಕ್ವವಾದ ದ್ರಾಕ್ಷಿ, | |
| ಹಾಗೂ | |
| ಇನ್ನಿತರ ಎಲ್ಲಾ | |
| ಹುಳಿ-ಒಗರು ಫಲಗಳು. | |

## ತರಕಾರಿಗಳು

|  ವಾತ |  |
|---|---|
| ಎಲೆಕೋಸು (ಕ್ಯಾಬೇಜು), | ಸಿಹಿಕಂದ (ಬೀಟ್‌ರೂಟು), |
| ಗಜ್ಜರಿ, ವಟಾಣಿ, | ಗಜ್ಜರಿ (ಹೆರೆದದ್ದು), |
| ಬದನೆಕಾಯಿ, | ಬೇಯಿಸಿದ ಕುಂಬಳಕಾಯಿ, |
| ಹಸಿರು ಸೊಪ್ಪುಗಳು, | ಮೂಲಂಗಿ, |
| ಅಣಬೆ, ಹಸಿ ಈರುಳ್ಳಿ, | ಮೆಂಥ್ಯದ ಸೊಪ್ಪು, |
| ಪಾಲಕ್, ಬಿಳಿ ಬಟಾಟೆ, | ಅವರೆಕಾಯಿ-ಬೇಯಿಸಿದ್ದು (ಬೀನ್ಸ್) |
| ಹೂಕೋಸು (ಕಾಲಿಫ್ಲಾವರ್), | ಆಲಿವ್ ಕಾಯಿ (ಹಸಿರು-ಕರಿ), |
| ಟೊಮೇಟೋ, | ಈರುಳ್ಳಿ (ಬೇಯಿಸಿದ-ಕರಿದ), |
| ಮೊಳಕೆಬಂದ ಕಾಳುಗಳು, | ಸವತೆಕಾಯಿ, ಗೆಣಸು, |
| ತೊಂಡೆಕಾಯಿ, | ಹಾಗೂ |
| ಮೂಲಂಗಿಕಾಯಿ, | ಇನ್ನಿತರ ಎಲ್ಲಾ |
| ಎಲ್ಲಾ ಶೈತ್ಯೀಕರಿಸಿದ | ಬೇಯಿಸಿದ ತರಕಾರಿಗಳು. |
| ಒಣ ಇಲ್ಲವೆ ಹಸಿ | |
| ತರಕಾರಿಗಳು. | |

**ಪಿತ್ತ**



ಸಿಹಿಕಂದ (ಬೀಟ್‌ರೂಟು),
ಟೋಮೇಟೋ,
ಗಜ್ಜರಿ, ಬದನೆಕಾಯಿ,
ಮೆಂಥ್ಯದ ಸೊಪ್ಪು,
ಮೂಲಂಗಿ, ಬಳ್ಳೊಳ್ಳಿ,
ಪಾಲಕ್, ನುಗ್ಗೇಕಾಯಿ,
ಕುಂಬಳಕಾಯಿ,
ನವಲಕೋಲು,
ಸಾಸಿವೆ ಪಲ್ಯ (ಎಲೆ),
ಹಸಿ ಈರುಳ್ಳಿ,
ಹಾಗೂ
ಇತರ ಎಲ್ಲಾ
ಖಾರ ಮತ್ತು ಉಗ್ರ ರುಚಿಯ
ಕಾಯಿ-ಪಲ್ಯಗಳು.



ಎಲೆಕೋಸು (ಕ್ಯಾಬೇಜು),
ಹೂಕೋಸು (ಕಾಲಿಫ್ಲಾವರ್),
ಬೆಂಡೆಕಾಯಿ, ಬಿಳಿ ಬಟಾಟೆ,
ವಟಾಣೆ,
ಹಾಗೂ
ಇನ್ನಿತರ ಎಲ್ಲಾ
ಸಿಹಿ ಹಾಗೂ ಕಟುರುಚಿಯ
ಸೊಪ್ಪುಗಳು.

**ಕಫ**



ಗೆಣಸು,
ಕುಂಬಳಕಾಯಿ,
ಟೊಮೇಟೋ,
ಮತ್ತು
ಇನ್ನಿತರ ಎಲ್ಲಾ
ಸಿಹಿ ಹಾಗೂ ರಸಪೂರ್ಣ
ತರಕಾರಿಗಳು.



ಗಜ್ಜರಿ, ಬೆಂಡೆಕಾಯಿ,
ಹೂಕೋಸು (ಕಾಲಿಫ್ಲಾವರ್)
ಎಲೆ ಕೋಸು (ಕ್ಯಾಬೇಜು),
ನವಲಕೋಲು, ಬದನೆಕಾಯಿ,
ಈರುಳ್ಳಿ, ಮೆಂಥ್ಯದ ಸೊಪ್ಪು
ಹಸಿರು ಅವರೆ, ಬಳ್ಳೊಳ್ಳಿ,
ವಟಾಣೆ, ಮೂಲಂಗಿ,
ಚವಳಿಕಾಯಿ,
ಹಾಗಲಕಾಯಿ, ಪಾಲಕ್,
ಮೂಲಂಗಿಕಾಯಿ,
ಹಾಗೂ
ಇನ್ನಿತರ ಎಲ್ಲಾ
ತೀಕ್ಷ್ಣ ಕಟುರುಚಿಯ
ಹಸಿರು ಸೊಪ್ಪಿನ ಪಲ್ಯಗಳು.

## ಧವಸ ಧಾನ್ಯಗಳು

**ವಾತ**



ಜವೆಗೋದಿ, ಜವೆಗೋದಿಯ ತವಡು,



ಗೋದಿ;

ದೊಡ್ಡ ಗೋದಿ (ಮಿತಿಗಿಂತ ಹೆಚ್ಚು),
ತಾಜಾ ಗೋವಿನ ಜೋಳ,
ಜೋಳ, ಸಜ್ಜೆ
ಹಾಗೂ
ಇನ್ನಿತರ
ಶೈತ್ಯೀಕರಿಸಿದ, ಒಣ ಮತ್ತು
ಹುರಿದ ಅರಳು.

ಜವೆಗೋದಿ (ಬೇಯಿಸಿದ್ದು,
ಚಪಾತಿ ಇತ್ಯಾದಿ ಮೂಲಕ)
ಹಾಗೂ
ಎಲ್ಲ ಬಗೆಯ
ಅಕ್ಕಿ ತಳಿಗಳು.

 **ಪಿತ್ತ** 

ಹೊಸ ಗೋದಿ,
ಗೋವಿನ ಜೋಳ,
ಗೋದಿಯ ತವಡು,
ಜೋಳ,
ಗೋದಿ (ಒಣಗಿದ್ದು),

ಗೋದಿ,
ಜವೆಗೋದಿ (ಅಡಿಗೆಮಾಡಿದ್ದು),
ಅಕ್ಕಿ (ಬಾಸ್ಮತಿ),
ಅಕ್ಕಿ (ಬಿಳಿ),
ತಾಜಾ ಗೋವಿನ ಜೋಳ.

 **ಕಫ** 

ಜವೆ ಗೋದಿ (ಅಡಿಗೆ ಮಾಡಿದ್ದು),
ಅಕ್ಕಿ (ಕೆಂಪು ಹಾಗೂ ಬಿಳಿ),
ಗೋದಿ.

ತಾಜಾ ಗೋವಿನ ಜೋಳ,
ಹೊಸ ಗೋದಿ,
ಗೋದಿಯ ತವಡು,
ಅಕ್ಕಿ (ಬಾಸಮತಿ, ಕಡಿಮೆ
ಪ್ರಮಾಣದಲ್ಲಿ ಲವಂಗ ಹಾಕಿ
ಬೇಯಿಸಿದ್ದು)

## ದ್ವಿದಳ ಧಾನ್ಯಗಳು

 **ವಾತ** 

ಕಡ್ಲೆ ಬೇಳೆ,
ಕರಿ ಕಡಲೆ,
ಕಾಡು ಹೆಸರು,
ಚನ್ನಂಗಿ ಬೇಳೆ,
ಸೋಯಾಬೀನ್,
ಸೋಯಾ ಹಿಟ್ಟು,
ಸೋಯಾ ರವೆ.

ಅವರೆ,
ಕರಿ ಚೆನ್ನಂಗಿ,
ಹೆಸರು ಬೇಳೆ,
ಉದ್ದು
ಕೇಸರಿ ಬೇಳೆ,
ಸೋಯಾ ಗಿಣ್ಣು,
ಸೋಯಾ ಹಾಲು,
ತೊಗರಿ ಬೇಳೆ.

 **ಪಿತ್ತ** 

ಕರಿ ಚನ್ನಂಗಿ,

ಕರಿ ಅವರೆ, ಹೆಸರು,

## ಆರೋಗ್ಯದಂಗಳ

ಕೇಸರಿ ಬೇಳೆ,
ತೊಗರಿ.

ಕಡಲೆ ಬೇಳೆ, ಕರಿ ಕಡಲೆ,
ಸಾಮಾನ್ಯ ಚೆನ್ನಂಗಿ,
ವಟಾಣಿ, ಸೋಯಾ ಅವರೆ,
ಸೋಯಾ ಗಿಣ್ಣ,
ಸೋಯಾ ರವೆ,
ಸೋಯಾ ಹಿಟ್ಟು,
ಸೋಯಾ ಹಾಲು.

 **ಕಫ** 

ಕರಿ ಚೆನ್ನಂಗಿ,
ಮೊಳಕೆ ಬಂದ ಹೆಸರು ಕಾಳು,
ಕಾಡು ಹೆಸರು,
ಚೆನ್ನಂಗಿ, ಸೋಯಾ ಅವರೆ,
ಸೋಯಾ ಹಿಟ್ಟು,
ಸೋಯಾ ರವೆ.

ಕರಿ ವಟಾಣಿ,
ಕಡಲೆ ಬೇಳೆ,
ಕರಿ ಕಡಲೆ,
ಕೇಸರಿ ಬೇಳೆ,
ತೊಗರಿ ಬೇಳೆ.

## ಕಡುಕವಚದ ಫಲಗಳು

 **ವಾತ** 

ಬಾದಾಮು, ಗೋಡಂಬಿ,
ಕರಿ ಅಖರೋಟು,
ಗುಡ್ಡದ ಬಾದಾಮು,
ತೆಂಗಿನ ಕಾಯಿ,
ಪಿಸ್ತಾ,
ಇಂಗ್ಲೀಷ್ ಅಖರೋಟು,
ಶೇಂಗಾ.

 **ಪಿತ್ತ** 

ಬಾದಾಮು,
ಕರಿ ಅಖರೋಟು,
ಗೋಡಂಬಿ,
ಇಂಗ್ಲೀಷ್ ಅಖರೋಟು,
ಶೇಂಗಾ,
ಪಿಸ್ತಾ.

ತೆಂಗಿನ ಕಾಯಿ.

 **ಕಫ** 

ಬಾದಾಮು,

ಪಿಸ್ತಾ,
ಶೇಂಗಾ,
ಕರಿ ಅಖರೋಟು,
ಗೋಡಂಬಿ,
ತೆಂಗಿನಕಾಯಿ,
ಇಂಗ್ಲೀಷ್ ಅಖರೋಟು.

## ಬೀಜಗಳು

| ▲ | | ▼ |
|---|---|---|
| | **ವಾತ** | ಎಳ್ಳು,<br>ಸೂರ್ಯಪಾಸ |
| ಎಳ್ಳು | **ಪಿತ್ತ** | ಸೂರ್ಯಪಾನ. |
| ಎಳ್ಳು, | **ಕಫ** | ಸೂರ್ಯಪಾನ. |

## ಶರ್ಕರ ಪ್ರಧಾನ ಪಾನೀಯಗಳು

| ▲ | | ▼ |
|---|---|---|
| ಬಿಳಿ ಸಕ್ಕರೆ. | **ವಾತ** | ಬಾರ್ಲಿ, ರಾಗಿ ಕಷಾಯ,<br>ಅಕ್ಕಿಯ ಗಂಜಿ,<br>ಕಬ್ಬಿನ ರಸ, ಸಕ್ಕರೆಯ ಪಾನಕ,<br>ಮೇಪಲ್ ರಸ,<br>ಜೇನುತುಪ್ಪ,<br>ಬೆಲ್ಲದ ನೀರು,<br>ಬಹುತೇಕ ಹಣ್ಣುಗಳ<br>ರಸಗಳು. |
| ಜೇನು ತುಪ್ಪ,<br>ಬೆಲ್ಲದ ಪಾನಕ,<br>ಸಕ್ಕರೆಯ. ಪಾನಕ | **ಪಿತ್ತ** | ಬಾರ್ಲಿ, ರಾಗಿ ಕಷಾಯ,<br>ಅಕ್ಕಿಯ ಗಂಜಿ,<br>ಕಬ್ಬಿನ ರಸ,<br>ಬಿಳಿ ಸಕ್ಕರೆಯ ನೀರು. |
| ಬಾರ್ಲಿ ನೀರು, | **ಕಫ** | ಶುದ್ಧೀಕರಿಸದ ಜೇನುತುಪ್ಪ, |

ಅಕ್ಕಿಯ ಗಂಜಿ,
ಕಬ್ಬಿನ ರಸ,
ಬೆಲ್ಲದ ನೀರು,
ಸಕ್ಕರೆಯ ಪಾನಕ,
ಬಿಳಿ ಸಕ್ಕರೆಯ ನೀರು.

ಹಣ್ಣುಗಳ ರಸ,
(ವಿಶೇಷವಾಗಿ
ಸೇಬು ಹಣ್ಣಿನದು)

## ಮಸಾಲೆ ವಸ್ತುಗಳು

### ವಾತ



ಮೆಣಸಿನ ಕಾಯಿ,
ಒಣಶುಂಠಿ,
ಹಸಿ ಈರುಳ್ಳಿ,
ಸಾಸಿವೆ,
ಕರಿಬೇವಿನ ಎಲೆ.



ಕರಿ ಮೆಣಸು,
ಕರಿ ಎಳ್ಳು,
ದಾಲಚಿನ್ನಿ,
ಕೊತ್ತಂಬರಿ,
ಬಳ್ಳೊಳ್ಳಿ, ಹಸಿಶುಂಠಿ,
ಒಣ ಶುಂಠಿ,
ಪುದೀನ ಎಲೆ,
ಬಾದಾಮು ಪುಡಿ,
ಅಜಿವಾನ (ಓಮಕಾಳು),
ಕೇಶರ, ಈರುಳ್ಳಿ (ಬೇಯಿಸಿದ್ದು),
ಒಣಗಿಸಿದ ಮಾವಿನ ಹೋಳು,
ಇಂಗು,
ಕಿತ್ತಳೆಗಿಡದ ತೊಗಟೆ,
ತುಳಸಿ, ಅರಿಷಿಣ,
ಖಸಖಸಿ, ಲವಂಗ,
ಜಾಪತ್ರೆ, ಶಹಜೀರಿಗೆ,
ಹುಣಸೆ ಹಣ್ಣು,
ಯಾಲಕ್ಕಿ.

### ಪಿತ್ತ



ಕರಿ ಎಳ್ಳು,
ಕರಿ ಮೆಣಸು,
ಬೆಳ್ಳುಳ್ಳಿ, ಶುಂಠಿ,
ಸಾಸಿವೆ, ಬದಾಮುಪುಡಿ,
ಒಣಗಿಸಿದ ಮಾವಿನ ಹೋಳು,
ಇಂಗು,
ಹುಣಸೆಹಣ್ಣು
ತುಳಸಿ,



ಕೇಶರ,
ಹವೀಜ (ಕೊತ್ತಂಬರಿ ಬೀಜ),
ಶಹಜೀರಿಗೆ,
ತಾಜಾ ತುಳಸಿ ಎಲೆ,
ಹಸಿ ಈರುಳ್ಳಿ,
ಯಾಲಕ್ಕಿ
ದಾಲಚಿನ್ನಿ,
ಬಡೆಸೊಪ್ಪು,

ಅಜಿವಾನ (ಓಮಕಾಳು)
ಲವಂಗ, ಜಾಪತ್ರೆ,
ಜಾಜಿಕಾಯಿ,
ಒಣಮೆಣಸಿನಕಾಯಿ,
ಹಿಪ್ಪಲಿ,
ಖಸಖಸಿ.

ಪುದೀನಾ,
ಕರಿಬೇವಿನ ಎಲೆ,
ಕಿತ್ತಳೆ ಗಿಡದ
ತೊಗಟೆ.

**ಕಫ**

▲

ಕರಿ ಎಳ್ಳು ಕಾಳು,
ಬಾದಾಮು ಪುಡಿ,
ಒಣಗಿಸಿದ ಮಾವಿನ ಹೋಳು,
ಹುಣಸೆ ಹಣ್ಣು.

▼

ಕರಿ ಮೆಣಸು,
ಒಣ ಮೆಣಸಿನ ಕಾಯಿ,
ಹವೀಜ, ಬೆಳ್ಳುಳ್ಳಿ,
ಕಿತ್ತಳೆ ಗಿಡದ ತೊಗಟೆ,
ಒಣ ಶುಂಠಿ,
ಪುದೀನಾ ಎಲೆ,
ಸಾಸಿವೆ, ಇಂಗು,
ಈರುಳ್ಳಿ,
ಶಹಜೀರಿಗೆ,
ಅಜಿವಾನ, ಯಾಲಕ್ಕಿ
ತುಳಸಿ, ಖಸಖಸಿ,
ಕೇಶರ, ದಾಲಚಿನ್ನಿ,
ಲವಂಗ, ಅರಿಷಿಣ,
ಜಾಪತ್ರೆ, ಜಾಜಿಕಾಯಿ,
ಕರಿಬೇವಿನ ಎಲೆ,
ಹಿಪ್ಪಲಿ.

## ದುಗ್ಧ ಮತ್ತು ದುಗ್ಧಜನ್ಯ ಪದಾರ್ಥಗಳು

**ವಾತ**

▲

ಆಡಿನ ಹಾಲು
(ಪಾಶ್ಚೀಕರಿಸಿದ್ದು)

▼

ಕಡಿಮೆ ಪ್ರಮಾಣದಲ್ಲಿ ಎಲ್ಲಾ ದುಗ್ಧ
ಪದಾರ್ಥಗಳು ಅಡ್ಡಿಯಿಲ್ಲ! ಮಜ್ಜಿಗೆ,
ಆಕಳ ಹಾಲು,
ಗಟ್ಟಿ ಪನೀರ್, ಮೆದು
ಪನೀರ್, ಮೊಸರು,
ಆಡಿನ ಹಾಲು (ನೀರು ಸೇರಿಸಿ),
ಐಸ್‌ಕ್ರೀಮ್,
ಹುಳಿ ಕೆನೆ, ತುಪ್ಪ.

**ಪಿತ್ತ**

| ▲ | ▼ |
| --- | --- |
| ಉಪ್ಪು ಸಹಿತ ಬೆಣ್ಣೆ | ಉಪ್ಪಿಲ್ಲದ ಬೆಣ್ಣೆ |
| ಮಜ್ಜಿಗೆ, | ತುಪ್ಪ, ಮನೆಯಲ್ಲಿ |
| ಗಟ್ಟಿ ಪನೀರ್, | ಮಾಡಿದ ಪನೀರ್, |
| ಹೆಚ್ಚು ನೆಣವುಳ್ಳ ಗಿಣ್ಣ | ಆಕಳ ಹಾಲು, |
| ಹುಳಿ ಮೊಸರು. | ಆಡಿನ ಹಾಲು, |
| | ಐಸ್‌ಕ್ರಿಮ್, |
| | ನೀರು ಸೇರಿಸಿದ ಮೊಸರು. |

**ಕಫ**

| ▲ | ▼ |
| --- | --- |
| ಬೆಣ್ಣೆ | ಆಡಿನ ಹಾಲು, |
| ಎಲ್ಲ ರೀತಿಯ ಪನೀರ್, | ಮಜ್ಜಿಗೆ, |
| ಎಮ್ಮೆಯ ಹಾಲು, | ಆಕಳ ತುಪ್ಪ. |
| ಐಸ್‌ಕ್ರೀಮ್, | |
| ಹುಳಿ ಮೊಸರು, | |
| ನೀರು ಸೇರಿಸದ ಮೊಸರು. | |

## ಖಾದ್ಯ ತೈಲಗಳು

**ವಾತ**

| ▲ | ▼ |
| --- | --- |
| | ಎಲ್ಲ ತೈಲಗಳೂ ಅಡ್ಡಿಯಿಲ್ಲ. |
| | ವಿಶೇಷವಾಗಿ ಎಳ್ಳೆಣ್ಣೆ. |

**ಪಿತ್ತ**

| ▲ | ▼ |
| --- | --- |
| ಶೇಂಗಾ ಎಣ್ಣೆ | ಕೊಬ್ಬರಿ ಎಣ್ಣೆ |
| ಬಾದಾಮು ಎಣ್ಣೆ | ಎಳ್ಳೆಣ್ಣೆ |
| ಸಕ್ಕರೆ ಬಾದಾಮು ಎಣ್ಣೆ | ಅಖರೋಟದ ಎಣ್ಣೆ |
| ಗೋವಿನ ಜೋಳದ ಎಣ್ಣೆ | ಆಲಿವ್ ಎಣ್ಣೆ. |
| ಕುಸುಬೆ ಎಣ್ಣೆ | |
| ಎಳ್ಳೆಣ್ಣೆ | |

**ಕಫ**

| ▲ | ▼ |
| --- | --- |
| ಕೊಬ್ಬರಿ ಎಣ್ಣೆ | ಬಾದಾಮು ಎಣ್ಣೆ |
| ಆಲಿವ್ ಎಣ್ಣೆ | ಸೂರ್ಯಪಾನದ ಎಣ್ಣೆ |
| ಕುಸುಬೆ ಎಣ್ಣೆ | (ಎಲ್ಲ ಎಣ್ಣೆಗಳೂ |
| ಎಳ್ಳೆಣ್ಣೆ | ಕಡಿಮೆ ಪ್ರಮಾಣದಲ್ಲಿ.) |
| ಅಖರೋಟದ ಎಣ್ಣೆ. | |

## ಇತರ ಪೇಯಗಳು

### ▲ ವಾತ ▼

▲
ಸೇಬಿನ ರಸ,
ತಣ್ಣಗಿನ ಹಾಲು ಸೇರಿಸಿದ
ಪೇಯಗಳು,
ಅಂಜೂರದ ರಸ,
ಬರ್ಫ್ ಹಾಕಿದ
ತಣ್ಣನೆಯ ಪೇಯಗಳು,
ದ್ರಾಕ್ಷಿ ರಸ,
ಕಡು ಚಹ,
ಮೂಲಿಕೆ ಮಿಶ್ರಿತ ಚಹ,
ಅಲ್ಫಾಲ್ಫಾ ಹುಲ್ಲಿನ ಚಹ,
ಗೋದಿಯ ಚಹ,
ನೇರಳೆ ಹಣ್ಣಿನ ರಸ,
ಇತ್ಯಾದಿ.

▼
ಮದ್ಯ, ಬಾದಾಮು,
ಸಕ್ಕರೆ ಬಾದಾಮು ರಸ,
ಗಜ್ಜರಿಯ ರಸ,
ಗಜ್ಜರಿ-ಶುಂಠಿಯ ರಸ,
ಚೆರಿ ರಸ,
ಎಳೆನೀರು, ಬಿಸಿ ಹಾಲು
ಸೇರಿಸಿದ ಪೇಯಗಳು,
ದ್ರಾಕ್ಷಿ ರಸ, ಕಾಫಿ,
ಚಕ್ಕೋತ ಹಣ್ಣಿನ ರಸ,
ಮಾವಿನ ಹಣ್ಣಿನ ರಸ,
ಹಸಿರು ತರಕಾರಿ ರಸಗಳು,
ಬಿಸಿಯಾದ ಮಸಾಲೆ ಹಾಲು,
ಕಿತ್ತಳೆ ರಸ,

### ▲ ಪಿತ್ತ ▼

▲
ಮದ್ಯ, ಕಾಫಿ,
ಚಹ,
ಗಜ್ಜರಿಯ ರಸ,
ಗಜ್ಜರಿ-ಶುಂಠಿಯ ರಸ,
ಚಕ್ಕೋತ ಹಣ್ಣಿನ ರಸ,
ಅತಿ ಉಪ್ಪಿನ ಪೇಯಗಳು,
ಬರ್ಫ್ ಹಾಕಿದ ತಣ್ಣಗಿನ ಪೇಯಗಳು,
ಕಿತ್ತಳೆ ಹಣ್ಣಿನ ರಸ,
ಪಪ್ಪಾಯಿ ಹಣ್ಣಿನ ರಸ,
ಟೊಮೇಟೋ ರಸ,
ಗಿಡ ಮೂಲಿಕೆ ಮಿಶ್ರಿತ ಚಹ,
ಅಜವಾನ ಕುದಿಸಿದ ನೀರು,
ದಾಲಚಿನ್ನಿ ಕುದಿಸಿದ ನೀರು, ಲವಂಗ
ಕುದಿಸಿದ ನೀರು,
ತಾಜಾ ಶುಂಠಿ ಕುದಿಸಿದ ನೀರು,
ಮೆಂಥ್ಯ ಕುದಿಸಿದ ನೀರು.

▼
ಸೇಬಿನ ರಸ,
ಸಕ್ಕರೆ ಬಾದಾಮು ರಸ,
ಎಳೆ ನೀರು,
ದ್ರಾಕ್ಷಿ ರಸ,
ತಣ್ಣಗಿನ ಹಾಲು ಬೆರೆಸಿದ
ಪೇಯಗಳು,
ದಾಳಿಂಬೆ ರಸ,
ಆಡಿನ ಹಾಲು,
ಸ್ಟ್ರಾಬೆರಿ ರಸ,
ಸೋಯಾ ಹಾಲು,
ನಿಂಬೆ ರಸ,
ಕೇಶರದ ರಸ,
ಪುದೀನಾ ರಸ,
ಕಿತ್ತಳೆ ಗಿಡದ ತೊಗಟೆ
ಹಾಕಿ ಕುದಿಸಿದ ನೀರು

### ▲ ಕಫ ▼

▲
ಪಪ್ಪಾಯಿ ಹಣ್ಣಿನ ರಸ,

▼
ಸ್ಟ್ರಾಬೆರಿ ಎಲೆಯ ರಸ,

ಬಾಳೆ ಹಣ್ಣಿನ ಶರಬತ್ತು,
ಚಕ್ಕೋತ ಹಣ್ಣಿನ ರಸ,
ಅತಿ ಉಪ್ಪಾದ ಪೇಯಗಳು,
ತಣ್ಣಗಿನ ಹಾಲು ಸೇರಿಸಿದ
ಪೇಯಗಳು,
ಬರ್ಫ್ ಹಾಕಿದ ತಣ್ಣಗಿನ
ಪೇಯಗಳು, ಹುಳಿ ಹಣ್ಣಿನ ರಸಗಳು,
ಚಹ,
ಗಿಡಮೂಲಿಕೆ ಮಿಶ್ರಿತ ಚಹ,
ಕಿತ್ತಳೆ ರಸ,
ಖರ್ಜೂರ ರಸ,
ಟೊಮೇಟೋ ರಸ,
ಇತ್ಯಾದಿ.

ಸೇಬಿನ ರಸ,
ಸಕ್ಕರೆ ಬಾದಾಮು ರಸ,
ನೇರಳೆ ರಸ,
ಮಾವಿನ ಹಣ್ಣಿನ ರಸ,
ಬಿಸಿಯಾದ ಮಸಾಲೆಯುಕ್ತ
ಪೇಯಗಳು,
ಗಜ್ಜರಿಯ ರಸ,
ಗಜ್ಜರಿ-ಶುಂಠಿಯ ರಸ,
ದ್ರಾಕ್ಷಿಯ ರಸ,
ಚೆರಿ ರಸ (ಹುಳಿಯಾ
ಗಿರದಿದ್ದರೆ ಮಾತ್ರ),


ವಾತ


ಪಿತ್ತ


ಕಫ

ಒಂದು ಪಾಲು ಯಾವುದೇ ರಸದಲ್ಲಿ ಅಷ್ಟೇ ಪಾಲು ನೀರು ಸೇರಿಸಿ ಕುಡಿಯುವುದರಿಂದ ಅದು ಶರೀರದಲ್ಲಿ ಕಫದ ಸಮತೋಲನವನ್ನು ಕಾಯ್ದುಕೊಂಡು ಹೋಗಲು ಸಹಾಯಕವಾಗುತ್ತದೆ. ●

ಆಹಾರದ ವಿಷಯವಾಗಿ ಹೆಚ್ಚಿನ ಮಾಹಿತಿಯನ್ನು ಪಡೆಯಲು ಓದಿರಿ-
**'ಆಯುರ್ವೇದಿಯ ಆಹಾರ ವಿಜ್ಞಾನ'** ಲೇಖಕರು- **ಡಾ. ಧನ್ಯಕುಮಾರ ಇಜಾರಿ**
ಬೆಲೆ ರೂ. ೧೮, ಪದ್ಮಶ್ರೀ ಪ್ರಕಾಶನ, ಕೆ.ಎಚ್.ಬಿ-೨೧ ಅರವಿಂದ ನಗರ-
ಹುಬ್ಬಳ್ಳಿ- ೫೮೦೦೨೫

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**
**Registered with the Registrar of Newspaper for India under No. 3633/57.**




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ಸಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಷಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -”- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -”- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -”- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -”- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -”- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -”- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -”- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -”- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

